# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು - ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ತಿಪ್ಪೇರುದ್ರ ಪ್ರಭಣ್ಣ

ಮಾರ್ಗದರ್ಶಕರು

ಡಾ. ಸಾಂಬಮೂರ್ತಿ

ಪ್ರಾಧ್ಯಾಪಕರು,

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

**ತಿಪ್ಪೇರುದ್ರ ಪ್ರಭಣ್ಣ**





ಮಾರ್ಗದರ್ಶಕರು

**ಡಾ. ಸಾಂಬಮೂರ್ತಿ**

ಪ್ರಾಧ್ಯಾಪಕರು

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ





**ಕನ್ನಡ ಭಾಷಾಧ್ಯಯನ ವಿಭಾಗ**

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೮

## ಮಾರ್ಗದರ್ಶಕರ ಪ್ರಮಾಣ ಪತ್ರ

ತಿಪ್ಪೇರುದ್ರ ಪ್ರಭಣ್ಣ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ. ಸಾಂಬಮೂರ್ತಿ
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 8. 2. 2018

## ಸಂಶೋಧಕರ ಪ್ರಮಾಣ ಪತ್ರ

**ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಸಾಂಬಮೂರ್ತಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಉದ್ದೇಶ ಅಥವಾ ಪದವಿಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸಂಶೋಧಕರು**

K. [signature]

**ತಿಪ್ಪೇರುದ್ರ ಪ್ರಭಣ್ಣ**
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೦೮-೦೨-೨೦೧೮

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಸ್ವರೂಪ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

ಭಾಷೆ ಮಾನವನ ಅನುಭವದ ಅಭಿವ್ಯಕ್ತಿಯ ಸಾಧನವಾಗಿದ್ದು, ಜನರ ವಿಚಾರ ಮತ್ತು ಭಾವನೆಗಳನ್ನು ಒಬ್ಬರಿಂದ ಮತ್ತೊಬ್ಬರಿಗೆ ತಲುಪಿಸುವ ಮಾಧ್ಯಮವಾಗಿದೆ. ಆಫ್ರಿಕಾದ ಚಿಂತಕ ಗೂಗಿ ವಾ ಥಿಯಾಂಗೋ "ಮಾನವ ಮಾನವರ ನಡುವೆ ಪರಸ್ಪರ ಸಂಬಂಧ ಕಲ್ಪಿಸಿಕೊಡುವಂತಹ ಶಬ್ದ ಮತ್ತು ಮಾತುಗಳನ್ನು ನಿರ್ದಿಷ್ಟ ಕ್ರಮದಲ್ಲಿ ಹೊರಡಿಸುವ ಸಾಮರ್ಥ್ಯ ವಿಶ್ವವ್ಯಾಪಿಯಾಗಿರುತ್ತದೆ. ಇದು ಮನುಷ್ಯ ಜೀವಿಗಳಿಗೆ ಮಾತ್ರ ದಕ್ಕಿರುವ ವಿಶೇಷವಾದ ಭಾಷೆಯ ವಿಶ್ವವ್ಯಾಪಿ ಗುಣ. ಅದು ಸಂವಹನರೂಪಿ ಮತ್ತು ಸಂಸ್ಕೃತಿಯ ವಾಹಕ"[೧] (ಉಲ್ಲೇಖ, ರಂಗನಾಥ ಕಂಟನಕುಂಟೆ, ೨೦೦೯) ಎಂದು ಭಾಷೆಯನ್ನು ವ್ಯಾಖ್ಯಾನಿಸಿದ್ದಾರೆ.

"ಭಾಷೆ ಎನ್ನುವುದು ವಿಶ್ವವ್ಯಾಪಿಯಾದ ಚೈತನ್ಯ, ಮಾನವ ಸಮಾಜದ ಬೆಳಕು. ಇದು ಮಾನವ ಸಮಾಜದ ನಾಗರಿಕ ಹಾಗೂ ಸಾಂಸ್ಕೃತಿಕ ವಿಕಾಸದ ಅಂತಃಸ್ಥ ಶಕ್ತಿ, ಅದು ವಿಚಾರ ಮತ್ತು ಭಾವನೆಗಳನ್ನು ಒಬ್ಬರಿಂದ ಮತ್ತೊಬ್ಬರಿಗೆ ಸಂವಹನಿಸುವ ಧ್ವನಿ ಸಂಕೇತಗಳ ವ್ಯವಸ್ಥೆ" ಎಂದು ರಂಗನಾಥ ಕಂಟನಕುಂಟೆ (೨೦೦೯) ಹೇಳಿದ್ದಾರೆ.[೨]

ಪ್ರಪಂಚದ ಪ್ರತಿಯೊಂದು ಭಾಷೆಗಳ ಶಬ್ದಗಳಲ್ಲಿ, ಸಂಕೇತಗಳಲ್ಲಿ, ಪ್ರತಿಮೆಗಳಲ್ಲಿ ಕೆಲವು ಮಟ್ಟಿನ ಹೋಲಿಕೆಗಳಿದ್ದರೂ ಅರ್ಥಗಳಲ್ಲಿ ವ್ಯತ್ಯಾಸವಿರುತ್ತದೆ. ಏಕೆಂದರೆ ಪ್ರತಿಯೊಂದು ಶಬ್ದದ ಚರಿತ್ರೆಯೂ ಆಯಾ ಭಾಷೆಯಲ್ಲಿ ಬೇರೆ ಬೇರೆಯಾಗಿದೆ. ಅಲ್ಲದೇ ಈ ತಾರತಮ್ಯ ಗುಣವೇ ಒಂದು ಭಾಷೆಯನ್ನು ಮತ್ತೊಂದು ಭಾಷೆಯಿಂದ ಪ್ರತ್ಯೇಕಿಸುತ್ತದೆ. ಭಾಷೆಯು ಸಮಾಜ-ಸಂಸ್ಕೃತಿಗಳ ವಿಕಾಸದ ಸಾಧನವಾಗಿದೆ. ಇದು ನಿಯಮ ಬದ್ಧವಾಗಿರುವ ವ್ಯವಸ್ಥೆಯಾಗಿದೆ. ಭಾಷೆಯೊಂದರ ಧ್ವನಿಗಳನ್ನು ಒಂದು ನಿರ್ದಿಷ್ಟ ಕ್ರಮದಲ್ಲಿ ಜೋಡಿಸಿ ಹೊಸ ಹೊಸ ಶಬ್ದಗಳನ್ನು ರಚಿಸಬಹುದು. ಭಿನ್ನ ಭಿನ್ನ ಧ್ವನಿಗಳನ್ನು ಬೇರೆ ಧ್ವನಿಗಳೊಂದಿಗೆ ಬೆರೆಸಿ ಅಗತ್ಯಕ್ಕೆ ತಕ್ಕ ಶಬ್ದಗಳನ್ನು ಆಯಾ ಭಾಷಿಕರು ಉತ್ಪಾದಿಸುತ್ತಾರೆ. ಕೆಲವೊಮ್ಮೆ ಹಳೆಯ ಶಬ್ದಗಳನ್ನೇ ಬೆರೆಸಿ ಹೊಸ ಶಬ್ದಗಳನ್ನು ಹುಟ್ಟು ಹಾಕುತ್ತಾರೆ.

ಜಗತ್ತಿನಲ್ಲಿ ಸುಮಾರು ಆರು ಸಾವಿರಕ್ಕೂ ಹೆಚ್ಚು ಭಾಷೆಗಳಿವೆ ಎಂದು ಅಂದಾಜಿಸಲಾಗಿದ್ದು, ದೇಶ, ಕಾಲ, ವಂಶ, ಪರಂಪರೆ ಇತ್ಯಾದಿ ಕಾರಣಗಳಿಂದ ಅವು ಬೇರೆ ಬೇರೆಯಾಗಿ ಭಿನ್ನ ಭಿನ್ನ

ಸನ್ನಿವೇಶಗಳಲ್ಲಿ ಬೆಳೆದು ಬಂದಿರುತ್ತವೆ. ಇವುಗಳನ್ನು ಶ್ರವಣ ಮತ್ತು ಚಾಕ್ಷುಷ ಎಂದು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ. ಲಿಪಿರಹಿತ ಭಾಷೆಗೆ ಶ್ರವಣ ಭಾಷೆಯೆಂದು, ಲಿಪಿಸಹಿತ ಭಾಷೆಗೆ ಚಾಕ್ಷುಷ ಭಾಷೆಯೆಂದು ಕರೆಯುತ್ತಾರೆ. ದ್ರಾವಿಡ ಭಾಷೆಗಳಲ್ಲಿ ಪ್ರಮುಖ ಭಾಷೆಯಾದ ಕನ್ನಡಕ್ಕೆ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವಿದ್ದು, ಸಂಪದ್ಭರಿತವೂ, ವ್ಯಾಪಕತೆಯನ್ನು ಒಳಗೊಂಡ ಶ್ರೀಮಂತ ಭಾಷೆಯಾಗಿದೆ.

ಕನ್ನಡವು ಲಿಪಿ ಇರುವ ಚಾಕ್ಷುಷ ಭಾಷೆಯಾಗಿದ್ದು, ಕರ್ನಾಟಕದ ಸಾಂಸ್ಕೃತಿಕ ಪರಂಪರೆ ಕುತೂಹಲಕರ ಹಾಗೂ ವೈವಿಧ್ಯಮಯವಾಗಿದ್ದು, ಕನ್ನಡಿಗರು ಬದುಕಿ ಬಾಳಿದ ರೀತಿ, ಅವರು ಅನುಸರಿಸಿದ ಧರ್ಮ, ಆರ್ಥಿಕ ವ್ಯವಸ್ಥೆ, ಆಡಳಿತ ವ್ಯವಸ್ಥೆ, ಜೀವನ ಮೌಲ್ಯ ಮೊದಲಾದವುಗಳ ತಿಳಿವಿಗೆ ಕನ್ನಡ ಭಾಷೆಯೇ ಪ್ರಮುಖ ಸಾಧನವಾಗಿದೆ.

"ಭಾಷೆ ಮಾನವನ ಮನಸ್ಸಿಗೆ ಹಿಡಿದ ಕನ್ನಡಿಯಿದ್ದಂತೆ. ಶಬ್ದಗಳ ಮರ್ಮವನ್ನು ಸರಿಯಾಗಿ ಗ್ರಹಿಸಿದರೆ ಆ ಭಾಷೆಯನ್ನಾಡುವವರ ಮನೋಗತ ಸ್ಪಷ್ಟವಾಗಿ ತಿಳಿಯುತ್ತದೆ. ಒಂದು ಜನಾಂಗದ ಸಂಸ್ಕೃತಿಯನ್ನು ತಿಳಿಯಲು ಭಾಷೆಗಿಂತ ಉತ್ತಮ ಸಾಧನ ಬೇರೊಂದಿಲ್ಲ".[೩]

ಭಾಷೆಯ ಅತ್ಯಂತ ಅರ್ಥ ರಹಿತವಾದ ಚಿಕ್ಕ ಘಟಕ 'ಧ್ವನಿ'. ಇಂಥ ಅವಿಭಾಜ್ಯ ಧ್ವನಿಗಳು ವ್ಯವಸ್ಥಿತವಾಗಿ ಸೇರಿ ಅರ್ಥಪೂರ್ಣವಾಗಿ ರೂಪುಗೊಂಡದ್ದು 'ಪದ'. ಒಂದು ಭಾಷಿಕ ಸಮುದಾಯದ ಗ್ರಾಂಥಿಕ ಭಾಷೆ ಮತ್ತು ಆಡುನುಡಿಯಲ್ಲಿ ಬಳಕೆಯಲ್ಲಿರುವ ಪದಸಂಪತ್ತು ವಾಕ್ಯ ರೂಪದಲ್ಲಿ ಅಭಿವ್ಯಕ್ತಿಯಾಗುತ್ತದೆ. ಹೀಗೆ ಒಂದು ಭಾಷೆ ಧ್ವನಿ, ಪದ, ವಾಕ್ಯಗಳಿಂದ ಕೂಡಿರುತ್ತದೆ. ಆಡುನುಡಿ ಮತ್ತು ಗ್ರಾಂಥಿಕವಾಗಿ ಇರುವ ಒಟ್ಟು ಪದಗಳು ಒಂದು ಭಾಷೆಯ ಪದಗಳಾಗಿರುತ್ತವೆ. ಭಾಷೆಯಲ್ಲಿ ಬಳಕೆಯಲ್ಲಿರುವ ಶಬ್ದಗಳು ಹುಟ್ಟುತ್ತವೆ, ಸಾಯುತ್ತವೆ. ನಿಘಂಟಿನಲ್ಲಿರುವ ಪದಗಳು ಜನಬಳಕೆಯಲ್ಲಿರುವುದಿಲ್ಲ. ಜನರು ದಿನನಿತ್ಯ ಬಳಸುವ ಹಲವು ಪದಗಳು ನಿಘಂಟಿಗೆ ಸೇರಿರುವುದೇ ಇಲ್ಲ.

"ಪದಗಳನ್ನು ನಾವು ಓದುವಾಗ, ಮಾತನ್ನು ಆಲಿಸುವಾಗ, ಮಾತನಾಡುವಾಗ ಹಾಗೂ ಬರೆಯುವಾಗ – ಹೀಗೆ ನಾಲ್ಕು ವಲಯಗಳಲ್ಲಿ ಬಳಸುತ್ತೇವೆ. ಈ ನಾಲ್ಕು ಸಂದರ್ಭಗಳಲ್ಲಿ ನಾವು ಪದಕೋಶಗಳನ್ನು ಬಳಸುವ ರೀತಿ ಬೇರೆ ಬೇರೆಯಾಗಿರುತ್ತದೆ. ಅಂದರೆ ಆಡುವ ಎಷ್ಟೋ ಪದಗಳನ್ನು ಬರೆಯುವುದಿಲ್ಲ. ಬರೆದ, ಓದಿದ ಎಷ್ಟೋ ಪದಗಳನ್ನು ಆಡುವುದಿಲ್ಲ. ಹೀಗಾಗಿ ಮಾತನಾಡುವ ಮತ್ತು ಬರೆಯುವ ಪದಕೋಶಗಳು ಒಬ್ಬ ವ್ಯಕ್ತಿಯಲ್ಲಿಯೇ ಬೇರೆ ಬೇರೆಯಾಗಿರುತ್ತವೆ".[೪] ಭಾಷೆಯ ಪದಗಳನ್ನು ತಿಳಿದರೆ ಭಾಷೆಯನ್ನು ತಿಳಿದಂತಾಗುವುದಿಲ್ಲ. ಏಕೆಂದರೆ ಪದಗಳಿಂದ ಭಾಷೆ ರಚನೆಯಾಗುವುದಿಲ್ಲ. ಆದರೆ ಪದಗಳಿಲ್ಲದೆ ಭಾಷೆಯಿಲ್ಲ. ಭಾಷೆಯ ಜೊತೆಗೆ ಅದರ ರಚನೆಯ ನಿಯಮಗಳೂ ಗೊತ್ತಿರಬೇಕು. ಭಾಷೆಯಲ್ಲಿರುವ ಎಲ್ಲ ಪದಗಳ ತಿಳಿವಳಿಕೆ ಯಾರಿಗೂ ಇರುವುದಿಲ್ಲ. ಹೊಸ ಪದಗಳ ಸೇರ್ಪಡೆ, ಹಳೆಯ ಪದಗಳ ಬೇರ್ಪಡೆಗಳು ಭಾಷೆಯಲ್ಲಿ ನಿರಂತರವಾಗಿರುತ್ತವೆ.

ಅದನ್ನು ಬಳಸುವವರ ಸಾಮರ್ಥ್ಯ, ಸಂದರ್ಭ, ಉದ್ದೇಶ, ಪ್ರಯೋಗ ಕೌಶಲಗಳು ಪದಕೋಶದ ಬಳಕೆ ಮತ್ತು ಸ್ವರೂಪವನ್ನು ನಿರ್ಧರಿಸುತ್ತದೆ. "ಲಿಪಿಯುಳ್ಳ ಭಾಷೆಯೊಂದರ ಪದಕೋಶದ ಪದಗಳಿಗೆ ಮೂರು ನೆಲೆಗಳಿರುತ್ತವೆ. ಅವೆಂದರೆ ಉಚ್ಚಾರದ ನೆಲೆ, ಅರ್ಥದ ನೆಲೆ ಮತ್ತು ಬರಹದ ನೆಲೆ. ಇವನ್ನು ಶಬ್ದ, ಅವಕ್ಕಿರುವ ಅರ್ಥ ಮತ್ತು ಅದನ್ನು ದಾಖಲಿಸುವ ಲಿಪಿ"[೫] ಎಂದು ಹೆಸರಿಸಬಹುದು. ಭಾಷೆಯಲ್ಲಿ ಸಕ್ರಿಯ ಪದಕೋಶ ಮತ್ತು ಅಸಕ್ರಿಯ ಪದಕೋಶ ಎಂದು ಎರಡು ರೀತಿ ಪದಕೋಶ ಬಳಕೆ ಮಾಡುತ್ತಾನೆ. ಭಾಷಿಕನು ತಾನೇ ಮಾತಾಡಲು ಮತ್ತು ಬರೆಯಲು ಬಳಸುವುದು ಕ್ರಿಯಾತ್ಮಕ ಪದಕೋಶ; ತಾನೇ ಬಳಸದಿದ್ದರೂ ಸಾಹಿತ್ಯ, ವಿಜ್ಞಾನ, ಮಾಧ್ಯಮಗಳಲ್ಲಿ ಬಳಕೆಯಾದಾಗ ಗ್ರಹಿಕೆಗೆ ಬರುವುದು ಅಸಕ್ರಿಯ ಪದಕೋಶ. ಈ ಎರಡು ರೀತಿಯಲ್ಲಿ ಪದಪರಂಪರೆ ಎನ್ನುವುದು ಭಾಷೆಯಲ್ಲಿ ಬೆಳೆದುಬಂದಿರುವುದನ್ನು ನಿಘಂಟುಗಳು ದಾಖಲಿಸುತ್ತವೆ.

"ಶಬ್ದಕೋಶಗಳು ಭಾಷೆಯ ಅಭ್ಯಾಸಕ್ಕೆ ಅತ್ಯಗತ್ಯವಾದ ಕೈಪಿಡಿಗಳಾಗಿರುತ್ತವೆ; ಅವು ವಾಗ್ಭಂಡಾರದ ಅಕ್ಷಯ ನಿಧಿ, ವಿಚಾರದ ಗೊತ್ತು, ಜ್ಞಾನದ ಬಿತ್ತು, ಅರ್ಥದ ಗಣಿ, ವಾಕ್ಯದ ಅಡಿಗಲ್ಲು, ಸಾಹಿತ್ಯ-ಸಂಸ್ಕೃತಿ ಪ್ರಪಂಚದ ಜ್ಞಾನಗಳ ಮಹಾದ್ವಾರ"[೬] ಎಂದು ನಿಘಂಟಿನ ಮಹತ್ವವನ್ನು ಹೇಳಲಾಗಿದೆ.

ಭಾಷೆಯನ್ನು ಬಳಸುವ, ಬೆಳೆಸುವ ಹಾಗೂ ಉಳಿಸುವ ಹೊಣೆಗಾರಿಕೆ ನಿಘಂಟುಗಳಿಗಿದೆ. ಶಬ್ದಗಳ ಕುರಿತಾದ ಅರಿವನ್ನು ಹೆಚ್ಚಿಸುವುದು ನಿಘಂಟಿನ ಬಹುಮುಖ್ಯ ಕೆಲಸ. ಭಾಷೆ ಮತ್ತು ಸಂಸ್ಕೃತಿಯ ಮುಂದುವರಿಕೆಗೆ ನಿಘಂಟು ಅನಿವಾರ್ಯವಾಗಿದ್ದು, ಹೊಸ ಹೊಸ ಪದಗಳನ್ನು ಜನಮನಕ್ಕೆ ತಲುಪಿಸುವ ಹೊಣೆಗಾರಿಕೆ ನಿಘಂಟುಗಳ ಮೇಲಿದೆ.

ಕನ್ನಡ ಭಾಷೆಯಲ್ಲಿ ವೈವಿಧ್ಯಮಯವಾದ ನಿಘಂಟುಗಳು ರಚನೆಯಾಗಿದ್ದು, ಇವು ನಮ್ಮ ನುಡಿ ಸಂಪತ್ತಿನ ಬೆಳವಣಿಗೆಗೆ ಸಾಕ್ಷಿಗಳಾಗಿವೆ. ಭಾಷೆಯ ಬಳಕೆ, ಕಾಲಮಾನ, ಅಂದಂದಿನ ಅಗತ್ಯಗಳಿಗನುಗುಣವಾಗಿ ನಿಘಂಟುಗಳು ರಚನೆಯಾಗಿವೆ.

ಕನ್ನಡದ ನಿಘಂಟು ಚರಿತ್ರೆ ರನ್ನನ 'ರನ್ನಕಂದ' ಎಂಬ ನಿಘಂಟಿನಿಂದ ಆರಂಭವಾಗುತ್ತದೆ. ಆಧುನಿಕ ಯುಗದ ಸಿರಿಗನ್ನಡ ಕೋಶ, ಕನ್ನಡ ಕ್ಲಿಷ್ಟ ಪದಕೋಶ, ಕನ್ನಡ ಕಾವ್ಯ ಪದಮಂಜರಿ, ಎರವಲು ಪದಕೋಶ, ಇಗೋ ಕನ್ನಡ ಎನ್ನುವ ಸಾಮಾಜಿಕ ನಿಘಂಟು ಹೀಗೆ ವೈವಿಧ್ಯಮಯವಾದ ನಿಘಂಟುಗಳು ಹೊರಬಂದಿವೆ. ಕನ್ನಡ ನಿಘಂಟು ಚರಿತ್ರೆಯಲ್ಲಿ ದಾಖಲಾದ ಎರಡು ಮಹತ್ವದ ನಿಘಂಟುಗಳೆಂದರೆ ಮೊದಲನೆಯದು ಆಧುನಿಕ ಭಾಷಾಶಾಸ್ತ್ರದ ನಿಯಮಗಳಿಗನುಸಾರವಾಗಿ ಸುಮಾರು ಇಪ್ಪತ್ತೆರಡು ವರ್ಷಗಳ ಕಾಲ ಶ್ರಮವಹಿಸಿ ಹೊರತಂದ ಶಾಸ್ತ್ರೀಯವೂ, ಪ್ರಮಾಣಭೂತವೂ ಆಗಿರುವ ಕಿಟೆಲ್ ಅವರ 'ಕನ್ನಡ-ಇಂಗ್ಲಿಷ್ ನಿಘಂಟು', ಎರಡನೆಯದು ಇಪ್ಪತ್ತನೆಯ ಶತಮಾನದಲ್ಲಿ ಬಂದ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಕನ್ನಡ ನಿಘಂಟು.'

ಕನ್ನಡ ಭಾಷೆಯನ್ನು ವೃದ್ಧಿಪಡಿಸುವ ದಿಕ್ಕಿನಲ್ಲಿ ಪರಿಷತ್ತು ಪ್ರಕಟಿಸಿರುವ ಕನ್ನಡ ಏಕಭಾಷೆ ನಿಘಂಟು ಒಂದು ಮಹತ್ವದ ಕಾರ್ಯ. ಇದರ ಮುಖ್ಯ ಉದ್ದೇಶ ಕನ್ನಡ ಭಾಷೆಯ ಚಾರಿತ್ರಿಕ

ಬೆಳವಣಿಗೆಯನ್ನು ಗುರುತಿಸುವುದಾಗಿದೆ. ೨೦೧೦ರಲ್ಲಿ ಎಂಟು ಸಂಪುಟಗಳನ್ನು ಪುನರ್ಮುದ್ರಣ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನು ಅಧ್ಯಯನಕ್ಕೊಳಪಡಿಸಿ ಪ್ರಸ್ತುತ ನಿಘಂಟಿನ ಸ್ವರೂಪ, ನಿಘಂಟಿನ ವೈಶಿಷ್ಟ್ಯಗಳೇನು, ನಿಘಂಟಿನಲ್ಲಿ ಆಗಬೇಕಾದ ಬದಲಾವಣೆಗಳು ಮುಂತಾದ ಅಂಶಗಳ ಕುರಿತಂತೆ ಅಧ್ಯಯನ ಮಾಡುವ ಉದ್ದೇಶದಿಂದ ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ನಿಘಂಟುಶಾಸ್ತ್ರ ಎಲ್ಲ ಭಾಷೆಗಳಿಗೆ ಸಂಬಂಧಪಟ್ಟದ್ದು. ನಿಘಂಟು ರಚನೆ ಮುಖ್ಯವಾಗಿ ಒಂದು ಭಾಷೆಗೆ ಸಂಬಂಧಪಟ್ಟದ್ದು. ಕನ್ನಡ ಭಾಷೆಗೆ ಸಂಬಂಧಿಸಿದಂತೆ ನಿಘಂಟುಗಳ ವಿವರಣಾತ್ಮಕ ಅಥವಾ ತೌಲನಿಕ ಅಭ್ಯಾಸ ಹೆಚ್ಚಾಗಿ ನಡೆದಿಲ್ಲ. ಕೆಲವು ವಿದ್ವಾಂಸರು ಈ ಬಗ್ಗೆ ಆಳವಾಗಿ ಆಲೋಚಿಸುತ್ತಿರುವುದು ನಿಜವಾದರೂ ಕೆಲಸಗಳು ಕಡಿಮೆ. ಅಂತಹ ಕೆಲಸಗಳಲ್ಲಿ "ಮಿಶನರಿಗಳ ಕನ್ನಡ ದ್ವಿಭಾಷಿಕ ನಿಘಂಟುಗಳ ತೌಲನಿಕ ಅಧ್ಯಯನ" ಹಾಗೂ "ಕಿಟೆಲ್ ಕೋಶ ಸಾಂಸ್ಕೃತಿಕ ಅಧ್ಯಯನ" ಎನ್ನುವ ಪಿಎಚ್.ಡಿ. ಅಧ್ಯಯನ ಪ್ರಮುಖವಾದವುಗಳಾಗಿವೆ.

ನಿಘಂಟು ರಚನೆಯೇನೋ ಸಾಕಷ್ಟು ನಡೆದಿದೆ. ಆದರೆ ಸಾಮಾನ್ಯ ಜನರಿಗೆ ನಿಘಂಟುಗಳ ಮಹತ್ವವನ್ನು ವಿವರಿಸುವ ಅಧ್ಯಯನಗಳು ನಡೆದಿರುವುದು ಕಡಿಮೆ. ಅದರಲ್ಲೂ ಒಂದೇ ಒಂದು ನಿಘಂಟನ್ನು ಆಧಾರವಾಗಿಟ್ಟುಕೊಂಡು ಅದರ ಸ್ವರೂಪವನ್ನು ವಿವಿಧ ನೆಲೆಗಳಲ್ಲಿ ಮಾಡಿದ ಅಧ್ಯಯನಗಳು ಹೆಚ್ಚಾಗಿ ನಡೆದಿಲ್ಲ. ಇದನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟಿನ ಬಗೆಗೆ ಹೊಸ ರೀತಿಯ ಅಧ್ಯಯನದ ಆವಶ್ಯಕತೆಯನ್ನು ಗುರುತಿಸುವ ಉದ್ದೇಶದಿಂದ ಪ್ರಸ್ತುತ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ೧.೧. ಅಧ್ಯಯನದ ಉದ್ದೇಶಗಳು

"ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ" ಈ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೆ ತೊಡಗಿದಾಗ ಹಲವಾರು ಸಮಸ್ಯೆಗಳು ಕಂಡುಬಂದಿವೆ. ಅವುಗಳನ್ನೇ ಈ ಪ್ರಬಂಧದ ಮುಖ್ಯ ಉದ್ದೇಶಗಳನ್ನಾಗಿಟ್ಟುಕೊಳ್ಳಲಾಗಿದ್ದು ಅವು ಈ ಕೆಳಕಂಡಂತಿವೆ.

ನಿಘಂಟು ಕೇವಲ ಅರ್ಥ ವಿವರಿಸುವ ಪುಸ್ತಕವಾಗದೆ, ಒಂದು ಜನಾಂಗದ ಸಾಂಸ್ಕೃತಿಕ ವಿಕಾಸದ ದಾಖಲೆಯಾಗಿರುವುದರಿಂದ ಕನ್ನಡ ನಿಘಂಟಿನ ಸ್ವರೂಪ ಕುರಿತಂತೆ ಅಧ್ಯಯನಗಳು ನಡೆಯಬೇಕಾಗಿದೆ. ಪ್ರಸ್ತುತ ಈ ನಿಘಂಟಿನ ಎಂಟು ಸಂಪುಟಗಳು ರಚನೆಯಾಗಿ ಸುಮಾರು ೨೦ ವರ್ಷಗಳಾಗಿವೆ. ಆಗಿನಿಂದಲೂ ಇದರ ಬಗೆಗೆ ಅಧ್ಯಯನಗಳು ನಡೆದಿಲ್ಲ.

ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನಾತ್ಮಕ ವಿನ್ಯಾಸದ ಕುರಿತು, ಅದರ ಸ್ವರೂಪ, ವಿಧಾನ, ರಚನೆಗೆ ಪ್ರೇರಣೆಗಳು ಮೊದಲಾದವುಗಳನ್ನು ಕುರಿತು ಅಧ್ಯಯನ ಮಾಡುವುದು ಇದರ ಉದ್ದೇಶವಾಗಿದೆ.

ಕನ್ನಡ ನಿಘಂಟಿನ ಭಾಷಿಕ ರಚನಾ ವಿನ್ಯಾಸವನ್ನು ವಿಶ್ಲೇಷಿಸಿ ಅದರಲ್ಲಿ ದಾಖಲಾಗಿರುವ ಸಮಾನಾರ್ಥಕ, ನಾನಾರ್ಥಕ, ನಿಷೇಧಾರ್ಥಕ, ನುಡಿಗಟ್ಟುಗಳು, ಗಾದೆಗಳು, ಪ್ರಯೋಗಗಳು ಮೊದಲಾದ ಅಂಶಗಳನ್ನು ಗುರುತಿಸುವ ಉದ್ದೇಶ ಹೊಂದಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ವ್ಯಾಪ್ತಿ ಬಹುವಿಸ್ತಾರವಾದುದು. ಎಂಟು ಸಂಪುಟಗಳಲ್ಲಿ ವಿಸ್ತಾರವಾಗಿ ಹರಡಿರುವ ಈ ನಿಘಂಟಿನ ವೈಶಿಷ್ಟ್ಯಗಳನ್ನು ಗುರುತಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಸಾಮಾಜಿಕ ಬಳಕೆಯ ಸಾಧ್ಯತೆಗಳು, ಆಗಬೇಕಾದ ಮಾರ್ಪಾಡುಗಳನ್ನು ಗುರುತಿಸುವ ಉದ್ದೇಶ ಹೊಂದಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಕನ್ನಡ ಸಾಹಿತ್ಯ ಪರಿಷತ್ತು ೨೦೧೦ರಲ್ಲಿ ಮರುಮುದ್ರಣ ಮಾಡಿದ 'ಕನ್ನಡ ನಿಘಂಟಿ'ನ ಎಂಟು ಸಂಪುಟಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಈ ನಿಘಂಟಿನ ರಚನಾ ವಿನ್ಯಾಸ, ಭಾಷಿಕ ವಿನ್ಯಾಸ, ನಿಘಂಟಿನ ವೈಶಿಷ್ಟ್ಯಗಳನ್ನು ವಿವರಿಸಲು ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

### ೧.೩. ಅಧ್ಯಯನದ ವಿಧಾನ

ಭಾಷೆಯನ್ನು ಅಧ್ಯಯನ ಮಾಡುವಾಗ ಭಾಷಾಶಾಸ್ತ್ರೀಯ ನೆಲೆಯ ವಿವರಣಾತ್ಮಕ, ಐತಿಹಾಸಿಕ, ತೌಲನಿಕ, ಆನ್ವಯಿಕ, ಸಮಾಜೋಭಾಷಿಕ, ಉಪಭಾಷೆ, ದ್ವಿಭಾಷಿಕ ಮೊದಲಾದ ಅಧ್ಯಯನ ಮಾದರಿಗಳಿವೆ. ಪ್ರಸ್ತುತ ಈ "ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ" ಎನ್ನುವ ಅಧ್ಯಯನಕ್ಕೆ ಪ್ರಧಾನವಾಗಿ ವಿವರಣಾತ್ಮಕ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

ಈ ನಿಘಂಟಿನಲ್ಲಿನ ಪದಗಳ ಆಯ್ಕೆ, ಅವುಗಳನ್ನು ದಾಖಲಿಸಿರುವ ಕ್ರಮ ಮೊದಲಾದವುಗಳನ್ನು ಕುರಿತಂತೆ ಚರ್ಚಿಸಲು ವಿವರಣಾತ್ಮಕ ವಿಧಾನವನ್ನು ಬಳಸಲಾಗಿದೆ. ನಮ್ಮ ಭಾಷೆಯ ಪದಗಳ ಐತಿಹಾಸಿಕ ಬೆಳವಣಿಗೆಯ ಅರಿವಿಗೆ ಮತ್ತು ನಿಘಂಟು ರಚನಾ ನಿಯಮಗಳ ಹಿನ್ನೆಲೆಯಲ್ಲಿ ಶಾಸ್ತ್ರೀಯವಾಗಿ ಸಂಪಾದಿಸಲ್ಪಟ್ಟ ಕನ್ನಡ ನಿಘಂಟಿನ ಪದಸಂಪತ್ತಿನ ಮಹತ್ತನ್ನು ತಿಳಿಯಲು ಇದರಲ್ಲಿ ದಾಖಲಾದ ಪದಗಳನ್ನು ವ್ಯಾಕರಣಶಾಸ್ತ್ರದ ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

ಕಾಲದಿಂದ ಕಾಲಕ್ಕೆ ಆಗಬೇಕಾದ ಸೇರ್ಪಡೆಯ ವಿವರಗಳ ಕುರಿತಂತೆ ಈ ನಿಘಂಟು ಮುಖ್ಯವಾಗಿ ಪಂಡಿತರಿಗೆ ರಚನೆಯಾಗಿದ್ದು, ಆದರೂ ಇದು ಸರ್ವಜನರಿಗೆ ಸಲ್ಲುವಂತಹದ್ದು. ಇದರಿಂದ ಕನ್ನಡ ನಿಘಂಟಿನ ಸ್ವರೂಪ ಹಾಗೂ ಅದರ ಬಳಕೆಯ ಆಯಾಮಗಳನ್ನು ತಿಳಿದುಕೊಳ್ಳಲು ಪ್ರಸ್ತುತ ಅಧ್ಯಯನದ ವಿಧಾನವು ಸಹಕಾರಿಯಾಗುತ್ತದೆ.

## ೧.೪. ಅಧ್ಯಯನದ ಸ್ವರೂಪ

ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ.

ಒಂದನೇ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನಗಳನ್ನು ನಿರೂಪಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ನಿಘಂಟುಶಾಸ್ತ್ರ ಹಾಗೂ ನಿಘಂಟು ರಚನೆಗೆ ಸಂಬಂಧಿಸಿದಂತೆ ಬಂದಿರುವ ಪಿಎಚ್.ಡಿ., ಎಂ.ಫಿಲ್. ಪ್ರಬಂಧಗಳು, ಬಿಡಿ ಲೇಖನಗಳು, ಸಂಪಾದನ ಕೃತಿಗಳು, ಭಾಷಾವಿಜ್ಞಾನದ ಕೃತಿಗಳು ಹಾಗೂ ಲೇಖನಗಳನ್ನು ಸಮೀಕ್ಷಿಸಲಾಗಿದೆ. ಈ ಸಮೀಕ್ಷೆಯು ಪ್ರಸ್ತುತ ಅಧ್ಯಯನಕ್ಕೆ ಹೇಗೆ ಪೂರಕವಾಗಿದೆ ಎನ್ನುವುದರ ಜೊತೆಗೆ ಈ ಅಧ್ಯಯನಕ್ಕಿಂತ ಹೇಗೆ ಭಿನ್ನ ಎನ್ನುವುದನ್ನು ಅವಲೋಕಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆದು ಬಂದ ದಾರಿ, ಅದು ಪ್ರಕಟಿಸಿದ ನಿಘಂಟುಗಳ ಪರಿಚಯ, ಪರಿಷತ್ತು ಪ್ರಕಟಿಸಿದ ಕನ್ನಡ ನಿಘಂಟಿನ ಬೆಳವಣಿಗೆಯ ಹಂತಗಳು, ಕನ್ನಡ ನಿಘಂಟು ರಚನೆಯ ಹಿನ್ನೆಲೆ, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಸ್ವರೂಪ, ವ್ಯಾಪ್ತಿ, ನಿಘಂಟಿಗೆ ಬಳಸಿದ ಆಕರಗಳನ್ನು ಕುರಿತು ಸ್ಥೂಲ ಪರಿಚಯವನ್ನು ನೀಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕನ್ನಡ ನಿಘಂಟಿನ ರಚನಾತ್ಮಕ, ಭಾಷಿಕ ವಿನ್ಯಾಸವನ್ನು ನೀಡಲಾಗಿದ್ದು, ಈ ನಿಘಂಟಿನ ರಚನಾ ವಿನ್ಯಾಸವನ್ನು ವಿಶ್ಲೇಷಿಸಿಲಾಗಿದೆ. ಈ ನಿಘಂಟಿನ ಭಾಷಿಕ ವಿನ್ಯಾಸವನ್ನು ಗಮನಿಸಿ ಇದರಲ್ಲಿ ದಾಖಲಾಗಿರುವ ಸಮಾನಾರ್ಥಕಗಳು, ನಾನಾರ್ಥಕಗಳು, ನಿಷೇಧಾರ್ಥಕಗಳು, ದೇಶ್ಯ-ಅನ್ಯದೇಶ್ಯಗಳು, ಸಂಕ್ಷೇಪಗಳು, ವಿರಾಮ ಚಿಹ್ನೆಗಳು, ಪ್ರಯೋಗಗಳ ಉಲ್ಲೇಖ, ಗಾದೆಗಳು, ನುಡಿಗಟ್ಟುಗಳು, ಅವ್ಯಯಗಳು ಮೊದಲಾದ ಭಾಷಿಕ ರಚನೆಗಳನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದ್ದು, ಅಧ್ಯಾಯದ ಕೊನೆಯಲ್ಲಿ ಕನ್ನಡ ನಿಘಂಟಿನ ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಬಳಕೆಯ ವಲಯಗಳನ್ನು ಕುರಿತು ಚರ್ಚಿಸಲಾಗಿದೆ. ಶೈಕ್ಷಣಿಕ, ಮಾಧ್ಯಮ, ಕಾನೂನು, ಇತರೆ ವಲಯಗಳಲ್ಲಿ ಈ ನಿಘಂಟಿನ ಬಳಕೆಯನ್ನು ಕುರಿತಂತೆ ಪ್ರಶ್ನಾವಳಿಯನ್ನು ರೂಪಿಸಿ ಅದರಿಂದ ಬಂದ ಒಟ್ಟು ವಿಚಾರಗಳನ್ನು ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ. ಇದರ ಜೊತೆಗೆ ತಂತ್ರಜ್ಞಾನದ ಬೆಳವಣಿಗೆಯ ಹಿನ್ನೆಲೆಯಲ್ಲಿ ಈ ನಿಘಂಟಿನ ಬಳಕೆಯ ಸಾಧ್ಯತೆಗಳನ್ನು ಹಾಗೂ ಪರಿಷ್ಕರಣೆಯ ವಿಚಾರಗಳನ್ನು ಕುರಿತು ಚರ್ಚಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಒಟ್ಟಾರೆ ಅಧ್ಯಯನದಿಂದ ಕಂಡುಕೊಂಡ ವೈಶಿಷ್ಟ್ಯಗಳನ್ನು, ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ. ಅನುಬಂಧದಲ್ಲಿ ಮಹಾಪ್ರಬಂಧದ ರಚನೆಗೆ ಬಳಸಿಕೊಂಡ ಗ್ರಂಥಗಳು, ನಿಘಂಟುಗಳು, ಲೇಖನಗಳ ಸೂಚಿಯನ್ನು ಅಕಾರಾದಿಯಾಗಿ ನೀಡಲಾಗಿದೆ. ಪ್ರಸ್ತುತ ಅಧ್ಯಯನಕ್ಕಾಗಿ ನಿರ್ದಿಷ್ಟ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ವಕ್ತೃಗಳಿಂದ ಮಾಹಿತಿಯನ್ನು ಪಡೆದು ದಾಖಲಿಸಲಾಗಿದೆ. ಹಲವು ವಿದ್ವಾಂಸರನ್ನು ನೇರವಾಗಿ ಭೇಟಿ ಮಾಡಿ ಅವರ ಅನುಭವಗಳನ್ನು, ಅಭಿಪ್ರಾಯಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

## ಕೊನೆ ಟಿಪ್ಪಣಿಗಳು

೧. ರಂಗನಾಥ ಕಂಟನಕುಂಟೆ, ೨೦೦೯, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಪು.ಸಂ.೧

೨. ಅದೇ, ಪು.ಸಂ.೧

೩. ಶೇಷಗಿರಿರಾವ್ ಎಲ್.ಎಸ್., ೧೯೮೫, ಕನ್ನಡದ ಅಳಿವು ಉಳಿವು, ಪು.ಸಂ. ೨೧

೪. ಹೊನ್ನು ಸಿದ್ದಾರ್ಥ ಸಿ.ಬಿ.. ೨೦೧೩, ಸಾಹಿತ್ಯ ಅಧ್ಯಯನ-೬, ಪು.ಸಂ. ೨೧

೫. ಅದೇ, ಪು.ಸಂ.೨೧

೬ ಗಂಗಾನಾಯಕ್ ಕೆ.ಎನ್. (ಸಂ) ೨೦೧೧, ಅಕಾರಾದಿ ನಿಘಂಟು ಮತ್ತು ವೈದ್ಯ ನಿಘಂಟು, ಪು.ಸಂ.೩

* * * *

ಅಧ್ಯಾಯ ಎರಡು

# ಕನ್ನಡ ನಿಘಂಟುಗಳನ್ನು ಕುರಿತ ಗ್ರಂಥ ಸಮೀಕ್ಷೆ

೨.೧. ನಿಘಂಟಿನ ಅರ್ಥ ಮತ್ತು ವ್ಯಾಖ್ಯೆಗಳು

೨.೨. ನಿಘಂಟು ರಚನೆಯ ಇತಿಹಾಸ

೨.೩. ನಿಘಂಟುಗಳ ವರ್ಗೀಕರಣ

೨.೪. ಕನ್ನಡ ನಿಘಂಟುಗಳನ್ನು ಕುರಿತ ಗ್ರಂಥ ಸಮೀಕ್ಷೆ

ಅಧ್ಯಾಯ ಎರಡು

# ಕನ್ನಡ ನಿಘಂಟುಗಳನ್ನು ಕುರಿತ ಗ್ರಂಥ ಸಮೀಕ್ಷೆ

ಭಾಷೆ ಮಾನವನ ಅತ್ಯಮೂಲ್ಯವಾದ ಸಂಪತ್ತು. ಭಾಷೆಯು ಸ್ವರ, ವ್ಯಂಜನ, ಪದ, ಪದಪುಂಜ, ವಾಕ್ಯಗಳಿಂದ ರಚನೆಯಾಗಿದ್ದು ಇದನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದು ಭಾಷಾವಿಜ್ಞಾನ. ಇದರಲ್ಲಿ ವಿವಿಧ ಶಾಖೆಗಳಿದ್ದು, ಅವುಗಳಲ್ಲಿ ನಿಘಂಟುಶಾಸ್ತ್ರವೂ ಒಂದಾಗಿದೆ.

ಸಾಮಾನ್ಯ ಅರ್ಥದಲ್ಲಿ ನಿಘಂಟು ಎಂದರೆ ಒಂದು ಭಾಷೆಯಲ್ಲಿನ ಪದಗಳನ್ನು ಅಕಾರಾದಿಯಾಗಿ ಅದೇ ಭಾಷೆಯಲ್ಲಿ ಅಥವಾ ಬೇರೆ ಭಾಷೆಯಲ್ಲಿ ಜೋಡಿಸಿರುವ ಪುಸ್ತಕ. ಆದರೆ ನಿಘಂಟಿನ ಅರ್ಥ ಇಷ್ಟಕ್ಕೆ ಸೀಮಿತವಾಗಿರದೆ ತುಂಬಾ ವ್ಯಾಪಕವಾದುದಾಗಿದೆ. ಹಾಗಾದರೆ ನಿಘಂಟು ಎಂದರೇನು? ನಿಘಂಟು ಸ್ವರೂಪವೇನು? ನಿಘಂಟು ವಿಜ್ಞಾನದ ಲಕ್ಷಣಗಳಾವುವು? ಎನ್ನುವ ಪ್ರಶ್ನೆಗಳು ಬಹುಮುಖ್ಯವಾಗುತ್ತವೆ.

## ೨.೧. ನಿಘಂಟಿನ ಅರ್ಥ ಮತ್ತು ವ್ಯಾಖ್ಯೆಗಳು

ಡಿಕ್ಷನರಿ ಎಂಬ ಪದವು ಮಧ್ಯ ಲ್ಯಾಟಿನ್ ಭಾಷೆಯ 'ಡಿಕ್ಷನಿರಿಯಮ್' ಎನ್ನುವ ಪದದಿಂದ ಬಂದಿದೆ. ಇದರ ಮೂಲ ಗ್ರೀಕ್ ಭಾಷೆಯಲ್ಲಿದೆ. ಆ ಪದವನ್ನು 'ಡಿಕ್ಸಿಯೊ' ಎಂದು ಕರೆಯುತ್ತಾರೆ. ಇದರ ಅರ್ಥ 'ಪದ ಅಥವಾ ಪದಸಮುಚ್ಚಯ' ಎಂದರ್ಥ. ಇದೇ ಅಲ್ಲದೆ ನಿಘಂಟು – ಡಿಕ್ಷನರಿಗೆ ಸಮಾನಾರ್ಥಕವಾಗಿ 'ಲ್ಯಾಕ್ಸಿಕನ್' ಎನ್ನುವ ಪದವನ್ನು ಬಳಸಲಾಗುತ್ತಿತ್ತು. ಅದರ ಅರ್ಥ ಪುರಾತನ ಪದಗಳ ಅರ್ಥಕೋಶದ ಪಟ್ಟಿ ಎಂದು.

ನಿಘಂಟಿನ ಅರ್ಥಕ್ಕಿಂತ ಮುಂಚೆ ನಿಘಂಟು ವಿಜ್ಞಾನ ಮತ್ತು ನಿಘಂಟು ರಚನಾ ವಿಜ್ಞಾನಕ್ಕೂ ಇರುವ ಸೂಕ್ಷ್ಮ ವ್ಯತ್ಯಾಸಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ನಿಘಂಟು ರಚನಾ ವಿಜ್ಞಾನಕ್ಕೆ ಇಂಗ್ಲಿಶ್‌ನಲ್ಲಿ 'Lexicography' ಎಂದು ಹೆಸರು. ೧೬೮೦ರ ಸಮಯದಲ್ಲಿ ಇಂಗ್ಲಿಶ್‌ನಲ್ಲಿ ಈ ಪದವನ್ನು ಸೃಷ್ಟಿಸಲಾಯಿತು. ಗ್ರೀಕ್‌ನ 'lexicos' ಮತ್ತು 'grapho' ಎನ್ನುವ ಎರಡು ಪದಗಳಿಂದ ಸಂಯೋಜಿತವಾದುದು. 'lexicos' ಪದಕ್ಕೆ of or for words ಎನ್ನುವ ಅರ್ಥವಿದ್ದು, 'grapho' ಎನ್ನುವ ಪದಕ್ಕೆ to scratch, to inscribe, to write ಎನ್ನುವ ಅರ್ಥವಿದೆ. ಅಂದರೆ ಪದಗಳ ರಚನಾಶಾಸ್ತ್ರ ಎಂದು ಕರೆಯುತ್ತೇವೆ.

ನಿಘಂಟುಶಾಸ್ತ್ರ ಮತ್ತು ನಿಘಂಟು ರಚನಾಶಾಸ್ತ್ರ ಭಾಷಾವಿಜ್ಞಾನದ ಎರಡು ಶಾಖೆಗಳು. ಪದಗಳ ಮೂಲ ಹಾಗೂ ಅರ್ಥದ ಬಗೆಗೆ ನಿಘಂಟುಶಾಸ್ತ್ರ ತಿಳಿಸಿದರೆ, ಪದಗಳನ್ನು ಕ್ರಮಬದ್ಧವಾಗಿ ಜೋಡಿಸುವ ಕಲೆಯ ತಿಳಿವಳಿಕೆಯನ್ನು ನೀಡುವುದು ನಿಘಂಟು ರಚನಾಶಾಸ್ತ್ರವಾಗಿದೆ. ನಿಘಂಟಿಮವು ಭಾಷೆಯ ಪದಗಳ ಪಟ್ಟಿಯನ್ನು ನೀಡುವುದು. ಇದು ಸಾಮಾನ್ಯವಾಗಿ ಗ್ರೀಕ್, ಲ್ಯಾಟಿನ್, ಸಿರಿಯಾಕ್, ಅರಾಬಿಕ್, ಹೀಬ್ರೂ ಮೊದಲಾದ ಪ್ರಾಚೀನ ಭಾಷೆಗಳ ಪದಗಳನ್ನು ಅಧ್ಯಯನ ಮಾಡುವುದಾಗಿದೆ.

ನಿಘಂಟು ರಚನಾ ವಿಜ್ಞಾನ (Lexicography) ಎಂದರೆ ನಿಘಂಟುಗಳನ್ನು ರಚಿಸುವ ಅಥವಾ ಸಂಗ್ರಹಿಸುವ ಒಂದು ಕಲೆ ಎಂದರ್ಥ. Lexicology ಎಂದರೆ ನಿಘಂಟು ವಿಜ್ಞಾನ. ಶಬ್ದಗಳು, ಅವುಗಳ ರೂಪ, ಇತಿಹಾಸ ಹಾಗೂ ಅರ್ಥಗಳನ್ನು ವಿವರಿಸುವ ಭಾಷಾ ವಿಜ್ಞಾನದ ಜ್ಞಾನಶಾಖೆ ಎಂದು ಅರ್ಥೈಸಬಹುದು.

ನಿಘಂಟು ರಚನಾ ವಿಜ್ಞಾನವೆಂದರೆ ಶಬ್ದಗಳನ್ನು ಸಂಗ್ರಹಿಸುವಾಗ ಒಂದು ನಿರ್ದಿಷ್ಟ ಕ್ರಮದಲ್ಲಿ ಜೋಡಿಸುವುದು. ನಿಘಂಟು ವಿಜ್ಞಾನವೆಂದರೆ ಶಬ್ದಗಳನ್ನು ಅಧ್ಯಯನ ಮಾಡುವ ಜ್ಞಾನದ ಶಾಖೆ. ನಿಘಂಟು ಎಂದರೆ, ಶಬ್ದಕೋಶ. ಈ ಶಬ್ದಕೋಶದಲ್ಲಿ ಬರುವ ಪದಗಳನ್ನು ಭಾಷಾ ವಿಜ್ಞಾನದಲ್ಲಿ 'lexeme' ಎಂದು ಕರೆದರೆ, ಅದನ್ನು ಕನ್ನಡದಲ್ಲಿ ನಿಘಂಟಿಮ ಎಂದು ಕರೆಯಲಾಗಿದೆ. ನಿಘಂಟು ಎಂದರೇನು ಎನ್ನುವ ಪ್ರಶ್ನೆಗೆ ಪಾಶ್ಚಾತ್ಯ ಮತ್ತು ಭಾರತೀಯ ವಿದ್ವಾಂಸರು ನೀಡಿದ ವ್ಯಾಖ್ಯೆಗಳನ್ನು ಗಮನಿಸಬಹುದು.

"A Dictionary is a systematically arranged list of socialized linguistic forms compiled from the speech-habits of a given speech community".[1]

"The Lexican is an inventery of free forms of a language arranged systematically and against each form are shown their Functional load of meaning in each distinct meaningful situation".[2]

"ಒಂದು ಭಾಷೆಯ ಎಲ್ಲ ಶಬ್ದಗಳನ್ನು ಅಕಾರಾದಿಯಾಗಿ ಪಟ್ಟಿ ಮಾಡಿ ಆ ಶಬ್ದಗಳ ಅರ್ಥಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಅವುಗಳಿಗೆ ಸರಿ ಹೊಂದುವ ಪ್ರಾಚೀನ-ನವೀನ ಪ್ರಯೋಗಗಳನ್ನು ಉಲ್ಲೇಖಿಸಿ, ಆ ಶಬ್ದದ ವ್ಯಾಕರಣ ವಿವರಗಳನ್ನು ಸೇರಿಸಿ ರಚಿಸಿರುವ ಪುಸ್ತಕ".[೩]

"ಒಂದು ಭಾಷೆಯಲ್ಲಿರುವ ಪದ, ಪ್ರತ್ಯಯ, ಉಪಸರ್ಗ ಮುಂತಾದ ಭಾಷಾ ಘಟಕಗಳಿಗೆ ಅರ್ಥಗಳನ್ನು ನಿರೂಪಿಸುವ ಕೃತಿ ನಿಘಂಟು ಎನಿಸುತ್ತದೆ".[೪]

"ಒಂದು ಭಾಷೆಯ ಶಬ್ದಗಳ ಏಕಾರ್ಥವನ್ನು, ಬೇರೆ ಬೇರೆ ಅರ್ಥಗಳನ್ನು ಆ ಶಬ್ದಗಳ ಸಮಾನಾರ್ಥಕ ಪದಗಳ ಮೂಲಕವಾಗಿಯಾಗಲೀ, ಕೆಲವು ಸಂದರ್ಭದಲ್ಲಿ ಸಮಾನಾರ್ಥ ಕೊಡುವ

ಇತರ ಭಾಷೆಗಳ ಪದಗಳ ಮೂಲಕವಾಗಿಯಾಗಲೀ ಒಂದು ಕಡೆ ತಿಳಿಸುವ ಗ್ರಂಥ ನಿಘಂಟು. ಇದಕ್ಕೆ ಶಬ್ದಕೋಶ, ಅರ್ಥಕೋಶಗಳೆಂಬ ಹೆಸರುಗಳೂ ಉಂಟು".[೫]

"ನಿಘಂಟು ರಚನೆ ಎಂದರೆ ಒಂದು ಆಕರದಲ್ಲಿಯ ಶಬ್ದಗಳನ್ನೆಲ್ಲ ಒಂದು ಕ್ರಮದಲ್ಲಿ ಹೊಂದಿಸಿ ಅವುಗಳ ಅರ್ಥಗಳನ್ನು ಅದೇ ಭಾಷೆಯಲ್ಲಿ ಬೇರೆ ಪದಗಳನ್ನು ಬಳಸಿ ಹೇಳುವುದು ಅಥವಾ ಬೇರೆ ಒಂದು, ಎರಡು ಅಥವಾ ಹೆಚ್ಚು ಭಾಷೆಗಳಲ್ಲಿ ಪದಗಳನ್ನು ಬಳಸಿ ಹೇಳುವುದು."[೬] ಎಂದು ಬಿ.ಬಿ.ರಾಜಪುರೋಹಿತ ಅವರು ವ್ಯಾಖ್ಯಾನಿಸುತ್ತಾರೆ.

"ಭಾಷೆಯ ಎಲ್ಲ ಶಬ್ದಗಳನ್ನು ವ್ಯವಸ್ಥಿತವಾಗಿ ಪಟ್ಟಿ ಮಾಡಿ ಆ ಶಬ್ದಗಳ ಅರ್ಥವನ್ನು ಒಂದು ಕ್ರಮದಲ್ಲಿ ಜೋಡಿಸಿ ಅವುಗಳಿಗೆ ಸರಿ ಹೊಂದುವ ಪ್ರಾಚೀನ ಹಾಗೂ ನವೀನ ಪ್ರಯೋಗಗಳನ್ನು ಉಲ್ಲೇಖಿಸಿ ಆ ಶಬ್ದದ ವ್ಯಾಕರಣ ವಿವರಗಳನ್ನು ಸೇರಿಸಿ ಪದಗಳನ್ನು ಅಕಾರಾದಿಯಾಗಿ ಜೋಡಿಸಿರುತ್ತವೆ. ಅಂತಹ ಪುಸ್ತಕಕ್ಕೆ ನಿಘಂಟು ಎಂದು ಹೆಸರು. ನಿಘಂಟುವಿಗೆ 'ಕೋಶ' ಎಂದೂ ಕರೆಯುತ್ತಾರೆ."[೭]

"ಯಸ್ಮಾದರ್ಥಾನ್ನಿಘಂಟಯತಿ ತಸ್ಮಾನ್ನಿಘಂಟು ಎಂದು ವ್ಯಾಡಿ ಎಂಬ ನಿಘಂಟುಕಾರ ವಿವರಿಸುತ್ತಾನೆ'.[೮]

"ಸಮಾಮ್ನಯಃ ಸಮಾಮ್ನತಃ ಸವ್ಯಾಖ್ಯಾತವ್ಯಃ ತಮಿಮಂ ಸಮಾಮ್ಯಯಂ ನಿಘಂಟು ಇತ್ಯಾಚಕ್ಷತೇ".[೯]

ನಿಘಂಟು ಪದ ವೈದಿಕ ನಿಘಂಟು ಎನ್ನುವುದರಿಂದ ದೊರೆತಿದೆ. ಬಹಳ ಪ್ರಾಚೀನ ಕಾಲದಲ್ಲಿ ವೇದದಲ್ಲಿ ಕಂಡುಬರುವ ಸಮಾನಾರ್ಥಕ ಪದಗಳನ್ನು ಸಂಗ್ರಹಿಸಿ 'ನಿಘಂಟು' ಎಂದು ಕರೆಯಲಾಯಿತು. (ನಿಗಮನಾತ್-ನಿಗಮದ ಪದಗಳನ್ನು ಸಂಗ್ರಹಿಸು). ನಿಶ್ಚಿತ ಕ್ರಮದಲ್ಲಿ ಪದಗಳನ್ನು ಒಟ್ಟುಗೂಡಿಸಿದ್ದರಿಂದಲೂ (ನಿಹನನಾತ್) ನಿಘಂಟು ಪದ ನಿಷ್ಪನ್ನವಾಯಿತು. ಕನ್ನಡದಲ್ಲಿ ಆಧುನಿಕ ಕ್ರಮದ ಪದಾರ್ಥಕೋಶವನ್ನು 'ನಿಘಂಟು' ಎಂದು ಕರೆಯಲಾಗುತ್ತದೆ. ನಿಘಂಟು ಮತ್ತು ಕೋಶಗಳು ಒಂದೇ ಅರ್ಥದಲ್ಲಿ ಬಳಕೆಯಾಗುತ್ತವೆ. ಅವುಗಳಿಗೆ ಪರ್ಯಾಯವಾಗಿ ನಾಮಮಾಲಾ, ಶಬ್ದಾರ್ಣವ, ಶಬ್ದಾವಳಿ, ಅಭಿದಾನ ಕೋಶ ಎನ್ನುವ ಬೇರೆ ಬೇರೆ ಹೆಸರುಗಳಿವೆ.

ಈ ಮೇಲಿನ ವ್ಯಾಖ್ಯೆಗಳನ್ನು ನೋಡಿದಾಗ ನಿಘಂಟಿನ ಲಕ್ಷಣಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

೧. ನಿಘಂಟು ಎಂದರೆ ಭಾಷೆಯಲ್ಲಿರುವ ಎಲ್ಲ ಶಬ್ದಗಳನ್ನು ಅಕಾರಾದಿಯಾಗಿ ಪಟ್ಟಿ ಮಾಡುವ ಪುಸ್ತಕ.

೨. ಭಾಷೆಯಲ್ಲಿರುವ ಪದ, ಪ್ರತ್ಯಯ, ಉಪಸರ್ಗ ಮುಂತಾದ ಭಾಷಾ ಘಟಕಗಳಿಗೆ ಅರ್ಥಗಳನ್ನು ನಿರೂಪಿಸುವ ಕೃತಿ.

೩. ಶಬ್ದಗಳಿಗೆ ಅರ್ಥಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಪ್ರಾಚೀನ-ನವೀನ ಪ್ರಯೋಗಗಳನ್ನು ಉಲ್ಲೇಖಿಸಿ ಆ ಶಬ್ದದ ವ್ಯಾಕರಣ ವಿವರಗಳನ್ನು ಸೇರಿಸಿ ರಚಿಸಿರುವ ಪುಸ್ತಕ.

೪. ಭಾಷೆಯಲ್ಲಿರುವ ಶಬ್ದಗಳಿಗೆ ಅರ್ಥಗಳನ್ನು ಅದೇ ಭಾಷೆಯಲ್ಲಿಯೋ ಅಥವಾ ಬೇರೊಂದು ಭಾಷೆಯಲ್ಲಿನ ಪದಗಳನ್ನು ವಿವರಿಸುವ ಪುಸ್ತಕ.

ಒಟ್ಟಾರೆಯಾಗಿ "ಭಾಷೆಯಲ್ಲಿನ ಪದಗಳನ್ನು ಅಕಾರಾದಿಯಾಗಿ ಜೋಡಿಸಿ, ಆ ಭಾಷೆಯಲ್ಲಿನ ಅಥವಾ ಮತ್ತೊಂದು ಭಾಷೆಯ ವ್ಯಾಕರಣಾಂಶಗಳ ವಿವರಗಳನ್ನು ನೀಡಿ, ವ್ಯುತ್ಪತ್ತಿ ತಿಳಿಸುವ, ಭಾಷಾ ಕುಟುಂಬದೊಳಗಿನ ಜ್ಞಾತಿ ಪದಗಳನ್ನು ನಿರ್ಣಯಿಸುವ, ಪ್ರಯೋಗಗಳನ್ನು ಕ್ರಮವಾಗಿ ಉಲ್ಲೇಖಿಸುವ ಕೃತಿಗೆ ನಿಘಂಟು" ಎನ್ನಬಹುದು.

### ೨.೨. ನಿಘಂಟು ರಚನೆಯ ಇತಿಹಾಸ

ಭಾಷೆ ಮಾನವನ ಅಮೂಲ್ಯ ವಸ್ತು. ಭಾಷೆಯ ಬೆಳವಣಿಗೆಗೆ ಪೂರಕವಾಗಿರುವ ಶಬ್ದಗಳು ಆ ಭಾಷೆಯ ಜೀವಾಳವಾಗಿರುತ್ತವೆ. ಇವುಗಳನ್ನು ಬಳಸಿದಷ್ಟು ಭಾಷೆ ಸತ್ವಯುತವಾಗಿ ಬೆಳೆಯುತ್ತದೆ. ಯಾವುದೇ ಭಾಷೆಯಿರಲಿ ಅದನ್ನು ಮಾತನಾಡುವವನಿಗೆ ಶಬ್ದಾರ್ಥ ಜ್ಞಾನ ಅವಶ್ಯವಾಗಿ ಬೇಕಾಗುತ್ತದೆ. ಮಾತನಾಡುವವನು ಮತ್ತು ಕೇಳುವವನ ನಡುವೆ ಶಬ್ದಗಳ ಅರ್ಥವತ್ತಾದ ಬಳಕೆ ಹಾಗೂ ಬಳಸಿದ ಶಬ್ದಗಳನ್ನು ಸರಿಯಾಗಿ ಅರ್ಥೈಸಿಕೊಳ್ಳುವ ಎರಡು ಕ್ರಿಯೆಗಳು ಪ್ರಮುಖವಾದವುಗಳಾಗಿವೆ. ಈ ರೀತಿ ಒಂದು ಭಾಷೆಯ ಶಬ್ದಾರ್ಥಗಳ ಸರಿಯಾದ ತಿಳಿವಳಿಕೆಯನ್ನು ನಿಘಂಟು ನೀಡುತ್ತದೆ.

ನಿಘಂಟು ಎಂದರೆ ಶಬ್ದಕೋಶ. ಅಂದರೆ ಭಾಷೆಯ ಶಬ್ದಗಳ ಪಟ್ಟಿ. ನಿಘಂಟಿನ ಇತಿಹಾಸವನ್ನು ನೋಡುವುದಾದರೆ ವೇದಗಳನ್ನು ಗಮನಿಸಬೇಕಾಗುತ್ತದೆ. ಸಂಸ್ಕೃತ ಭಾಷೆಯಲ್ಲಿ ರಚಿತವಾದ ವೇದಗಳ ಕಠಿಣ ಶಬ್ದಗಳಿಗೆ ಅರ್ಥವನ್ನು ತಿಳಿಸುವ ಶಾಸ್ತ್ರವಾದ ನಿರುಕ್ತವು ಷಡಂಗಗಳಲ್ಲಿ ಒಂದಾಗಿದ್ದು, ಪ್ರಾಚೀನ ಕಾಲದ ನಿಘಂಟಿನ ಇತಿಹಾಸದ ಮೂಲ ಸಂಸ್ಕೃತದಲ್ಲಿ ದೊರೆಯುತ್ತದೆ. ತದನಂತರ ಚೀನಾ ದೇಶದಲ್ಲಿ ಹಾನ್ ವಂಶದ ಆಳ್ವಿಕೆಯ ಸಂದರ್ಭದಲ್ಲಿ ನಿಘಂಟುಗಳು ರಚನೆಯಾದವು. ನಂತರ ಗ್ರೀಸ್, ಇಟಲಿಗಳಲ್ಲಿ ಗ್ರೀಕ್, ಲ್ಯಾಟಿನ್ ಭಾಷೆಗಳಿಗೆ ಸಂಬಂಧಿಸಿದ ನಿಘಂಟುಗಳು ರಚನೆಯಾದ ಮಾಹಿತಿ ದೊರೆಯುತ್ತದೆ.

ಹದಿನೈದನೇ ಶತಮಾನದ ಆರಂಭದಲ್ಲಿ ಯುರೋಪಿನಲ್ಲಿ ನಿಘಂಟು ರಚನೆ ಪ್ರಾರಂಭವಾಯಿತು. ಭಾಷಾ ವಿಜ್ಞಾನದ ಪ್ರಭಾವದಿಂದಾಗಿ ಶಾಸ್ತ್ರೀಯವಾಗಿ ನಿಘಂಟುಗಳ ಅಧ್ಯಯನ, ರಚನೆ ತುಂಬಾ ವೈಜ್ಞಾನಿಕವಾದ ರೀತಿಯಲ್ಲಿ ಬೆಳೆದುಬಂದಿತು. ಮೊದಲಿಗೆ ಬಂದ ಜನಪ್ರಿಯ ನಿಘಂಟುಗಳೆಲ್ಲವೂ ಲ್ಯಾಟಿನ್ ಮತ್ತು ಗ್ರೀಕ್ ಪದಗಳಿಗೆ ಇಂಗ್ಲಿಷ್ ಅರ್ಥಗಳನ್ನು ವಿವರಿಸುವ ನಿಘಂಟುಗಳಾಗಿದ್ದವು. ಯುರೋಪ್‌ನಲ್ಲಿ ಆರಂಭಗೊಂಡ ನಿಘಂಟು ರಚನೆಯ ಉದ್ದೇಶ ಲ್ಯಾಟಿನ್, ಫ್ರೆಂಚ್ ಮೊದಲಾದ ಭಾಷೆಗಳನ್ನು ಕಲಿಯುವುದಾಗಿತ್ತು.

ಅದಾದ ನಂತರ, ೧೬೦೪ರಲ್ಲಿ 'ರಾಬರ್ಟ್ ಕೌಂಡ್ರೆ' (Robert Cowndry) ಎನ್ನುವ ನಿಘಂಟುಕಾರ "A Table Alphabetical' ಎನ್ನುವ ಇಂಗ್ಲಿಶ್ ಭಾಷೆಯ ಮೊದಲ ನಿಘಂಟನ್ನು ರಚಿಸಿದ. ಇದು ಸುಮಾರು ಮೂರು ಸಾವಿರ ಪದಗಳನ್ನು ಒಳಗೊಂಡಿತ್ತು. ಇದಾದ ನಂತರ ೧೭೫೫ರಲ್ಲಿ "The Dictionary of English Language" ಎನ್ನುವ ಆ ಕಾಲಕ್ಕೆ ಪ್ರಸಿದ್ಧವಾದ ನಿಘಂಟನ್ನು ಸ್ಯಾಮುವೆಲ್ ಜಾನ್ಸನ್ ರಚಿಸಿದ್ದು, ಇದು ಸುಮಾರು ನಲವತ್ತೆರಡು ಸಾವಿರ ಪದಗಳನ್ನು ಒಳಗೊಂಡ ವೈಜ್ಞಾನಿಕ ರೀತಿಯ ನಿಘಂಟಾಗಿತ್ತು.

೧೮೮೪-೧೯೨೮ರ ಅವಧಿಯಲ್ಲಿ ನಾಲ್ಕು ಸಂಪುಟಗಳಲ್ಲಿ ಪ್ರಕಟವಾದ "ಆಕ್ಸ್‌ಫರ್ಡ್ ಇಂಗ್ಲಿಶ್ ಡಿಕ್ಷನರಿ" ಸುಮಾರು ಆರು ಲಕ್ಷ ಶಬ್ದಗಳನ್ನೊಳಗೊಂಡ ಬೃಹತ್ ನಿಘಂಟು. ಇದು ನಿಘಂಟು ಲೋಕದ ವಿಸ್ಮಯ ಕಾರ್ಯವಾಗಿದೆ.

ಸಂಸ್ಕೃತದಲ್ಲಿ 'ವೈದಿಕ ನಿಘಂಟು' ಮೊದಲನೆಯ ನಿಘಂಟು ಎಂದು ನಂಬಲಾಗಿದ್ದು ಭಾರತೀಯರು ಪ್ರಾಚೀನ ಕಾಲದಿಂದಲೂ ನಿಘಂಟುಗಳನ್ನು ಉಪಯೋಗಿಸುತ್ತಾ ಬಂದಿರುವುದು ಇದರಿಂದ ತಿಳಿಯುತ್ತದೆ. ಪಾಶ್ಚಾತ್ಯರಂತೆ ಶಾಸ್ತ್ರೀಯ ಮಾದರಿಯನ್ನು ಅನುಸರಿಸದೆ ಪ್ರಾಚೀನ ಲಕ್ಷಣ ಗ್ರಂಥಗಳಲ್ಲಿರುವ ಸೂತ್ರಗಳ ಮೂಲಾರ್ಥ ಪದಗಳು ಸಂಗ್ರಹ ಪುಸ್ತಕವಾಗಿದ್ದವು. ಸಂಸ್ಕೃತದಲ್ಲಿ ದೊರೆತ ನಿರುಕ್ತವನ್ನು ಬರೆದವನು 'ಯಾಸ್ಕ'. ಈ ನಿರುಕ್ತ ಭಾಗವು ನಿಘಂಟುಗಳೆಂಬ ಗ್ರಂಥದ ಅರ್ಥವನ್ನು ವಿವರಿಸುತ್ತದೆ. ಅಮರಸಿಂಹನ 'ಅಮರಕೋಶ' ಸಂಸ್ಕೃತದಲ್ಲಿ ಪ್ರಸಿದ್ಧವಾದ ನಿಘಂಟಾಗಿದೆ. ವರರುಚಿ, ಧನಂಜಯ, ಭಾಗುರಿ, ಹಲಾಯುಧ, ಗೋಪಾಲಕ ಮೊದಲಾದವರು ಸಂಸ್ಕೃತದ ಪ್ರಸಿದ್ಧ ನಿಘಂಟುಕಾರರಾಗಿದ್ದಾರೆ.

ಇನ್ನು ಕನ್ನಡ ನಿಘಂಟು ಇತಿಹಾಸ ಪ್ರಾರಂಭವಾಗುವುದು ಕ್ರಿ.ಶ. ಹತ್ತನೇ ಶತಮಾನದಿಂದ. ರನ್ನನು ಬರೆದ 'ರನ್ನಕಂದ'ವೇ ಕನ್ನಡದಲ್ಲಿ ದೊರೆತ ಮೊದಲ ನಿಘಂಟಾಗಿದ್ದು, ಈತನು ಕನ್ನಡದ ಆದಿ ನಿಘಂಟುಕಾರನಾಗಿದ್ದಾನೆ. ರನ್ನನಿಂದ ಪ್ರಾರಂಭವಾದ ಕನ್ನಡ ನಿಘಂಟು ಚರಿತ್ರೆಯ ಪರಂಪರೆ ಕ್ರಿ.ಶ. ಸು. ಹತ್ತನೇ ಶತಮಾನದಿಂದ ಇಲ್ಲಿಯವರೆಗೂ ಏಕಭಾಷಿಕ, ದ್ವಿಭಾಷಿಕ, ಬಹುಭಾಷಿಕ, ಪಾರಿಭಾಷಿಕ, ಉಪಭಾಷಿಕ, ಏಕಾರ್ಥ, ನಾನಾರ್ಥ, ನುಡಿಗಟ್ಟು, ವಿಶ್ವಕೋಶಗಳು, ಪದಕೋಶಗಳು ಮೊದಲಾದ ರೀತಿಯ ನಿಘಂಟುಗಳು ಕನ್ನಡ ಭಾಷೆಯಲ್ಲಿ ರಚನೆಯಾಗಿದ್ದು ನಮ್ಮ ನುಡಿ ಸಂಪತ್ತಿನ ಬೆಳವಣಿಗೆಗೆ ಸಾಕ್ಷಿಯಾಗಿವೆ. ಸುಮಾರು ೪೦ಕ್ಕೂ ಹೆಚ್ಚು ಪ್ರಾಚೀನ ಕನ್ನಡ ನಿಘಂಟುಗಳು ಉಪಲಬ್ಧವಾಗಿದ್ದು, ಇವುಗಳನ್ನು

೧. ಕನ್ನಡ-ಕನ್ನಡ ನಿಘಂಟುಗಳು

೨. ಕನ್ನಡ-ಸಂಸ್ಕೃತ ನಿಘಂಟುಗಳು

೩. ಸಂಸ್ಕೃತ-ಕನ್ನಡ ನಿಘಂಟುಗಳು

೪. ಟೀಕಾ ನಿಘಂಟುಗಳು

ಎಂದು ನಾಲ್ಕು ಬಗೆಯಾಗಿ ವಿಂಗಡಿಸಲಾಗಿದ್ದು, ಪ್ರಮುಖವಾದ ಕೆಲ ನಿಘಂಟುಗಳ ಸ್ಥೂಲ ವಿವರಣೆಯನ್ನು ಈ ಕೆಳಗೆ ನೀಡಲಾಗಿದೆ.

೧) ಕವಿ ರನ್ನ ರಚಿಸಿದ 'ರನ್ನಕಂದ' ಕನ್ನಡದ ಮೊದಲ ನಿಘಂಟಾಗಿದೆ. ಈ ನಿಘಂಟಿನ ರಚನೆಯ ಕಾಲ ಕ್ರಿ.ಶ. ಸುಮಾರು ೯೯೩ ಎಂದು ಅಂದಾಜಿಸಲಾಗಿದ್ದು, ರನ್ನನನ್ನು ಆದಿ ನಿಘಂಟುಕಾರ ಎಂದು ಕರೆಯಲಾಗಿದೆ. ರನ್ನಕಂದ ನಿಘಂಟಿನಲ್ಲಿ ೪ ಚಂಪಕ ಮಾಲಾ ವೃತ್ತಗಳು ಹಾಗೂ ೪೧ ಕಂದ ಪದ್ಯಗಳನ್ನೊಳಗೊಂಡ ೪೫ ಪದ್ಯಗಳಿವೆ. ಆ ಕಾಲದಲ್ಲಿ ಪ್ರಚಲಿತವಿದ್ದ ಹಳೆಗನ್ನಡ ರೂಪಗಳ ಪದಗಳಿಗೆ ಅರ್ಥಗಳನ್ನು ಪದ್ಯ ರೂಪದಲ್ಲಿ ಕೊಡಲಾಗಿದೆ.

೨) ಶಾಸ್ತ್ರ ವಿಷಯ ನಿಪುಣನಾದ ೨ನೇ ನಾಗವರ್ಮನು ಕ್ರಿ.ಶ.ಸುಮಾರು ೧೧೪೫ರಲ್ಲಿ ರಚಿಸಿದ ನಿಘಂಟೆಂದರೆ "ಅಭಿದಾನ ವಸ್ತುಕೋಶ". ಕನ್ನಡದಲ್ಲಿ ದೊರೆತ ಮೊದಲ ದ್ವಿಭಾಷಾ ನಿಘಂಟಾಗಿದ್ದು, ಕಂದ ಮತ್ತು ವೃತ್ತಗಳನ್ನೊಳಗೊಂಡ ಏಕಾರ್ಥ ಕಾಂಡ, ನಾನಾರ್ಥ ಕಾಂಡ, ಸಾಮಾನ್ಯ ಕಾಂಡ ಎಂಬ ಮೂರು ಕಾಂಡಗಳಿವೆ. ಕನ್ನಡ ಕಾವ್ಯಗಳಲ್ಲಿನ ಸಂಸ್ಕೃತ ಶಬ್ದಗಳಿಗೆ ಕನ್ನಡ ಅರ್ಥಗಳನ್ನು ತಿಳಿಸುತ್ತದೆ.

೩) ಕನ್ನಡದ ಪ್ರಸಿದ್ಧ ವೈಯಾಕರಣಿಯಾದ ಕೇಶಿರಾಜನ ಶಬ್ದಮಣಿದರ್ಪಣ ಕೃತಿಯು ವ್ಯಾಕರಣವೂ ಹೌದು, ನಿಘಂಟೂ ಹೌದು. ಈ ಕೃತಿಯಲ್ಲಿ ಧಾತು ಪ್ರಕರಣ, ರಳ ಕ್ಷಳ ಕುಳ ಪ್ರಕರಣ ಹಾಗೂ ಹಳೆಗನ್ನಡ ಶಬ್ದಗಳಿಗೆ ಅರ್ಥ ಹೇಳುವ ಪ್ರಯೋಗಸಾರ ಎನ್ನುವ ಮೂರು ಪ್ರಕರಣಗಳಲ್ಲಿ ಸಾವಿರಾರು ಹಳೆಗನ್ನಡ ಪದಗಳನ್ನು ದಾಖಲಿಸಲಾಗಿದೆ.

೪) ಕ್ರಿ.ಶ.ಸುಮಾರು ೧೩೯೮ರಲ್ಲಿ ೨ನೇ ಮಂಗರಾಜನಿಂದ ರಚಿಸಲ್ಪಟ್ಟ "ಅಭಿನವಾಭಿದಾನಂ" ಎನ್ನುವ ನಿಘಂಟು ಸುಮಾರು ೫೩೯ ವಾರ್ಧಕ ಷಟ್ಪದಿಗಳಿಂದ ರಚಿತವಾಗಿದೆ. ಈ ಕೋಶದಲ್ಲಿ ಸ್ವರ್ಗ, ಭೂಮಿ, ಪಾತಾಳ, ಸಾಮಾನ್ಯ ಮತ್ತು ನಾನಾರ್ಥ ಎನ್ನುವ ಐದು ಕಾಂಡಗಳಿದ್ದು, ಕನ್ನಡ ಭಾಷೆಯ ಪ್ರಾಚೀನ ಸಾಹಿತ್ಯದಲ್ಲಿ ಬಳಕೆಯಾಗುವ ಸಂಸ್ಕೃತ ಪದಗಳಿಗೆ ಕನ್ನಡದ ಅರ್ಥವನ್ನು ಈ ನಿಘಂಟು ತಿಳಿಸುತ್ತದೆ.

೫) "ಕರ್ಣಾಟಕ ಶಬ್ದಸಾರ"ವು ಕನ್ನಡ ಪದಗಳಿಗೆ ಕನ್ನಡದಲ್ಲಿ ಅರ್ಥ ಹೇಳುವ ಕೋಶವಾಗಿದ್ದು, ಕ್ರಿ.ಶ. ಸುಮಾರು ೧೪೦೦ರಲ್ಲಿ ರಚನೆಯಾಗಿದೆ. ಇದರ ಕರ್ತೃ ಯಾರೆಂಬುದು ತಿಳಿದುಬಂದಿಲ್ಲ. ಈ ನಿಘಂಟಿನಲ್ಲಿ ಹಳೆಗನ್ನಡ, ನಡುಗನ್ನಡ, ದೇಶ್ಯ ಶಬ್ದಗಳು ಹಾಗೂ ತದ್ಭವಗಳ ಅರ್ಥವನ್ನು ಹೇಳಿದೆ.

೬) ಕರ್ಣಾಟಕ ನಿಘಂಟು ಹಳೆಗನ್ನಡ ಶಬ್ದಗಳಿಗೆ, ದೇಶ್ಯ ಮತ್ತು ತದ್ಭವಗಳಿಗೆ ಅರ್ಥ ಹೇಳುವ ಕನ್ನಡ – ಕನ್ನಡ ಲಘು ನಿಘಂಟು. ಕಂದ, ವಿವಿಧ ವೃತ್ತಗಳ ೯೮ ಪದ್ಯಗಳಿದ್ದು, 'ಕಬ್ಬಿಗರ ಕೈಪಿಡಿ' ಎಂದು ಪ್ರಸಿದ್ಧಿ ಪಡೆದಿದೆ. ಇದರ ಕರ್ತೃವಿನ ಮಾಹಿತಿ ದೊರೆತಿಲ್ಲ. ಕ್ರಿ.ಶ.ಸುಮಾರು

೧೪೦೦ರಲ್ಲಿ ರಚನೆಯಾದ ಈ ನಿಘಂಟಿನ ಮೇಲೆ ಕೇಶಿರಾಜನ ಶಬ್ದಮಣಿದರ್ಪಣದ ಪ್ರಭಾವವಿರುವುದು ಕಂಡು ಬರುತ್ತದೆ.

೭) ಪ್ರಾಚೀನ ನಿಘಂಟುಗಳಲ್ಲಿ ಗೊಂದಲಮಯವೂ, ಕಠಿಣವೂ ಆದ ನಿಘಂಟೆಂದರೆ ಕ್ರಿ.ಶ. ಸುಮಾರು ೧೪೫೦ರಲ್ಲಿ ರಚಿಸಲ್ಪಟ್ಟ ಚತುರಾಸ್ಯ ಬೊಮ್ಮರಸನ "ಚತುರಾಸ್ಯ ನಿಘಂಟು". ಇದರಲ್ಲಿ ೨೧೩ ಕಂದ ಪದ್ಯಗಳಿದ್ದು, ದೇಶ್ಯ ಮತ್ತು ತದ್ಭವಗಳಿಗೆ ಪರ್ಯಾಯವಾದ ಅರ್ಥಗಳನ್ನು ನೀಡಲಾಗಿದೆ.

ಸಂಸ್ಕೃತ ಧಾತುಗಳಿಗೆ ಕನ್ನಡದಲ್ಲಿ ಅರ್ಥವನ್ನು ನಿರೂಪಿಸಿರುವ ಸುಮಾರು ೧೫೦೦ರಲ್ಲಿ ರಚಿಸಲ್ಪಟ್ಟ "ಕಾಶಕೃತ್ಸ್ಯ ಧಾತು ವ್ಯಾಖ್ಯಾ" ಎನ್ನುವ ನಿಘಂಟು, ಸಂಸ್ಕೃತದ ಮೂಲ ಗ್ರಂಥಗಳಲ್ಲಿ ಉಕ್ತವಾಗಿರುವ ಮೂಲಿಕಾದಿಗಳಿಗೆ ಕನ್ನಡದಲ್ಲಿ ಪ್ರತಿಪದಗಳನ್ನು ಕೊಟ್ಟಿರುವ ಕ್ರಿ.ಶ.ಸುಮಾರು ೧೫೦೦ರಲ್ಲಿ ರಚಿತವಾಗಿರುವ ಅಜ್ಞಾತ ಕರ್ತೃವಿನ "ಧನ್ವಂತರಿ ನಿಘಂಟು", ಕಾಲದ ಬಗೆಗಾಗಲಿ, ಕರ್ತೃವಿನ ಬಗೆಗಾಗಲಿ ತಿಳಿದಿಲ್ಲದ ೩೦ ಕಂದ ಪದ್ಯಗಳಿರುವ ಸಂಸ್ಕೃತ ಶಬ್ದಗಳಿಗೆ ನಾನಾರ್ಥಗಳನ್ನು ತಿಳಿಸುವ "ಶಬ್ದ ರತ್ನಾಕರ" ಎನ್ನುವ ನಿಘಂಟು ಹೀಗೆ ಆ ಕಾಲದ ಹಲವಾರು ನಿಘಂಟುಗಳು ಅಂದಿನ ಕನ್ನಡ ನಿಘಂಟು ಕ್ಷೇತ್ರಕ್ಕೆ ಗಣನೀಯ ಕೊಡುಗೆಯನ್ನು ನೀಡಿವೆ.

ಕನ್ನಡದಲ್ಲಿ ದೊರೆತಿರುವ ಅಂದಿನ ಕಾಲದ ನಿಘಂಟುಗಳನ್ನು ಗಮನಿಸಿದಾಗ ಈ ಕೆಳಕಂಡ ವೈಶಿಷ್ಟ್ಯಗಳು ಕಂಡುಬರುತ್ತವೆ.

೧) ಕನ್ನಡದ ಅಂದಿನ ನಿಘಂಟುಗಳು, ಸಂಸ್ಕೃತದಿಂದ ನಿಘಂಟು ರಚನೆಯ ವಿಧಾನವನ್ನು ಎರವಲು ಪಡೆದಿದ್ದು, ಸಂಸ್ಕೃತ ನಿಘಂಟು ರಚನೆಯ ವಿನ್ಯಾಸಕ್ಕೆ ತಕ್ಕಂತೆ ರಚನೆಯಾಗಿದೆ.

೨) ಕನ್ನಡದ ಪ್ರಾಚೀನ ನಿಘಂಟುಗಳನ್ನು ಭಾಷಾ ದೃಷ್ಟಿಯಿಂದ ಕನ್ನಡ – ಕನ್ನಡ, ಕನ್ನಡ– ಸಂಸ್ಕೃತ, ಸಂಸ್ಕೃತ – ಕನ್ನಡ ನಿಘಂಟುಗಳೆಂದು ಮೂರು ವಿಧಗಳನ್ನಾಗಿ ವಿಂಗಡಿಸಲಾಗಿದೆ.

೩) ವೃತ್ತಗಳು, ಕಂದ, ಷಟ್ಪದಿ, ಶ್ಲೋಕ, ಗದ್ಯ ಮೊದಲಾದ ಸಾಹಿತ್ಯಿಕ ಪ್ರಕಾರಗಳಲ್ಲಿ ಈ ಕನ್ನಡದ ಪ್ರಾಚೀನ ನಿಘಂಟುಗಳು ರಚನೆಯಾಗಿದ್ದು, ನೆನಪಿಟ್ಟುಕೊಳ್ಳಲಿಕ್ಕೆ ಸುಲಭವಾಗಿವೆ.

೪) ರಾಜಾಶ್ರಯವನ್ನು ಪಡೆದ, ಸಂಸ್ಕೃತ ತಿಳಿವಳಿಕೆಯುಳ್ಳ, ಕವಿಗಳಿಂದ, ಪಂಡಿತರಿಂದ ಅಂದಿನ ನಿಘಂಟುಗಳು ರಚಿಸಲ್ಪಟ್ಟಿವೆ.

೫) ಅಂದಿನ ನಿಘಂಟುಗಳು ಹಳೆಗನ್ನಡ, ನಡುಗನ್ನಡ ಸಾಹಿತ್ಯಾಧ್ಯಯನಕ್ಕೆ ಹಾಗೂ ಪದ ಬೆಳವಣಿಗೆಯ ಚರಿತ್ರೆ ತಿಳಿದುಕೊಳ್ಳಲು ಅತ್ಯಗತ್ಯವಾದ ಆಕರ ಕೈಪಿಡಿಗಳಾಗಿವೆ.

ಭಾಷೆಯ ಬಳಕೆ, ಕಾಲಮಾನ, ಅಂದಿನ ಅವಶ್ಯಕತೆಗನುಗುಣವಾಗಿ ಆ ನಿಘಂಟುಗಳು ರೂಪುಗೊಂಡಿವೆ. ಆ ಕಾಲದ ನಿಘಂಟುಗಳೆಲ್ಲವೂ ಬಹುತೇಕ ಪದ್ಯರೂಪದಲ್ಲಿದ್ದು, ಕನ್ನಡ ನಿಘಂಟು ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿವೆ. ನಿಘಂಟು ರಚನೆಯ ಶಾಸ್ತ್ರೀಯ ಹಾಗೂ ವೈಜ್ಞಾನಿಕ ತಿಳಿವಳಿಕೆಯ ವಿಧಾನ ಅಂದಿನ ನಿಘಂಟುಕಾರರಿಗೆ ತಿಳಿಯದೇ ಇದ್ದರೂ, ಅಂದಿನ ಶಬ್ದ

ಪರಂಪರೆಯನ್ನು ದಾಖಲಿಸುವಲ್ಲಿ ಯಶಸ್ವಿಯಾಗಿದ್ದಾರೆ. ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ರಚನೆಯಾದ ಮಿಷನರಿ ನಿಘಂಟುಗಳು ಹಾಗೂ ಆಧುನಿಕ ಕಾಲದ ಇತರ ಕನ್ನಡ ನಿಘಂಟುಗಳಿಗೆ ಇವು ಮೂಲಬೇರುಗಳಾಗಿವೆ. ಹೀಗೆ ಅಂದಿನ ನಿಘಂಟುಗಳು ನಮ್ಮ ಪದ ಪರಂಪರೆಯನ್ನು ದಾಖಲಿಸಿದ ಆಕರ ಸಾಮಗ್ರಿಗಳಾಗಿವೆ. ಆಧುನಿಕ ಸಾಹಿತ್ಯದ ಕಾವ್ಯ, ಕಥೆ, ಕಾದಂಬರಿ, ವಿಮರ್ಶೆ, ಗ್ರಂಥ ಸಂಪಾದನೆ ಮೊದಲಾದ ಸಾಹಿತ್ಯದ ಪ್ರಕಾರಗಳು ಪಾಶ್ಚಾತ್ಯರ ಪ್ರಭಾವಕ್ಕೊಳಗಾದಂತೆ, ಕನ್ನಡ ನಿಘಂಟು ಕ್ಷೇತ್ರವೂ ಒಳಗಾಗಿದೆ. ಕನ್ನಡದಲ್ಲಿ ನಿಘಂಟು ರಚನೆಯ ಪರಂಪರೆ ಸಂಸ್ಕೃತದ ಪ್ರಭಾವದಿಂದ ಬೆಳೆದು ಬಂದಿದ್ದರೂ, ಪಾಶ್ಚಿಮಾತ್ಯ ವಿದ್ವಾಂಸರ ಮೂಲಕವೇ ಶಾಸ್ತ್ರವಾಗಿ ರೂಪುಗೊಂಡಿದೆ.

ನವೋದಯದ ಸಂದರ್ಭದಲ್ಲಿ ಭಾರತವನ್ನು ಪ್ರವೇಶಿಸಿದ ಕ್ರೈಸ್ತ ಮಿಷನರಿಗಳು ಆಯಾ ಪ್ರದೇಶದ ಭಾಷೆ – ಸಾಹಿತ್ಯವನ್ನು ಅಭ್ಯಸಿಸುವುದರ ಜೊತೆಗೆ ಪ್ರಾದೇಶಿಕ ಭಾಷೆಯ ವ್ಯಾಕರಣ ಹಾಗೂ ನಿಘಂಟುಗಳನ್ನು ಸಿದ್ಧಪಡಿಸುವ ಕೆಲಸವನ್ನು ಮಾಡಿದರು. ಭಾಷೆಯ ತೊಂದರೆಗಳನ್ನು ನಿವಾರಿಸಿಕೊಳ್ಳಲು, ಆಡಳಿತ ಕೌಶಲ್ಯವನ್ನು ಹೆಚ್ಚಿಸಿಕೊಳ್ಳಲು, ಕ್ರಿಶ್ಚಿಯನ್ ಧರ್ಮ ಪ್ರಸಾರ ಮಾಡಲು ಭಾರತಕ್ಕೆ ಬಂದ ಲಂಡನ್ ಮಿಷನ್, ವೆಸ್ಲಿಯನ್ ಮೆಥೊಡಿಸ್ಟ್ ಮಿಷನ್, ಬಾಸೆಲ್ ಮಿಷನ್ ಮೊದಲಾದ ಕ್ರಿಶ್ಚಿಯನ್ ಸಂಸ್ಥೆಗಳ ಮಿಶನರಿಗಳು ತಮ್ಮ ಉದ್ದೇಶ ಸಾಧನೆಗಾಗಿ ಸ್ಥಳೀಯರ ಜೊತೆ ಸಂಪರ್ಕ ಸಾಧಿಸಲು ನಿಘಂಟುಗಳನ್ನು ರಚಿಸಲು ಆರಂಭಿಸಿದ್ದು, ಕನ್ನಡ ನಿಘಂಟು ಚರಿತ್ರೆಗೆ ಹೊಸ ಆಯಾಮವನ್ನು ನೀಡಿದವು.

ಆಧುನಿಕ ಕನ್ನಡ ನಿಘಂಟು ಕ್ಷೇತ್ರಕ್ಕೆ ವೈಜ್ಞಾನಿಕ ಶಿಸ್ತನ್ನು ತಂದುಕೊಟ್ಟು, ಅಕಾರಾದಿ ನಿಘಂಟುಗಳನ್ನು ರಚಿಸಿದವರು ಮಿಶನರಿಗಳು. ಇವರಿಂದ ಹೊಸ ರೀತಿಯ ನಿಘಂಟು ರಚನಾ ವಿಧಾನ ಕನ್ನಡದಲ್ಲಿ ಆರಂಭವಾಯಿತು. ಮಿಶನರಿಗಳು ರಚಿಸಿದ ಹಾಗೂ ಅವರ ನಂತರ ಬಂದ ದೇಸಿ ವಿದ್ವಾಂಸರು ರಚಿಸಿದ ಆಧುನಿಕ ಕೋಶಗಳು ವೈವಿಧ್ಯಮಯವಾಗಿದ್ದು, ಸಾಂಪ್ರದಾಯಿಕ ನಿಘಂಟು ವಿಧಾನವನ್ನು ಕೈಬಿಟ್ಟು ಪದಗಳಿಗೆ ಅಕಾರಾದಿ ಜೋಡಣೆ, ವ್ಯಾಕರಣಾಂಶಗಳ ವಿವರ, ವ್ಯುತ್ಪತ್ತಿ, ಭಾಷಾ ಕುಟುಂಬದೊಳಗಿನ ಜ್ಞಾತಿ ಪದಗಳ ನಿರ್ಣಯ ಹೀಗೆ ಹಲವಾರು ವಿಧಾನಗಳನ್ನು ನಿಘಂಟು ರಚನೆಯಲ್ಲಿ ಬಳಸುವ ಮೂಲಕ ಕನ್ನಡ ಕೋಶ ಕ್ಷೇತ್ರವನ್ನು ಸಮೃದ್ಧವಾಗಿ ಬೆಳೆಸಿದರು.

ಆಧುನಿಕ ನಿಘಂಟುಗಳು ವೈವಿಧ್ಯಮಯವಾಗಿದ್ದು, ಈ ಕೆಳಕಂಡ ಲಕ್ಷಣಗಳನ್ನು ಹೊಂದಿವೆ.

೧. ಕನ್ನಡದ ಇಂದಿನ ನಿಘಂಟುಗಳು ಆರಂಭದಲ್ಲಿ ಇಂಗ್ಲೀಷಿನ ಪ್ರೇರಣೆಯಿಂದ ರಚನೆಯಾಗಿವೆ.

೨. ಈ ಕಾಲದ ನಿಘಂಟುಗಳನ್ನು ಭಾಷೆಯನ್ನಾಧರಿಸಿ ಏಕಭಾಷಿಕ, ದ್ವಿಭಾಷಿಕ, ಬಹುಭಾಷಿಕ ಎಂದು ವರ್ಗೀಕರಿಸಲಾಗಿದೆ.

೩. ಇಂದಿನ ಕಾಲದ ನಿಘಂಟುಗಳ ರಚನೆಯನ್ನು ಪ್ರಾರಂಭಿಸಿದವರು ಮಿಶನರಿಗಳು.

೪. ನಿಘಂಟುಗಳು ಶಬ್ದಕ್ಕೆ ಅರ್ಥವನ್ನಷ್ಟೇ ಕೊಡದೇ ಧ್ವನಿ, ವ್ಯುತ್ಪತ್ತಿ, ವ್ಯಾಕರಣಾಂಶಗಳು ಉಲ್ಲೇಖ, ಪ್ರಯೋಗ ಮೊದಲಾದ ವೈಜ್ಞಾನಿಕ ತಳಹದಿಯ ಶಾಸ್ತ್ರೀಯ ವಿಧಾನವನ್ನೊಳಗೊಂಡಿವೆ.

೫. ಅಕಾರಾದಿ ಕ್ರಮವನ್ನು ಇಂದಿನ ಕನ್ನಡ ನಿಘಂಟುಗಳು ಅನುಸರಿಸಿವೆ.

೬. ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ, ಶಿಕ್ಷಣ, ಧರ್ಮ, ಭಾಷೆ ಮೊದಲಾದ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದ ಹಲವಾರು ನಿಘಂಟುಗಳು ಈ ಕಾಲದಲ್ಲಿ ರಚಿತವಾಗಿವೆ.

೭. ಚಂಪೂ, ವಚನ, ರಗಳೆ, ಷಟ್ಪದಿ, ಕೀರ್ತನೆ ಮೊದಲಾದ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದ ಕೋಶಗಳು ಹೊರಬಂದಿವೆ.

೮. ಇಂದಿನ ಕಾಲದ ನಿಘಂಟುಗಳು ಏಕಭಾಷೆಯಲ್ಲದೇ ಕನ್ನಡ – ಇಂಗ್ಲೀಶ್, ಇಂಗ್ಲಿಶ್ – ಕನ್ನಡ, ಲ್ಯಾಟಿನ್ – ಕನ್ನಡ, ಕನ್ನಡ – ರಷ್ಯನ್, ಕನ್ನಡ – ಜಪಾನೀಸ್, ಕನ್ನಡ – ತಮಿಳು, ಕನ್ನಡ – ತೆಲುಗು, ಕನ್ನಡ – ತುಳು ಇನ್ನು ಹಲವಾರು ಭಾಷೆಗಳ ದ್ವಿಭಾಷಿಕ, ಬಹುಭಾಷಿಕ ನಿಘಂಟುಗಳು ಬಂದಿವೆ.

೯. ವ್ಯಕ್ತಿ ಪ್ರಯತ್ನವಲ್ಲದೇ ಸಾಂಸ್ಥಿಕ ಪ್ರಯತ್ನಗಳು ನಿಘಂಟು ರಚನೆಯನ್ನು ಈ ಕಾಲದಲ್ಲಿ ಮಾಡಿದ್ದು, ವಿಶ್ವವಿದ್ಯಾಲಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಮಠಗಳು, ಒಕ್ಕೂಟಗಳು, ಸಂಸ್ಥೆಗಳು ನಿಘಂಟುಗಳನ್ನು ಪ್ರಕಟಿಸಿವೆ.

## ೨.೩. ನಿಘಂಟುಗಳ ವರ್ಗೀಕರಣ

ಕನ್ನಡ ನಿಘಂಟು ರಚನೆಯ ವಿಧಾನಗಳು ಕಾಲದಿಂದ ಕಾಲಕ್ಕೆ ವೈಜ್ಞಾನಿಕ ತಳಹದಿಯನ್ನು ಪಡೆದು ಭಾಷಾಶಾಸ್ತ್ರ ನಿಯಮಗಳಿಗನುಸಾರವಾಗಿ, ಬಳಕೆದಾರರಿಗೆ ಪೂರಕವಾಗಿ ರಚನೆಯಾಗಿವೆ. ಇಂದು ನಿಘಂಟುಗಳು ಪದಕ್ಕೆ ಅರ್ಥ ನೀಡುವ ಕೋಶಗಳಾಗಿರದೇ ಪದಗಳ ವ್ಯಾಖ್ಯೆ, ವಿವರಣೆಗಳನ್ನು ಕೊಡುವ, ಶಬ್ದ ಚರಿತ್ರೆಯನ್ನು ದಾಖಲಿಸಿರುವ ಕೈಪಿಡಿಗಳಾಗಿವೆ.

ಮಿಶನರಿಗಳಿಂದ ಆರಂಭವಾದ ಆಧುನಿಕ ನಿಘಂಟು ಪರಂಪರೆ ಸಮೃದ್ಧವಾಗಿ ಬೆಳೆದು ಬಂದಿದ್ದು, ಹಲವಾರು ರೀತಿಯ ನಿಘಂಟುಗಳು ರಚನೆಯಾಗಿದ್ದು, ಅವು ಈ ಕೆಳಕಂಡಂತಿವೆ.

೨.೩.೧. ಮಿಶನರಿ ನಿಘಂಟುಗಳು

೨.೩.೨. ದೇಶಿ ವಿದ್ವಾಂಸರ ನಿಘಂಟುಗಳು

೨.೩.೩. ಸಾಹಿತ್ಯಿಕ ನಿಘಂಟುಗಳು

೨.೩.೪. ಲಕ್ಷಣಶಾಸ್ತ್ರ ನಿಘಂಟುಗಳು

೨.೩.೫. ವಿಶಿಷ್ಟ ಪದಕೋಶಗಳು

೨.೩.೬. ಕವಿ ಪದಪ್ರಯೋಗ ಕೋಶಗಳು

೨.೩.೭. ಸಂಖ್ಯಾ ಪದಕೋಶಗಳು

೨.೩.೮. ಇತರೆ ಕೋಶಗಳು

**೨.೩.೧. ಮಿಶನರಿ ನಿಘಂಟುಗಳು**

ಬಗೆಬಗೆಯ ನಿಘಂಟುಗಳು ಆಧುನಿಕ ನಿಘಂಟು ಚರಿತ್ರೆಯಲ್ಲಿ ಕಂಡುಬರುತ್ತವೆ. ಮೊದಲ ಭಾಗದಲ್ಲಿ ೧೯ನೇ ಶತಮಾನದಲ್ಲಿದ್ದ ಪಾಶ್ಚಾತ್ಯ ವಿದ್ವಾಂಸರಿಂದ ರಚಿಸಲ್ಪಟ್ಟ ನಿಘಂಟುಗಳ ಸಮೀಕ್ಷೆಯನ್ನು ಮಾಡಲಾಗಿದೆ. ಮಿಶನರಿಯವರು ಆಧುನಿಕ ಕನ್ನಡ ನಿಘಂಟು ಚರಿತ್ರೆಯ ಮೂಲಪುರುಷರಾಗಿದ್ದು, ಅವರು ರಚಿಸಿದ ನಿಘಂಟುಗಳನ್ನು

೩.೧.೧. ಇಂಗ್ಲಿಶ್ – ಕನ್ನಡ ನಿಘಂಟುಗಳು

೩.೧.೨. ಕನ್ನಡ – ಇಂಗ್ಲಿಶ್ ನಿಘಂಟುಗಳು

೩.೧.೩. ಇತರೆ ನಿಘಂಟುಗಳು ಎಂದು ಮೂರು ರೀತಿಯಲ್ಲಿ ವಿಂಗಡಿಸಲಾಗಿದೆ.

**೨.೩.೧.೧. ಇಂಗ್ಲಿಶ್ – ಕನ್ನಡ ನಿಘಂಟುಗಳು**

೧. "ಆಧುನಿಕ ಕನ್ನಡ ನಿಘಂಟಿನ ಜನಕ" ಎನ್ನುವ ಅಭಿಧಾನಕ್ಕೆ ಪಾತ್ರನಾದ "ವಿಲಿಯಂ ರೀವ್" ೧೮೨೪ರಲ್ಲಿ "A Dictionary, Carnataca and English" ಎನ್ನುವ ಇಂಗ್ಲಿಶ್ – ಕನ್ನಡ ನಿಘಂಟನ್ನು ರಚಿಸಿದ. ಪಾಶ್ಚಾತ್ಯ ಮಿಶನರಿಯೊಬ್ಬ ರಚಿಸಿದ ಮೊಟ್ಟಮೊದಲ ನಿಘಂಟಾಗಿದ್ದು, ಇದು ಕೋಶವಿಜ್ಞಾನದ ವಿಧಾನಶಾಸ್ತ್ರವನ್ನು ಅಳವಡಿಸಿಕೊಂಡು ರಚಿಸಲಾಗಿರುವ ಕನ್ನಡದ ಮೊದಲ ನಿಘಂಟಾಗಿರುವುದರಿಂದ ಇದಕ್ಕೆ ಐತಿಹಾಸಿಕ ಮಹತ್ವವಿದೆ. ಲಂಡನ್ ಮಿಶನ್‌ಗೆ ಸೇರಿದ ರೀವ್‌ನು ನಿಘಂಟಿನ ಮುಖ್ಯ ಉಲ್ಲೇಖವನ್ನು ಅಕಾರಾದಿಯಾಗಿ ನೀಡಿ ಸಂಕೇತಾಕ್ಷರದ ಮೂಲಕ ಅದು ಯಾವ ಪದವರ್ಗಕ್ಕೆ ಸೇರುತ್ತದೆ ಎನ್ನುವುದನ್ನು ಹೇಳಿ, ಆ ಬಳಿಕ ಪರ್ಯಾಯ ಪದಗಳನ್ನು ಅರ್ಥದ ರೂಪದಲ್ಲಿ ನೀಡುತ್ತಾನೆ.

ಕನ್ನಡ ಶಬ್ದ ಸಂಪತ್ತು ಮೊದಲಬಾರಿಗೆ ಅಕಾರಾದಿ ಕ್ರಮದಲ್ಲಿ ನಿರೂಪಿತವಾಗಿ, ಅರ್ಥನಿರ್ಣಯಗೊಂಡುದು ರೀವ್‌ನ ಕೈಯಲ್ಲಿ. ಪ್ರಾಚೀನ ಕನ್ನಡ ನಿಘಂಟುಗಳನ್ನು, ಇಂಗ್ಲಿಶ್ ನಿಘಂಟುಗಳನ್ನು ಜಾನ್ಸನ್ ನಿಘಂಟು, ಕೆರೆಸಿಯ ನಿಘಂಟುಗಳನ್ನು ಬಳಸಿಕೊಂಡು ಹೊಸಬಗೆಯ ನಿಘಂಟನ್ನು ರಚಿಸಿ, ಇಂಗ್ಲಿಶ್ ಪದಗಳಿಗೆ ಕನ್ನಡದ ಅರ್ಥ ಹೇಳುವ ಪರಂಪರೆಗೆ ನಾಂದಿ ಹಾಡಿದ ಕೀರ್ತಿ ರೀವ್‌ನದಾಗಿದೆ.

೨. ವೆಸ್ಲಿಯನ್ ಮಿಶನರಿಗೆ ಸೇರಿದ ಜಾನ್ ಗ್ಯಾರೆಟ್ ಎನ್ನುವ ಮಿಶನರಿಯು ಕ್ರಿ.ಶ. ೧೮೪೨ರಲ್ಲಿ ರಚಿಸಲ್ಪಟ್ಟ "A Manual of English – Canarese Dictionary" ಇಂಗ್ಲಿಶ್ ಪದಗಳಿಗೆ

ಕನ್ನಡದ ಅರ್ಥ ಹೇಳುವ ಸಂಕ್ಷಿಪ್ತ ನಿಘಂಟಾಗಿದೆ. ಪದ ಜೋಡಣೆಯಲ್ಲಿ ಅಕಾರಾದಿ ಕ್ರಮವನ್ನು ಅನುಸರಿಸಿರುವ ಈ ನಿಘಂಟಿನಲ್ಲಿ ಬರುವ ಪ್ರಧಾನ ಪದಗಳ ವ್ಯಾಕರಣ ಸ್ವರೂಪವನ್ನು ಸಂಕೇತಾಕ್ಷರಗಳಲ್ಲಿ ಸೂಚಿಸಲಾಗಿದೆ. ಇದರಲ್ಲಿ ರೀವ್ ನಿಘಂಟಿಗಿಂತ ಖಚಿತವಾದ ಅರ್ಥ ನಮೂದುಗಳಿದ್ದು, ವಿದೇಶಿಯರಿಗೆ ಮಾತ್ರವಲ್ಲದೇ ಶಾಲಾ ವಿದ್ಯಾರ್ಥಿಗಳಿಗೂ ಉಪಯುಕ್ತವಾಗಿದೆ.

೩. ಕ್ರಿ.ಶ. ೧೮೭೬ರಲ್ಲಿ ಪ್ರಕಟವಾದ ರೆ.ಫಾ. ಜೀಗ್ಲರ್‌ನ "English and Canarese School Dictionary" ಎನ್ನುವ ಇಂಗ್ಲಿಶ್ – ಕನ್ನಡ ನಿಘಂಟು "ಶಾಲಾ ನಿಘಂಟು" ಎಂದು ಪ್ರಸಿದ್ಧಿಯಾಗಿದ್ದು, ಮುಖ್ಯವಾಗಿ ಶಾಲಾ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ರಚಿಸಲಾಗಿದೆ.

ಇಂಗ್ಲಿಶ್ ಪದಗಳ ಉಚ್ಚಾರವನ್ನು ತಿಳಿಸುವ, ವ್ಯಾಕರಣಾಂಶಗಳನ್ನು ನಿರ್ದಿಷ್ಟವಾಗಿ ದಾಖಲಿಸುವ, ಯುರೋಪಿಯನ್ನರಿಗೆ ಕನ್ನಡ ಪದಗಳನ್ನು ಪರಿಚಯಿಸುವ ಹಾಗೂ ಕನ್ನಡಿಗರಿಗೆ ಇಂಗ್ಲಿಶ್ ಸಮಾನಾರ್ಥಕ ಪದಗಳನ್ನು ಪರಿಚಯಿಸುವ ಉದ್ದೇಶದಿಂದ ಈ ನಿಘಂಟನ್ನು ರಚಿಸಲಾಗಿದೆ. ಜೀಗ್ಲರ್‌ನು ಈ ನಿಘಂಟನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಬಾಸೆಲ್ ಮಿಷನ್ನಿನ ರೆ.ಎಂ.ವಾಲ್ಜ್ ಮತ್ತು ಕ್ರಿಸ್ತಾನುಜ ವತ್ಸ ಎನ್ನುವ ಮಿಶನರಿಗಳ ನೆರವನ್ನು ಪಡೆದಿದ್ದಾನೆ.

೪. ಸಾಮಾನ್ಯ ಓದುಗರ ಅಗತ್ಯತೆಯನ್ನು ಮನಗಂಡ ಬಾಸೆಲ್ ಮಿಷನ್ನಿನ ಮಿಶನರಿಯಾದ ಕ್ರಿಸ್ತಾನುಜ ವಾತ್ಸ್ ಕ್ರಿ.ಶ. ೧೯೧೦ರಲ್ಲಿ ರಚಿಸಿದ "The Anglo – Kanarese Crown Dictionary" ದ್ವಿಭಾಷಿಕ ನಿಘಂಟಾಗಿದ್ದು, ಪದದ ವ್ಯಾಕರಣ ಸ್ವರೂಪವನ್ನು ಸಂಕೇತಾಕ್ಷರಗಳ ಮೂಲಕ ಸೂಚಿಸುತ್ತದೆ. ಅಕಾರಾದಿಯಾಗಿ ಪದಗಳನ್ನು ಜೋಡಿಸಲಾಗಿದ್ದು, ಇಂಗ್ಲಿಶ್ ಪದಕ್ಕೆ ಕನ್ನಡದಲ್ಲಿರುವ ನಾನಾರ್ಥಗಳನ್ನು ಕೊಡಲಾಗಿದೆ. ೧೯೩೩ರಲ್ಲಿ ಪಂಜೆ ಮಂಗೇಶರಾಯರು ಈ ನಿಘಂಟನ್ನು ಪರಿಷ್ಕರಿಸಿದ್ದಾರೆ.

ಬೇರೆ ಬೇರೆ ಕಾಲದಲ್ಲಿದ್ದ ಮಿಶನರಿಗಳು ಇಂಗ್ಲಿಶ್ – ಕನ್ನಡ ದ್ವಿಭಾಷಾ ಕೋಶಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಧರ್ಮ ಪ್ರಚಾರದ ಉದ್ದೇಶವಿಟ್ಟುಕೊಂಡು ರಚನೆಯಾದ ಈ ಮೇಲಿನ ನಾಲ್ಕು ನಿಘಂಟುಗಳು ಕನ್ನಡ ಮತ್ತು ಇಂಗ್ಲಿಶ್ ಭಾಷಾ ಬೆಳವಣಿಗೆಗೆ ಹಾಗೂ ಕನ್ನಡ ಕೋಶ ಕ್ಷೇತ್ರಕ್ಕೆ ಮಹತ್ವದ ಕಾಣಿಕೆಗಳಾಗಿವೆ.

**೨.೩.೧.೨. ಕನ್ನಡ – ಇಂಗ್ಲಿಶ್ ನಿಘಂಟುಗಳು**

ಮಿಶನರಿಗಳು ಇಂಗ್ಲಿಶ್ – ಕನ್ನಡ ನಿಘಂಟುಗಳ ರಚನೆ ಮಾಡಿದಂತೆ, ಕನ್ನಡ ಪದಗಳಿಗೆ ಇಂಗ್ಲಿಶ್ ಅರ್ಥಗಳನ್ನು ತಿಳಿಸುವ ಕನ್ನಡ – ಇಂಗ್ಲಿಶ್ ನಿಘಂಟುಗಳನ್ನು ರಚಿಸಿ ಕನ್ನಡ ನುಡಿ ಬೆಳವಣಿಗೆಗೆ ಕಾರಣಕರ್ತರಾಗಿದ್ದಾರೆ.

ಅಕಾರಾದಿಯಾಗಿ, ವ್ಯವಸ್ಥಿತವಾಗಿ ಕೋಶನಿರ್ಮಾಣ ಕಾರ್ಯದ ಮೂಲಕ ಕನ್ನಡ – ಇಂಗ್ಲಿಶ್ ನಿಘಂಟಿನ ಇತಿಹಾಸವನ್ನು ಪ್ರಾರಂಭಿಸಿದವನು ಪಾಶ್ಚಾತ್ಯ ವಿದ್ವಾಂಸನಾದ ವಿಲಿಯಂ ರೀವ್. ೧೮೩೨ರಲ್ಲಿ "A Dictionary, Carnataka and English" ಎನ್ನುವ ಕನ್ನಡದ ಮೊತ್ತಮೊದಲ ಕನ್ನಡ – ಇಂಗ್ಲಿಶ್ ನಿಘಂಟನ್ನು ತಯಾರಿಸಿದ. ಹೊಸಗನ್ನಡದ ಮೊದಲ ನಿಘಂಟುಕಾರನಾದ

ರೀವ್ ತನ್ನ ನಿಘಂಟಿನಲ್ಲಿ ಕನ್ನಡ ಪದಕ್ಕೆ ಇಂಗ್ಲಿಶ್‌ನ ಸಮಾನ ಅಥವಾ ಪರ್ಯಾಯ ನಾಮಗಳನ್ನು ನೀಡಿದ್ದಾನೆ. ಅದು ಯಾವ ಭಾಷಾ ವರ್ಗಕ್ಕೆ ಸೇರಿದ್ದು ಎಂದು ಸಂಕೇತಾಕ್ಷರಗಳಲ್ಲಿ ಸೂಚಿಸಿ, ಅರ್ಥ ನಿರ್ಣಯ ಮತ್ತು ಉಲ್ಲೇಖಗಳನ್ನು ನೀಡುತ್ತಾನೆ. ಗಾದೆಗಳು, ಪ್ರಾಚೀನ ಕಾವ್ಯ ಪ್ರಯೋಗಗಳು ಹಾಗೂ ನುಡಿಗಟ್ಟುಗಳನ್ನು ಉದಾಹರಿಸಿ ಅರ್ಥಗಳನ್ನು ಖಚಿತಗೊಳಿಸುವ ಪ್ರಯತ್ನ ಮಾಡಿದ್ದಾನೆ. ಎರಡು ರೀತಿಯ ದ್ವಿಭಾಷಿಕ ನಿಘಂಟುಗಳನ್ನು ಕನ್ನಡಕ್ಕೆ ಕೊಟ್ಟ ಕೀರ್ತಿ ವಿಲಿಯಂ ರೀವ್‌ನದು.

ಡ್ಯಾನಿಯಲ್ ಸ್ಯಾಂಡರ್‌ಸನ್ ವೆಸ್ಲಿಯನ್ ಮಿಶನ್‌ನ ಮಿಶನರಿಯಾಗಿದ್ದವನು. ಈತನು ೧೮೫೮ರಲ್ಲಿ ರೀವ್‌ನ "A Dictionary, Canarese and English By Re. W. Reeve. Revised and enlarge by Danial Sanderson" ಎನ್ನುವ ಪರಿಷ್ಕೃತ ಹಾಗೂ ವಿಸ್ತೃತ ಆವೃತ್ತಿಯನ್ನು ಹೊರತಂದನು. ಈ ನಿಘಂಟಿನ ಕನ್ನಡ ಪದಗಳನ್ನು ಅಕಾರಾದಿಯಾಗಿ ಜೋಡಿಸಲಾಗಿದ್ದು, ಅವುಗಳಿಗೆ ಕ್ರಮವಾಗಿ ಇಂಗ್ಲಿಶ್‌ನಲ್ಲಿ ಉಚ್ಚಾರಣೆಯನ್ನು ಕೊಟ್ಟು, ನಂತರ ಅವುಗಳ ಅರ್ಥ ವಿವರಣೆಯನ್ನು ಇಂಗ್ಲಿಶ್‌ನಲ್ಲಿ ಕೊಡಲಾಗಿದೆ. ರೀವ್ ನಿಘಂಟಿನಲ್ಲಿದ್ದ ಅನೇಕ ಶಬ್ದಗಳ ಮೂಲವನ್ನು ಕಂಸದಲ್ಲಿ ನೀಡಿದ್ದಲ್ಲದೇ, ಅನೇಕ ವಿವರಣೆಗಳನ್ನು ಮತ್ತೆ ತಿದ್ದಿ ಬರೆದನು. ಕನ್ನಡ ಪದಗಳಿಗೆ ಇಂಗ್ಲಿಶ್‌ನ ಸಮಾನಾರ್ಥಕವನ್ನು ಹುಡುಕುವವರಿಗೆ ಈ ನಿಘಂಟು ಅತ್ಯಂತ ಉಪಯುಕ್ತವೆನಿಸಿದೆ.

ಕನ್ನಡಕ್ಕೆ ಪ್ರಮಾಣಬದ್ಧವಾದ ವೈಜ್ಞಾನಿಕ ತಳಹದಿಯ ಬೃಹದ್ಗಾತ್ರದ ದ್ವಿಭಾಷಾ ನಿಘಂಟನ್ನು ಮೊದಲಿಗೆ ಕೊಟ್ಟವನು ಕಿಟೆಲ್. ಕ್ರಿ.ಶ. ೧೮೯೪ರಲ್ಲಿ ಪ್ರಕಟವಾದ 'ಕಿಟೆಲ್‌ರ ಕನ್ನಡ-ಇಂಗ್ಲಿಶ್ ನಿಘಂಟು' ಆಧುನಿಕ ನಿಘಂಟು ನಿಯಮಗಳಿಗನುಸಾರವಾಗಿ ರಚಿತವಾಗಿದೆ. ಅತ್ಯಂತ ವೈಜ್ಞಾನಿಕವಾದ ರೀತಿಯಲ್ಲಿ ಕಿಟೆಲ್ ಕೋಶದಲ್ಲಿ ಶಬ್ದ ಹಾಗೂ ಅರ್ಥಗಳನ್ನು ದಾಖಲುಗೊಳಿಸಲಾಗಿದೆ. ಇದು ಪದಗಳನ್ನು ವಿವರಿಸುವ ನಿಘಂಟಾಗಿರದೇ ಕನ್ನಡ ಪದಸಂಸ್ಕೃತಿಯನ್ನು ದಾಖಲಿಸಿದ ಕೈಪಿಡಿಯಾಗಿದೆ ಹಾಗೂ ವೈಜ್ಞಾನಿಕ ತಳಹದಿಯ ಮೇಲೆ ರಚನೆಯಾದ ಪದ, ಅರ್ಥ ಪ್ರಯೋಗ ಮತ್ತು ನಿಷ್ಪತ್ತಿಯನ್ನು ಕೊಡುವ ಕನ್ನಡದ ಮೊದಲ ಶಾಸ್ತ್ರೀಯ ನಿಘಂಟಾಗಿದೆ.

ಆ ಕಾಲಕ್ಕೆ ಉಪಲಬ್ದವಿದ್ದ ಎಲ್ಲ ರೀತಿಯ ಕನ್ನಡ ಸಾಹಿತ್ಯವನ್ನು ಪರಿಶೀಲಿಸಿ ಅವುಗಳಲ್ಲಿ ಪ್ರಯೋಗವಾಗಿರುವ ದೇಶ್ಯ ಅನ್ಯದೇಶ್ಯ ತತ್ಸಮ - ತದ್ಭವ ಪದಗಳನ್ನು ಗಣನೆಗೆ ತೆಗೆದುಕೊಂಡಿದ್ದಾನೆ. ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬಳಕೆಯಲ್ಲಿರುವ ಪ್ರಾದೇಶಿಕ ಪದಗಳು ಹಾಗೂ ಗಾದೆಮಾತುಗಳು ಇದರಲ್ಲಿ ಸೇರಿವೆ. ಈ ನಿಘಂಟಿನ ವೈಶಿಷ್ಟ್ಯವೆಂದರೆ ಪ್ರತಿಪದದ ಅರ್ಥವನ್ನು ಕೊಡುವಾಗ ಪ್ರಯೋಗಗಳ ಆಧಾರದ ಮೇಲೆ ಅರ್ಥ ನಿರ್ಣಯ ಮಾಡಿ ಆಕರಗಳನ್ನು ಸೂಚಿಸಿರುವುದು ಹಾಗೂ ಅರ್ಥ ಹೇಳಿದ ಮೇಲೆ ಪ್ರತಿ ಪದದ ವ್ಯುತ್ಪತ್ತಿಯನ್ನು ಇತರ ದ್ರಾವಿಡ ಭಾಷೆಗಳಲ್ಲಿನ ಜ್ಞಾತಿ ಪದಗಳನ್ನು ಸೂಚಿಸಿರುವುದು.

ಕನ್ನಡದ ಪ್ರಧಾನ ಪದಗಳನ್ನು ಅಕಾರಾದಿಯಾಗಿ ಕೊಟ್ಟು ಅವುಗಳ ಉಚ್ಚಾರಣೆಯನ್ನು ಇಂಗ್ಲಿಶ್ ಲಿಪ್ಯಂತರದಲ್ಲಿ ಕೊಡಲಾಗಿದೆ. ಕೆಲವು ಪದಗಳ ವ್ಯಾಕರಣ ಸ್ವರೂಪವನ್ನು ಸಂಕೇತಾಕ್ಷರಗಳ

ಮೂಲಕ ಸೂಚಿಸಲಾಗಿದೆ. ಮೊದಲು ಕನ್ನಡದಲ್ಲಿ ಅರ್ಥವನ್ನು ಕೊಟ್ಟು ನಂತರ ಇಂಗ್ಲಿಶಿನಲ್ಲಿ ಕೊಡಲಾಗಿದೆ. ಒಂದು ಪದ ಬೇರೆ ಬೇರೆ ಮೂಲದಿಂದ ಬಂದದ್ದಾಗಿದ್ದು, ಪ್ರತ್ಯೇಕ ನಿಷ್ಪತ್ತಿಯನ್ನು ಹೊಂದಿದ್ದರೆ ಆ ಪದವನ್ನು ೧,೨,೩ ಎಂದು ಪ್ರತ್ಯೇಕ ಪ್ರಧಾನ ಪದವೆಂದು ಪರಿಗಣಿಸಲಾಗಿದೆ. ಅನ್ಯದೇಶ್ಯ ಪದಗಳಿಗೆ ಅವು ಯಾವ ಭಾಷೆಯಿಂದ ಬಂದಿದೆ ಎನ್ನುವುದನ್ನು ಸೂಚಿಸಲಾಗಿದೆ. ಕೊನೆಯಲ್ಲಿ ಉಪಲಬ್ಧವಿರುವ ಗಾದೆಗಳನ್ನು ನುಡಿಗಟ್ಟುಗಳನ್ನು ಕೊಡಲಾಗಿದೆ. ನಿಘಂಟಿನಲ್ಲಿ ಬಳಸಿರುವ ಸಂಕೇತಗಳ ವಿಸ್ತೃತ ರೂಪವನ್ನು ನಿಘಂಟಿನ ಆರಂಭದಲ್ಲಿ ಕೊಡಲಾಗಿದೆ.

ಕನ್ನಡ ಭಾಷೆಯ ಪದಸಂಪತ್ತಿನ ಪ್ರತಿನಿಧಿ ಕಿಟೆಲ್‌ರ ಕನ್ನಡ – ಇಂಗ್ಲಿಶ್ ನಿಘಂಟು. ಕನ್ನಡ ಭಾಷೆಯ ಮೂಲಕ ಹೊಮ್ಮಿದ ಕನ್ನಡ ಸಂಸ್ಕೃತಿಯ ಪರಂಪರೆಯನ್ನು ದಾಖಲಿಸಿದ ಈ ನಿಘಂಟು ವಿಶಿಷ್ಟವಾದುದಾಗಿದೆ.

ರೆ. ಜೆ. ಬುಚರ್‌ನ "A Kannada – English School Dictionary"ಯ ಮೊದಲ ಆವೃತ್ತಿ ೧೮೯೯ರಲ್ಲಿ ಪ್ರಕಟವಾಯಿತು. ೧೯ನೇ ಶತಮಾನದ ಕೊನೆಯಲ್ಲಿ ಬಂದ ಕನ್ನಡ – ಇಂಗ್ಲಿಶ್ ದ್ವಿಭಾಷಾ ನಿಘಂಟು. ೧೯೨೩ರಲ್ಲಿ ಕ್ರಿಸ್ತಾನುಜ ವತ್ಸ ಇದನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಕಿಟೆಲ್ ನಿಘಂಟು ಸೇರಿದಂತೆ ಇತರ ಭಾರತೀಯ ಭಾಷೆಗಳ ನಿಘಂಟುಗಳನ್ನು ಮಾದರಿಯಾಗಿ ಬಳಸಿಕೊಂಡಿದ್ದಾನೆ. ಈ ನಿಘಂಟಿನಲ್ಲಿ ಸುಮಾರು ೩೦,೦೦೦ ಕನ್ನಡ ಪದಗಳಿಗೆ ಸಮಾನಾರ್ಥಕಗಳನ್ನು ಕೊಡಲಾಗಿದೆ. ಪದವು ಕನ್ನಡದ್ದೇ? ಅಥವಾ ಇತರ ಭಾಷೆಯಿಂದ ಸ್ವೀಕರಿಸಿದೆಯೇ? ಎನ್ನುವುದನ್ನು ಸೂಚಿಸಿ ಆ ಪದಗಳ ವ್ಯಾಕರಣ ಸ್ವರೂಪವನ್ನು ಸಂಕೇತಾಕ್ಷರಗಳ ಮೂಲಕ ಸೂಚಿಸಲಾಗಿದೆ. ಪದಜೋಡಣೆಯಲ್ಲಿ ಅಕಾರಾದಿ ಕ್ರಮವನ್ನು ಅನುಸರಿಸಲಾಗಿದೆ. ಈ ಕೋಶಕ್ಕೆ ಕಿಟೆಲ್‌ರ ಕೋಶವೇ ತಳಹದಿಯಾಗಿದೆ.

ಆರಂಭದ ಕನ್ನಡ – ಇಂಗ್ಲಿಶ್ ನಿಘಂಟುಗಳು ಉಭಯ ಭಾಷಾ ತಿಳಿವಳಿಕೆಗೆ ಪೂರಕವಾಗಿವೆ.

**೨.೩.೧.೩. ಇತರೆ ನಿಘಂಟುಗಳು**

ಭಾರತಕ್ಕೆ ಮತಪ್ರಸಾರದ ಉದ್ದೇಶವನ್ನು ಹೊಂದಿ ಬಂದವರಲ್ಲಿ ಕೆಥೋಲಿಕ್‌ರೂ ಸಹ ಸೇರಿದ್ದಾರೆ. ಪ್ರೊಟೆಸ್ಟಂಟ್ ಮಿಶನರಿಗಳಷ್ಟು ವ್ಯಾಪಕವಾಗಿ ಕನ್ನಡ ಭಾಷೆ ಸಂಸ್ಕೃತಿಗಳ ಅಧ್ಯಯನ ಮಾಡದಿದ್ದರೂ, ಸ್ವಲ್ಪಮಟ್ಟಿಗಾದರೂ ಕೆಥೋಲಿಕ್‌ರಿಂದಲೂ ಕನ್ನಡದ ನಿಘಂಟು ಕೆಲಸ ನಡೆದಿದೆ.

ಮೈಸೂರು ಸಂಸ್ಥಾನದ ಕೆಥೋಲಿಕರ ಮೊದಲ ವಿಕಾರ್ ಎಪಾಸ್ಟಲಿಕ್ ಆಗಿ ೧೮೫೦ರಲ್ಲಿ ನೇಮಕವಾದ ಚಾರ್ಬೋನಾ "ಕನಾರೀಸ್ – ಲ್ಯಾಟಿನಮ್" (೧೮೫೫) ಹಾಗೂ "ಲ್ಯಾಟಿನೋ – ಕನಾರೀಸ್" (೧೮೬೧) ಎನ್ನುವ ಎರಡು ನಿಘಂಟುಗಳನ್ನು ರಚಿಸಿದ.

ಕೆಥೋಲಿಕರ ಧರ್ಮಗುರುಗಳ ತರಬೇತಿ ಕೇಂದ್ರಗಳಲ್ಲಿ, ಇಂಗ್ಲಿಶ್ ಶಾಲೆಗಳಲ್ಲಿ ಲ್ಯಾಟಿನ್ ಅಭ್ಯಾಸ ಕಡ್ಡಾಯವಾಗಿದ್ದುದರಿಂದ ಈ ಬಗೆಯ ನಿಘಂಟುಗಳು ತೀರಾ ಅವಶ್ಯವಾಗಿದ್ದವು.

ಇದರಲ್ಲಿ ೧೮೬೧ರಲ್ಲಿ ಪ್ರಕಟವಾದ "Dictionarium Latino Canarese" ಎನ್ನುವುದು ಪ್ರಮುಖ ನಿಘಂಟಾಗಿದೆ. ಲ್ಯಾಟಿನ್ ಭಾಷೆಯು ಆ ಕಾಲದಲ್ಲಿ ಚರ್ಚಿನ ದೈವಾರಾಧನೆಯ ಅಧಿಕೃತ ಭಾಷೆಯಾಗಿತ್ತು ಹಾಗೂ ಲತೀನಿನಲ್ಲಿ ತರಬೇತಿ ಪಡೆದು ಮಿಶನರಿ ಕೆಲಸ ಹಾಗೂ ಚರ್ಚಿನ ಉಸ್ತುವಾರಿ ಮತ್ತು ಗುರು ಅಭ್ಯರ್ಥಿಗಳ ಶಿಕ್ಷಣಕ್ಕಾಗಿ ಯುರೋಪಿನಿಂದ ನಮ್ಮ ನಾಡಿಗೆ ಬರುತ್ತಿದ್ದ ವಿದ್ವಾಂಸರು ಮತ್ತು ಸಂದರ್ಶಕರ ಅನುಕೂಲಕ್ಕಾಗಿ ಈ ಪದಕೋಶವನ್ನು ರಚಿಸಲಾಗಿದೆ. ಲ್ಯಾಟಿನ್ ಭಾಷೆಯ ಪದಗಳಿಗೆ ಕನ್ನಡದ ಅರ್ಥಗಳನ್ನು ಹೇಳುವ ಮೊದಲ ನಿಘಂಟು ಇದಾಗಿದೆ.

ಈ ರೀತಿಯ ಹಲವಾರು ನಿಘಂಟುಗಳು ಮಿಶನರಿಗಳಿಗೆ ತಮ್ಮ ಧ್ಯೇಯೋದ್ದೇಶಗಳನ್ನು ಈಡೇರಿಸಿಕೊಳ್ಳಲು ಹಾಗೂ ಕನ್ನಡವನ್ನು ಕಲಿಯುವಲ್ಲಿ ತುಂಬ ನೆರವಾದವು. ಹೊಸಗನ್ನಡದ ಆರಂಭಕಾಲದ ಬಹುತೇಕ ನಿಘಂಟುಗಳು ಕನ್ನಡ ಪದಸಂಪತ್ತಿನ ಶ್ರೀಮಂತಿಕೆಯನ್ನು ದಾಖಲಿಸಿರುವ, ಭಾಷೆಯನ್ನು ಅರಿಯಲು, ಪದಚರಿತ್ರೆಯನ್ನು ತಿಳಿಯಲು, ಅನ್ಯಭಾಷೆಗಳನ್ನು ಕಲಿಯಲು ಮಾರ್ಗದರ್ಶಿ ಕೈಪಿಡಿಗಳಾಗಿವೆ.

**೨.೩.೨. ದೇಸಿ ವಿದ್ವಾಂಸರ ನಿಘಂಟುಗಳು**

ಮಿಶನರಿಗಳ ನಿಘಂಟು ರಚನೆಯ ನಂತರ ೧೯ನೇ ಮತ್ತು ೨೦ನೇ ಶತಮಾನದ ಆರಂಭದ ದಶಕಗಳಲ್ಲಿದ್ದ ದೇಸಿ ವಿದ್ವಾಂಸರು ಸಾಂಪ್ರದಾಯಿಕ ನಿಘಂಟು ರಚನಾ ವಿಧಾನವನ್ನು ಕೈಬಿಟ್ಟು ಶಾಸ್ತ್ರೀಯವಾದ ಅಕಾರಾದಿ ನಿಘಂಟುಗಳನ್ನು ರಚಿಸಿದರು. ಅವುಗಳಲ್ಲಿ ಪ್ರಮುಖವಾದವು

೧. ಮೈಸೂರು ಸರ್ಕಾರದ ಟ್ರಾನ್ಸ್‌ಲೇಟರ್ ಆಗಿದ್ದ, ರಾಮಸ್ವಾಮಿಶಾಸ್ತ್ರಿ ಮತ್ತು ಹೆಸರುಘಟ್ಟದ ಹೊನ್ನಪ್ಪ ಕ್ರಿ.ಶ. ೧೮೮೫ರಲ್ಲಿ ರಚಿಸಿದ 'ಕರ್ನಾಟಕ ಶಬ್ದಕಲ್ಪದ್ರುಮ' ಕನ್ನಡ-ಕನ್ನಡ ಏಕಭಾಷಿಕ ನಿಘಂಟಾಗಿದ್ದು, ಕನ್ನಡ ಹಾಗೂ ಸಂಸ್ಕೃತ ಪದಗಳಿಗೆ ಸಮಾನಾರ್ಥಕಗಳನ್ನು ನೀಡುವ ಸುಮಾರು ೪೦೦ ಪುಟಗಳ ವಿಸ್ತಾರವನ್ನು ಒಳಗೊಂಡ ಅಕಾರಾದಿಯಾಗಿ ಜೋಡಿಸಲ್ಪಟ್ಟಿದೆ. ಈ ನಿಘಂಟಿನ ಪ್ರತಿಪುಟದಲ್ಲಿ ಎರಡು ಭಾಗಗಳಿದ್ದು ಮೊದಲನೆಯ ಭಾಗದಲ್ಲಿ ಶಬ್ದ ಮತ್ತು ಅರ್ಥಗಳನ್ನು ನೀಡಲಾಗಿದೆ. ಎರಡನೇ ಭಾಗದಲ್ಲಿ ಆಯಾ ಶಬ್ದಗಳನ್ನು ಬಳಸಿರುವ ಕೃತಿ, ಆಕರ, ವ್ಯಾಕರಣ ವಿಶೇಷ, ಪ್ರಯೋಗಗಳನ್ನು ನೀಡಲಾಗಿದ್ದು ಆರಂಭಕಾಲದಲ್ಲಿ ದೇಸಿಯ ವಿದ್ವಾಂಸರಿಂದ ರಚಿಸಲ್ಪಟ್ಟ ಕನ್ನಡ ನಿಘಂಟು ಕ್ಷೇತ್ರಕ್ಕೆ ತನ್ನದೇ ಆದ ಕಾಣಿಕೆಯನ್ನು ನೀಡಿದೆ.

೨. ಕ್ರಿ.ಶ. ೧೮೯೫ರಲ್ಲಿ ಪ್ರಕಟವಾದ 'ನಾನಾರ್ಥ ಶಬ್ದಾವಳಿ ಮತ್ತು ಸಂಜ್ಞಾರ್ಥಗಳು' ಎನ್ನುವ ನಿಘಂಟು ಕನ್ನಡ-ಸಂಸ್ಕೃತ ಪದಗಳಿಗೆ ಅರ್ಥವನ್ನು ಹೇಳುತ್ತದೆ. ಇದರ ಕರ್ತೃ 'ಶ್ರೀಯುತ ಬೋಳಾರ ರಾಮಕೃಷ್ಣಯ್ಯ'. ಪದಗಳನ್ನು ಅಕರಾದಿಯಾಗಿ ಪಟ್ಟಿ ಮಾಡಿ ಅವು ಯಾವ ಭಾಷೆಯ ಪದಗಳು ಎನ್ನುವುದನ್ನು ಕಂಸದಲ್ಲಿ ಸಂಕೇತಾಕ್ಷರಗಳ ಮೂಲಕ ನೀಡಲಾಗಿದೆ. ಪದಗಳಿಗೆ ಅರ್ಥವನ್ನು, ಕೊನೆಯ ಭಾಗದಲ್ಲಿ ಸಂಜ್ಞಾರ್ಥಗಳನ್ನು ಕೊಡಲಾಗಿದೆ. ಕನ್ನಡ ನಿಘಂಟು ಪರಂಪರೆಯಲ್ಲಿ ಬಂದಿರುವ ನಾನಾರ್ಥ ನಿಘಂಟುಗಳಲ್ಲಿ ಇದಕ್ಕೆ ಮಹತ್ವದ ಸ್ಥಾನವಿದೆ.

೩. ಶಬ್ದಮಂಜರಿ ಕೋಶ ಎನ್ನುವ ಏಕಭಾಷಾ ಕೋಶವನ್ನು ತಮ್ಮ ಅಪಾರ ಅನುಭವ ಮತ್ತು ಪಾಂಡಿತ್ಯ ಬಲದಿಂದ ಸಿದ್ಧಪಡಿಸಿ ಕನ್ನಡ ನಿಘಂಟು ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆ ಕೊಟ್ಟ ಶ್ರೇಯಸ್ಸು 'ಗಂಗಾಧರ ಮಡಿವಾಳೇಶ್ವರ ತುರಮರಿ'ಯವರದು. ಕ್ರಿ.ಶ. ೧೮೮೦ರಲ್ಲಿ ಪ್ರಕಟವಾದ ಈ ಕೋಶವು ಹಳೆಗನ್ನಡ ಕಾವ್ಯ ಹಾಗೂ ಕೋಶಗಳಲ್ಲಿ ಪ್ರಯೋಗವಾಗಿರುವ ಕನ್ನಡ ಸಂಸ್ಕೃತ ಪದಗಳಿಗೆ ಮತ್ತು ದೇಶ್ಯ ಪದಗಳಿಗೆ ಸಮಾನಾರ್ಥಕಗಳನ್ನು ಕೊಡುವ ನಿಘಂಟಾಗಿದೆ.

ಸಂಸ್ಕೃತದ, ಹಳೆಗನ್ನಡದ ಪದ್ಯರೂಪದ ನಿಘಂಟುಗಳಿಂದ ಅಕಾರಾದಿಯಾಗಿ ನಿಘಂಟನ್ನು ಕನ್ನಡ-ಕನ್ನಡಕ್ಕೆ ಕ್ರಿ.ಶ.೧೮೮೯ರಲ್ಲಿ ಪರಿಚಯಿಸಿದ ಕೀರ್ತಿ ತುರಮುರಿಯವರದಾಗಿದೆ. ಕಬ್ಬಿಗರ ಕೈಪಿಡಿ, ಕರ್ನಾಟಕ ಶಬ್ದಮಂಜರಿ, ಪದ್ಯನಾನಾರ್ಥ, ಅಮರಕೋಶ ಮೊದಲಾದ ೧೨ಕ್ಕೂ ಹೆಚ್ಚು ಪ್ರಾಚೀನ ಕಾವ್ಯ, ಹಳೆಗನ್ನಡ ನಿಘಂಟುಗಳು ಹಾಗೂ ಹೊಸಗನ್ನಡ ಸಂಸ್ಕೃತ ಕೃತಿಗಳನ್ನು ಪರಿಶೀಲಿಸಿ ರಚಿಸಲಾಗಿದೆ. "ಶಬ್ದಗಳಿಗೆ ಈ ನಿಘಂಟಿನಲ್ಲಿ ಕೊಟ್ಟಿರುವ ಅರ್ಥ ಪ್ರಾಮಾಣ್ಯವಾದುದು. ಅಲ್ಲದೇ ಹಳೆಗನ್ನಡ ಕಾವ್ಯಗಳಲ್ಲಿ ಕಂಡುಬರುವ ಅನೇಕಾನೇಕ ಶಬ್ದಗಳಿಗೆ ಇಲ್ಲಿ ಮಾತ್ರ ಅರ್ಥ ದೊರೆಯುವುದು ಎಂಬ ಹೆಗ್ಗಳಿಕೆಯೂ ಈ ಕೃತಿಗಿದೆ" ಎನ್ನುವ ಶ್ರೀನಿವಾಸ ಹಾವನೂರರ ಮಾತುಗಳು ಈ ನಿಘಂಟಿನ ಮಹತ್ವವನ್ನು ಸೂಚಿಸುತ್ತವೆ.

೪. ೧೮೯೧ರಲ್ಲಿ ಬಿಡುಗಡೆಯಾದ 'ನರಹರಿ ಜಯರಾಯಾಚಾರ್ಯ' ಅವರಿಂದ ರಚಿಸಲ್ಪಟ್ಟ 'ಕರ್ಣಾಟ ಭಾಷಾಕರಂ' ಎನ್ನುವ ಅಕಾರಾದಿ ನಿಘಂಟು ಕನ್ನಡ-ಸಂಸ್ಕೃತ ಪದಗಳಿಗೆ ಸಮಾನಾರ್ಥಕಗಳನ್ನು ನೀಡುತ್ತದೆ. ಆ ಕಾಲದಲ್ಲಿ ಶಬ್ದಕೋಶದ ಅಗತ್ಯತೆ - ಆವಶ್ಯಕತೆಗಳೆರಡನ್ನೂ ಅರ್ಥ ಮಾಡಿಕೊಂಡ ಜಯರಾಯಾಚಾರ್ಯರು ಅನೇಕ ಕೃತಿಗಳನ್ನು ಶ್ರಮವಿಟ್ಟು ಸಂಗ್ರಹಿಸಿ, ಪದಗಳನ್ನು ಆಯ್ಕೆ ಮಾಡಿ ಈ ನಿಘಂಟನ್ನು ರೂಪಿಸಿದ್ದಾರೆ.

೫. 'ಶ್ರೀ ಕೃಷ್ಣರಾಜ ಕರ್ಣಾಟಕ ಭಾಷಾ ರತ್ನಾಕರಂ' ನಿಘಂಟನ್ನು ಬರೆದವರು ಪಂಡಿತ ಜಿ.ರಘುಪತ್ಯಾಚಾರ್ಯರು. ೧೯೨೩ರಲ್ಲಿ ಪ್ರಕಟವಾದ ಇದು ಕನ್ನಡ, ಸಂಸ್ಕೃತ ಪದಗಳಿಗೆ ಸಮಾನಾರ್ಥಕಗಳನ್ನು ನೀಡುತ್ತದೆ.

೬. ೧೯೨೯ರಲ್ಲಿ ನ್ಯಾಮತಿಯ 'ಪಂಡಿತ ಪ್ರಭಣ್ಣನವರು' ರಚಿಸಿರುವ ಈ ನಿಘಂಟು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿಯಲ್ಲಿ ಹಸ್ತಪ್ರತಿಯಲ್ಲಿತ್ತು. ಬಿದರೆಹಳ್ಳಿ ನರಸಿಂಹಮೂರ್ತಿ ಅವರ ಸಂಪಾದಕತ್ವದಲ್ಲಿ, ಹೊನ್ನಾಳಿಯ ಹಿರೇಕಲ್ಮಠದಲ್ಲಿ ೨೦೧೫ರಲ್ಲಿ ಪ್ರಕಟವಾಗಿದೆ. ಈ ನಿಘಂಟು ಸುಮಾರು ೧೦೭ ಕನ್ನಡ ಕಾವ್ಯ, ಗದ್ಯ, ಶಾಸನ, ವ್ಯಾಕರಣ ಗ್ರಂಥಗಳ ಶಬ್ದಗಳ ಅರ್ಥ ಹಾಗೂ ಪ್ರಯೋಗ ಸಮೇತ ಈ ನಿಘಂಟನ್ನು ಪ್ರಭಣ್ಣನವರು ಸಿದ್ಧಪಡಿಸಿದ್ದಾರೆ. ಕಿಟೆಲ್ ಕೋಶಕ್ಕಿಂತ ವಿಭಿನ್ನವಾದ ಅಪರೂಪದ ಕನ್ನಡ ಕಾವ್ಯ ಪದಕೋಶವಾಗಿದ್ದು, ಪದ ಜೋಡಣೆಯಲ್ಲಿ ಅಕಾರಾದಿ ಕ್ರಮವನ್ನು ಅನುಸರಿಸಲಾಗಿದೆ.

ನವೋದಯ ಕಾಲದ ಸಂದರ್ಭದಲ್ಲಿ ಹಲವಾರು ದೇಸಿ ವಿದ್ವಾಂಸರು ತಮ್ಮ ಅಗತ್ಯಕ್ಕೆ ಅನುಗುಣವಾಗಿ ನಿಘಂಟುಗಳನ್ನು ರಚಿಸಿದ್ದಾರೆ. ಅವು ಪ್ರಕಟವಾಗದೆ ಕನ್ನಡ ಸಾಹಿತ್ಯ ಪರಿಷತ್ತಿನ

ನಿಘಂಟು ಕಚೇರಿಯ ಸುಪರ್ದಿಯಲ್ಲಿವೆ. ಅವುಗಳಲ್ಲಿ ಮುಖ್ಯವಾಗಿ ೧೯೧೮ರಲ್ಲಿ 'ಮರಳುಕುಂಟೆಮಠದ ರುದ್ರಯ್ಯ'ನವರು ರಚಿಸಿದ 'ರುದ್ರನಿಘಂಟು', ೧೯೨೦ರಲ್ಲಿ ರಚಿತವಾದ 'ನರಸೀಪುರದ ತಿರುಮಕೂಡ್ಲು ಶಾಮಣ್ಣ'ನವರು ಬರೆದ ನಿಘಂಟು, ಪ್ರಾಚೀನ ಕನ್ನಡ ನಿಘಂಟುಗಳನ್ನು ಆಧರಿಸಿದ 'ಕಡಬದ ನಂಜುಂಡಶಾಸ್ತ್ರಿ'ಗಳು ಕ್ರಿ.ಶ.೧೯೩೦ರಲ್ಲಿ ರಚಿಸಿರುವ 'ನಿಘಂಟುಗಳ ನಿಘಂಟು', ೧೯೩೦ರಲ್ಲಿ ರಚಿಸಲಾದ 'ಜಟಿ' ನಿಘಂಟು, ೧೯೩೦ರಲ್ಲಿ ರಚಿತವಾದ 'ಷಟ್ಪದಿ ಗ್ರಂಥಗಳ ನಿಘಂಟು', 'ಪಂಪಭಾರತ ನಿಘಂಟು' (೧೯೩೧), ಅನಂತನಾರಾಯಣ ಟಿ.ಕೆ. ಅವರ 'ಶಬ್ದಾರ್ಥ ಸಂಗ್ರಹ' (೧೯೩೩), ಕನ್ನಡದ ಕಣಜ ಅಥವಾ ನಾಡಗನ್ನಡದ ನುಡಿ, ಶಿವರಾಮ ಕಾರಂತರ 'ಸಿರಿಗನ್ನಡದ ಅರ್ಥಕೋಶ' (೧೯೪೦), ವಿಟ್ಲದ ಕೊಳನಾಡು ನರಸಿಂಹಶಾಸ್ತ್ರಿಯವರು ರಚಿಸಿದ್ದಾರೆನ್ನಲಾದ 'ಕರ್ನಾಟಕ ಶಬ್ದ ರತ್ನಾಕರ' (೧೯೫೦), ಮಚ್ಚಿಮಲೆ ಶಂಕರನಾರಾಯಣರಾವ್, ಆರ್.ಎಸ್.ನಾವೂರುಕಾರ ಮತ್ತು ಸೇಡಿಯಾಪು ಕೃಷ್ಣಭಟ್ಟರು ಸಂಪಾದಿಸಿರುವ 'ಕನ್ನಡ ನಿಘಂಟು' (೧೯೫೧), ಎಚ್.ವಿ.ರಮಾಕಾಂತ್‌ರಾವ್ ಅವರು ರಚಿಸಿರುವ ಕನ್ನಡ ನಿಘಂಟು ಕ್ಷೇತ್ರಕ್ಕೆ ನೀಡಿದ ಮಹತ್ವದ ಕೊಡುಗೆಗಳಾಗಿವೆ.

**೨.೩.೩. ಸಾಹಿತ್ಯಿಕ ನಿಘಂಟುಗಳು**

ನಿಘಂಟಿಮಗಳ ಸ್ವರೂಪವನ್ನು ಗಮನಿಸಿದಾಗ ಕನ್ನಡ ಭಾಷೆಯಲ್ಲಿ ವೈವಿಧ್ಯಮಯವಾದ ನಿಘಂಟುಗಳು ರಚನೆಯಾಗಿದ್ದು ಕನ್ನಡ ಸಾಹಿತ್ಯ ಸುಮಾರು ಎರಡು ಸಾವಿರ ವರ್ಷಗಳ ದೀರ್ಘ ಇತಿಹಾಸವನ್ನು ಒಳಗೊಂಡಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಶಾಸನಗಳು, ಚಂಪೂ, ವಚನ, ರಗಳೆ, ಷಟ್ಪದಿ, ಕೀರ್ತನೆ ಮೊದಲಾದ ಸಾಹಿತ್ಯ ಪ್ರಕಾರಗಳಿದ್ದು ಆಯಾ ಕಾಲದ ಸಾಹಿತ್ಯದಲ್ಲಿ ಅಡಕವಾದ ವಿಷಯಗಳನ್ನು ಅರ್ಥ ಮಾಡಿಕೊಳ್ಳಲು ನಿಘಂಟುಗಳು ಸಹಾಯಕವಾಗಿವೆ. ಇಂತಹ ನಿಘಂಟುಗಳನ್ನು 'ಸಾಹಿತ್ಯಿಕ ನಿಘಂಟು'ಗಳೆಂದು ವರ್ಗೀಕರಿಸಿ ಅವುಗಳ ಸ್ಥೂಲ ಪರಿಚಯವನ್ನು ಮಾಡಲಾಗಿದೆ.

"ಶಾಸನಗಳು ಕನ್ನಡ ಸಾಹಿತ್ಯದ ತಲಕಾವೇರಿ" ಎನ್ನುವ ಸಂಶೋಧಕರಾದ ಎಂ.ಚಿದಾನಂದಮೂರ್ತಿಯವರ ಮಾತು ಅರ್ಥಪೂರ್ಣವಾಗಿದೆ. ಕನ್ನಡ ಸಾಹಿತ್ಯದ ಮೊದಲ ಉಲ್ಲೇಖ ಶಾಸನಗಳಿಂದಲೇ ಆಗಿರುವುದರಿಂದ ನಮ್ಮ ನಾಡಿನಲ್ಲಿ ದೊರೆತಿರುವ ಶಾಸನ ಸಂಪತ್ತು ಸಮೃದ್ಧವಾದುದು, ವೈವಿಧ್ಯಮಯವಾದುದು. ಶಾಸನಗಳಲ್ಲಿ ಉಕ್ತವಾಗಿರುವ ವ್ಯಕ್ತಿವಾಚಕಗಳು, ಸ್ಥಳವಾಚಕಗಳು, ಬಿರುದುಗಳು, ಆಯುಧಗಳು, ನಾಣ್ಯಗಳು, ವಾಸ್ತುಶಿಲ್ಪ, ಶಿಲ್ಪಕಲೆ, ಜ್ಯೋತಿಷ, ಸಂಗೀತ, ಉತ್ಸವಗಳು, ಹಬ್ಬಗಳು, ಸ್ಥಳಪುರಾಣಗಳು, ಸ್ಥಳೀಯ ಐತಿಹ್ಯಗಳು, ಸಂಖ್ಯಾಪದಗಳು ಮೊದಲಾದ ಪದಗಳನ್ನು ಒಂದೆಡೆ ಸಂಗ್ರಹಿಸಿದ ಸಮಗ್ರವಾದ ಶಾಸನಪದಕೋಶ ರಚನೆಯಾಗಿಲ್ಲ. ಆದರೆ ಶಾಸನಗಳಿಗೆ ಸಂಬಂಧಿಸಿದ ಶ್ರೀನಿವಾಸ ರಿತ್ತಿ ಅವರ ಸಂಪಾದಕತ್ವದಲ್ಲಿ 'ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಕೋಶ' ಎನ್ನುವ ಕನ್ನಡ–ಇಂಗ್ಲಿಷ್ ದ್ವಿಭಾಷಾ ಕೋಶ ಪ್ರಕಟವಾಗಿದೆ.

ಇದಾದ ನಂತರ ಎಸ್.ಎಂ.ಹಿರೇಮಠರವರ 'ಶಾಸನ ಪರಿಭಾಷೆ' ಹಾಗೂ ಸಂಗೀತ ಎಸ್.ಹೊನ್ನಳ್ಳಿಯವರ 'ಕನ್ನಡ ಶಾಸನ ಪರಿಭಾಷೆ-ಸಾಂಸ್ಕೃತಿಕ ಅಧ್ಯಯನ' ಎನ್ನುವ ಕೃತಿಗಳು ಶಾಸನವನ್ನು ಅರ್ಥೈಸಿಕೊಳ್ಳಲು ಸಹಾಯಕವಾಗಿವೆ. ಹೀಗೆ ಕನ್ನಡ ಶಾಸನಗಳಲ್ಲಿ ದಾಖಲಾದ ಪದಗಳಿಗೆ ಅರ್ಥೈಸುವ ಸಮಗ್ರ ಪದಕೋಶದ ಅಗತ್ಯತೆಯನ್ನು ಎಸ್.ಕಾರ್ತಿಕ್‌ರವರು 'ಶಾಸನ ಪದಕೋಶಗಳು: ಒಂದು ಸಮೀಕ್ಷೆ' ಎನ್ನುವ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

ಪ್ರಾಚೀನ ಕನ್ನಡ ಸಾಹಿತ್ಯವು ಶಾಸನ ಸಾಹಿತ್ಯ ಮತ್ತು ಹಳೆಗನ್ನಡ ಚಂಪೂ ಸಾಹಿತ್ಯ, ಸಂಸ್ಕೃತ, ಪ್ರಾಕೃತ ಮತ್ತು ಆ ಕಾಲದ ದೇಸಿಯ ನುಡಿಸಂಪತ್ತನ್ನು ಒಳಗೊಂಡ ಹಳೆಗನ್ನಡ ಕೃತಿಗಳಲ್ಲಿನ ಪದಗಳನ್ನು ಅರ್ಥ ಮಾಡಿಕೊಳ್ಳಲು ಹಲವಾರು ನಿಘಂಟುಗಳು ರಚನೆಯಾಗಿವೆ. 'ಕಾವ್ಯ ಪದಮಂಜರಿ' (೧೯೭೦), ಎನ್.ಬಸವರಾಧ್ಯರ 'ಹಳೆಗನ್ನಡ ನಿಘಂಟು' (೧೯೭೬), ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ವಿವಿಧ ನಿಘಂಟು' (೨೦೦೦), ಟಿ.ವಿ.ನಾರಾಯಣ ಅವರು ಸಂಪಾದಿಸಿರುವ 'ಹಳೆಗನ್ನಡ ಪದಸಂಪದ', 'ಚಂಪೂ ನುಡಿಗನ್ನಡಿ', 'ಪಂಪನ ನುಡಿಗಣಿ', ಪಂಪನ 'ಪದಪ್ರಪಂಚ' ಈ ನಿಘಂಟುಗಳನ್ನು ಹಳೆಗನ್ನಡ ಓದುವಾಗ ಎದುರಾಗುವ ಸಮಸ್ಯೆಗಳಿಗೆ ಪರಿಹಾರಕ್ಕಾಗಿ ಬಳಸಬಹುದಾಗಿದೆ.

'ಕನ್ನಡದ ಉಪನಿಷತ್ತು' ಎಂದೇ ಪ್ರಸಿದ್ಧಿಯಾದ ವಚನ ಸಾಹಿತ್ಯವನ್ನು ಕುರಿತು ಹಲವಾರು ಪದಕೋಶಗಳು, ಪರಿಭಾಷಾ ಕೋಶಗಳು ರಚನೆಯಾಗಿವೆ. ಅವುಗಳಲ್ಲಿ ಮುಖ್ಯವಾಗಿ ೧೯೪೩ರಲ್ಲಿ ಹಾಗೂ ಫ.ಗು.ಹಳಕಟ್ಟಿಯವರ 'ಶಿವಾನುಭವ ಶಬ್ದಕೋಶ', ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಿಸಿದ, ಎಸ್.ವಿದ್ಯಾಶಂಕರರವರು ಸಂಪಾದಿಸಿದ 'ವಚನ ಪರಿಭಾಷಾ ಕೋಶ' (೧೯೯೩), ಜಯಶ್ರೀ ದಂಡೆಯವರ 'ಬೆಡಗಿನ ವಚನಗಳ ಪರಿಭಾಷಾ ಕೋಶ', ಮೃತ್ಯುಂಜಯ ರುಮಾಲೆಯವರ 'ವಚನ ನಿಘಂಟು' (೨೦೦೪), ಸಂಗಮೇಶ ಸವದತ್ತಿಮಠರವರ 'ವರ್ಣಾನಾತ್ಮಕ ವಚನ ಪದಕೋಶ' (೨೦೦೯), 'ವೀರಶೈವ ಪಾರಿಭಾಷಿಕ ಪದಕೋಶ' (೨೦೦೦) ಮೊದಲಾದ ಕೋಶಗಳು ವಚನ ಸಾಹಿತ್ಯದ ಅಧ್ಯಯನಕ್ಕೆ ಪೂರಕವಾದ ಪದಕೈಪಿಡಿಗಳಾಗಿವೆ.

ಹರಿಯನ್ನು ಸ್ತುತಿಸುವ ಹರಿದಾಸರು ರಚಿಸಿದ ಕೀರ್ತನೆ, ಪದ, ಸುಳಾದಿ, ಉಗಾಭೋಗ ಮೊದಲಾದ ಪ್ರಕಾರಗಳನ್ನು ಒಳಗೊಂಡಿರುವ ದಾಸ ಸಾಹಿತ್ಯವು ಕನ್ನಡ ಸಾಹಿತ್ಯದ ಪ್ರಮುಖ ಪ್ರಕಾರವಾಗಿದೆ. ಆಧ್ಯಾತ್ಮಿಕ ನೆಲೆಯಲ್ಲಿ ರಚಿತವಾಗಿರುವ ಈ ಸಾಹಿತ್ಯವನ್ನು ಅರ್ಥೈಸಿಕೊಳ್ಳಲು ಹಲವಾರು ಪದಕೋಶಗಳು ರಚನೆಯಾಗಿವೆ. ಅವುಗಳಲ್ಲಿ ವೆಂಕಟೇಶ್‌ರವರ 'ದಾಸಸಾಹಿತ್ಯ ಕೋಶ' (೧೯೯೯), ಶ್ರೀಕೃಷ್ಣ ಹಾವನೂರ ಮತ್ತು ವಿ.ಕೃಷ್ಣರವರು ರಚಿಸಿದ 'ಕನಕದಾಸರ ಕೀರ್ತನೆಗಳ ಶಬ್ದ-ಪ್ರಯೋಗ ಕೋಶ', ಎ.ವಿ.ನಾವಡರ 'ಸಮಗ್ರ ದಾಸ ಸಾಹಿತ್ಯಕೋಶ' ಪ್ರಮುಖವಾಗಿವೆ.

ವಚನ ಚಳವಳಿಯ ನಂತರ ಬಂದ ಹರಿಹರ ಮತ್ತು ರಾಘವಾಂಕರು ಕನ್ನಡ ಸಾಹಿತ್ಯದಲ್ಲಿ ರಗಳೆ ಮತ್ತು ಷಟ್ಪದಿ ಎನ್ನುವ ಎರಡು ಪ್ರಕಾರಗಳನ್ನು ಬಳಸಿ ಕಾವ್ಯಗಳನ್ನು ರಚಿಸಿದರು. ಹರಿಹರ

ತನ್ನ ಸಾಹಿತ್ಯದ ಅಭಿವ್ಯಕ್ತಿಗೆ ರಗಳೆ ಪ್ರಕಾರವನ್ನು ಬಳಸಿಕೊಂಡ. ಈ ಹಿನ್ನೆಲೆಯಲ್ಲಿ ರಗಳೆಗಳ ಸರಿಯಾದ ತಿಳಿವಳಿಕೆಗೆ ಮೃತ್ಯುಂಜಯ ರುಮಾಲೆಯವರ 'ರಗಳೆಗಳ ನಾಮಕೋಶ', ಬಸವರಾಜ ಮಲಶೆಟ್ಟಿಯವರ 'ಹರಿಹರ ಪದಪ್ರಯೋಗ ಕೋಶ' ಎನ್ನುವ ನಿಘಂಟುಗಳ ಸಹಾಯಕವಾಗಿವೆ. ಹೀಗೆ ಸಾಹಿತ್ಯ ಪ್ರಕಾರವನ್ನೇ ಆಧಾರವಾಗಿಟ್ಟುಕೊಂಡು ರಚನೆಯಾದ ನಿಘಂಟುಗಳು ಸಾಹಿತ್ಯದ ಅಧ್ಯಯನಕ್ಕೆ ಅನುಕೂಲಕರವಾಗಿವೆ.

**೨.೩.೪. ಲಕ್ಷಣಶಾಸ್ತ್ರ ನಿಘಂಟುಗಳು**

ಅಲಂಕಾರ, ಛಂದಸ್ಸು, ವಿಮರ್ಶೆ, ಗ್ರಂಥ ಸಂಪಾದನೆ ಮುಂತಾದ ಶಾಸ್ತ್ರ ಸಾಹಿತ್ಯದ ಮೇಲೂ ನಿಘಂಟುಗಳು ರಚನೆಯಾಗಿ ಆ ಕ್ಷೇತ್ರದ ಸರಿಯಾದ ತಿಳಿವಳಿಕೆಗೆ ಸಹಕಾರಿಯಾಗಿವೆ. ಶಾಸ್ತ್ರ ಸಾಹಿತ್ಯವನ್ನು ಆಧರಿಸಿ ರಚಿಸಲಾದ ಬಹುಮುಖ್ಯವಾದ ನಿಘಂಟುಗಳ ಸ್ಥೂಲ ಚಿತ್ರಣವನ್ನು ದಾಖಲಿಸಲಾಗಿದೆ. ಅವುಗಳಲ್ಲಿ ಮುಖ್ಯವೆಂದರೆ, ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾದ ಕಾವ್ಯಾರ್ಥ ಪದಕೋಶವು ಕಾವ್ಯ ಮಿಮಾಂಸೆಯ ಪಾರಿಭಾಷಿಕ ಪದಗಳನ್ನು ಒಳಗೊಂಡ ಕೋಶವಾಗಿದ್ದು, ಆ ಕ್ಷೇತ್ರದ ಎಲ್ಲ ಪದಗಳನ್ನು ತಿಳಿಸುತ್ತದೆ.

ಆಧುನಿಕ ಪಾಶ್ಚಿಮಾತ್ಯ ಸಾಹಿತ್ಯ ಮೀಮಾಂಸೆಯ ಪರಿಕಲ್ಪನೆಗಳು, ತತ್ವ ಸಿದ್ಧಾಂತಗಳು, ಸಾಹಿತ್ಯ ಪ್ರಕಾರಗಳ ಪರಿಚಯವನ್ನು ಒಳಗೊಂಡ ಓ.ಎಲ್.ನಾಗಭೂಷಣಸ್ವಾಮಿಯವರು ೧೯೮೩ರಲ್ಲಿ ರಚಿಸಿದ ವಿಶೇಷ ನಿಘಂಟು 'ವಿಮರ್ಶೆಯ ಪರಿಭಾಷೆ' ವಿಮರ್ಶಾ ಕ್ಷೇತ್ರದ ತಲಸ್ಪರ್ಶಿ ಅಧ್ಯಯನಕ್ಕೆ ಈ ಕೋಶ ಬಹುಮುಖ್ಯವಾದುದಾಗಿದೆ.

ಮಲ್ಲೇಪುರಂ ಜಿ.ವೆಂಕಟೇಶರವರು ರಚಿಸಿದ 'ಭಾರತೀಯ ಕಾವ್ಯ ಪರಿಭಾಷೆ' ಕೋಶವು ಕನ್ನಡ ಕಾವ್ಯ ಮೀಮಾಂಸೆ ಮತ್ತು ಸಂಸ್ಕೃತ ಕಾವ್ಯ ಮೀಮಾಂಸೆಯ ಮುಖ್ಯ ಪಾರಿಭಾಷಿಕ ಪದಗಳನ್ನೊಳಗೊಂಡ ಕ್ರಿ.ಶ. ೨೦೦೦ರಲ್ಲಿ ಪ್ರಕಟವಾದ ಮೀಮಾಂಸೆ ಕ್ಷೇತ್ರದ ಬಹುಮುಖ್ಯ ನಿಘಂಟಾಗಿದೆ.

ಎಸ್.ಪಿ.ಭಟ್‌ರವರು ಸಂಕಲಿಸಿದ 'ಅಲಂಕಾರ ಪದಕೋಶ'ವು ೨೦೦೨ರಲ್ಲಿ ಪ್ರಕಟಗೊಂಡಿದ್ದು ಕನ್ನಡ ಭಾಷೆಯಲ್ಲಿ ದಾಖಲಾದ ಅಲಂಕಾರಗಳ ಮಾಹಿತಿಯನ್ನು ನೀಡುತ್ತದೆ.

'ಕನ್ನಡ ಛಂದೋನಿಘಂಟು' ಕನ್ನಡ ಸಾಹಿತ್ಯ ಪರಿಷತ್ತಿನಿಂದ ೨೦೦೭ರಲ್ಲಿ ಪ್ರಕಟವಾಗಿದೆ. ಇದನ್ನು ಸಂಪಾದಿಸಿವರು ಚಂದ್ರಶೇಖರ ಪಾಟೀಲ ಹಾಗೂ ೨೦೧೧ರಲ್ಲಿ ಟಿ.ವಿ.ವೆಂಕಟಾಚಲಶಾಸ್ತ್ರಿಯವರಿಂದ ರಚಿಸಲ್ಪಟ್ಟ 'ಕನ್ನಡ ಛಂದಃಕೋಶ' ಇವು ಛಂದಸ್ಸು ಕ್ಷೇತ್ರದ ಪಾರಿಭಾಷಿಕ ಪದಗಳನ್ನೊಳಗೊಂಡಿದ್ದು, ಆ ಕ್ಷೇತ್ರದ ಪದಗಳಿಗೆ ವಿಶೇಷ ಅರ್ಥಗಳನ್ನು ನೀಡುತ್ತವೆ.

ಗ್ರಂಥ ಸಂಪಾದನಾ ಕ್ಷೇತ್ರದ ಪಾರಿಭಾಷಿಕ ಪದಗಳನ್ನು ಕಲೆಹಾಕಿದ ಟಿ.ವಿ.ವೆಂಕಟಾಚಲಶಾಸ್ತ್ರಿಯವರು ರಚಿಸಿದ 'ಗ್ರಂಥ ಸಂಪಾದನಾ ಪರಿಭಾಷಾ ಕೋಶ'ವು ಆ ಕ್ಷೇತ್ರದ

ಪದಗಳ ತಿಳಿವಳಿಕೆಯನ್ನು ನೀಡುತ್ತದೆ. ೧೯೭೨ರಲ್ಲಿ ಪ್ರಕಟವಾದ 'ವಾಕ್ಯಮಾಣಿಕ್ಯ ಕೋಶ'ವು ಜಿ.ಎಸ್.ಶಿವರುದ್ರಪ್ಪ ಮತ್ತು ಎಸ್.ವಿದ್ಯಾಶಂಕರರಿಂದ ಸಂಪಾದನೆಗೊಂಡಿದ್ದು, ಕಾವ್ಯಗಳಲ್ಲಿ ಕವಿ ಬಳಸಿರುವ ವಿಶೇಷ ವಾಕ್ಯಗಳನ್ನು ಒಳಗೊಂಡಿದೆ. ೧೯೯೪ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮಾ.ಪಾರ್ವತಮ್ಮ, ನಿ.ಉಮಾ ಮತ್ತು ರಾಜಶೇಖರ ಇವರ ಸಂಪಾದಕತ್ವದಲ್ಲಿ ವರ್ಗೀಕೃತ ಪದಕೋಶವನ್ನು ಹೊರತಂದಿದೆ. ೨೦೦೫ರಲ್ಲಿ ಪ್ರಕಟವಾದ ಎಸ್.ಎಸ್.ಅಂಗಡಿಯವರ 'ಕನ್ನಡ ವ್ಯಾಕರಣ ಪರಿಭಾಷೆ' ಹಾಗೂ ೨೦೦೭ರಲ್ಲಿ ಕ.ನಂ.ಪ್ರಸನ್ನರವರಿಂದ ಸಂಪಾದಿಸಲ್ಪಟ್ಟ 'ಕನ್ನಡ ವ್ಯಾಕರಣ ಪದಕೋಶ'ಗಳು ವ್ಯಾಕರಣ ಮತ್ತು ಭಾಷಾಧ್ಯಯನಕ್ಕೆ ಸಂಬಂಧಿಸಿದ ಹಲವು ಜ್ಞಾನ ಶಾಖೆಗಳ ಮಾಹಿತಿಯನ್ನು ತಿಳಿಸುತ್ತವೆ.

**೨.೩.೫. ಕನ್ನಡದ ವಿಶಿಷ್ಟ ಪದಕೋಶಗಳು**

ಕನ್ನಡದಲ್ಲಿ ವೈವಿಧ್ಯಮಯವಾದ ನಿಘಂಟುಗಳು ಹೊರಬಂದಿದ್ದು ಕೆಲವು ವಿಶಿಷ್ಟ ಪದಕೋಶಗಳನ್ನು ಇಲ್ಲಿ ದಾಖಲಿಸಲಾಗಿದೆ. ಜೆ.ಎಂ.ಹನಸೋಗೆರವರ 'ಕನ್ನಡ ಸಮಾನಾರ್ಥ ಕೋಶ' (೧೯೭೪), ಪಾ.ವೆಂ.ಆಚಾರ್ಯರ 'ಪದಾರ್ಥ ಚಿಂತಾಮಣಿ' (೧೯೯೧), ಆಧುನಿಕ ಕನ್ನಡ ನಿಘಂಟುಗಳ ಭೀಷ್ಮ ಎಂದೇ ಪ್ರಸಿದ್ಧರಾದ ಜಿ.ವೆಂಕಟಸುಬ್ಬಯ್ಯನವರ 'ಇಗೋ ಕನ್ನಡ ಸಾಮಾಜಿಕ ನಿಘಂಟಿನ ಮೂರು ಸಂಪುಟಗಳು', 'ಎರವಲು ಪದಕೋಶ' (೧೯೯೮) ಹಾಗೂ 'ಪ್ರಿಸಮ್ ಕನ್ನಡ ಕ್ಲಿಷ್ಟ ಪದಕೋಶ' (೨೦೦೬), ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗದ ವತಿಯಿಂದ ಹೊರಬಂದ 'ದಿನದಿನ' ಮೂರು ಸಂಪುಟಗಳು, ಬಿ.ಆರ್.ಪ್ರಕಾಶ ಮತ್ತು ಎಸ್.ಮಧುಸೂದನ್‌ರವರು ಸಂಪಾದಿಸಿದ 'ಪದಸಂಚಯ' (೨೦೦೦), ಡಿ.ಎನ್.ಶಂಕರಭಟ್ಟರ 'ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ ಪದಗಳು' (೨೦೦೮), ನಾ.ಕಸ್ತೂರಿಯವರ 'ಅನರ್ಥಕೋಶ' (೧೯೮೧), ಎಚ್.ಜೆ.ಲಕ್ಕಪ್ಪಗೌಡರ 'ಅನ್ಯಾರ್ಥಕೋಶ' (೧೯೯೮), ಟಿ.ವಿ.ವೆಂಕಟರಮಣಯ್ಯನವರ 'ಕನ್ನಡ ಪಡೆನುಡಿಗಳ ಕೋಶ' (೧೯೬೮), ಎಂ.ರಾಜಗೋಪಾಲಚಾರ್ಯರ 'ಕನ್ನಡದ ವಾಗ್ರೂಢಿಗಳು' (೧೯೭೦), ಕೆ.ಗಣಪತಿ ಭಟ್ಟರ 'ಕನ್ನಡ ಪಡೆನುಡಿಗಳ ಕೋಶ' (೧೯೯೮), ಶ್ರೀಕೃಷ್ಣಭಟ್ ಅರ್ತಿಕಜೆ ಮತ್ತು ಹರಿಕೃಷ್ಣ ಭರಣ್ಯರವರ ಸಂಪಾದಕತ್ವದಲ್ಲಿ ಪ್ರಕಟವಾದ 'ನುಡಿ ಸಂಸ್ಕೃತಿ' ಎನ್ನುವ ಹವ್ಯಕ ಪಡೆನುಡಿ ಕೋಶ, ಮುದೇನೂರು ಸಂಗಣ್ಣನವರ 'ಚಿಗಟೇರಿ ಪದಕೋಶ' (೧೯೯೭) ಮೊದಲಾದವುಗಳು ಕನ್ನಡ ವಿಶಿಷ್ಟ ಪದ ಸಂಪತ್ತಿನ ಪರಂಪರೆಯನ್ನು ದಾಖಲಿಸಿದ ಕೋಶಗಳಾಗಿವೆ.

**೨.೩.೬. ಕವಿ ಪದಪ್ರಯೋಗ ಕೋಶಗಳು**

ಒಬ್ಬ ಕವಿಯ ಸಾಹಿತ್ಯಿಕ ಕೃತಿಗಳಲ್ಲಿ ಪ್ರಯೋಗವಾಗಿರುವ ವಿಶಿಷ್ಟ ಪದಗಳನ್ನು ಅನುಕ್ರಮವಾಗಿ ಜೋಡಿಸಿ ಅವುಗಳಿಗೆ ಅರ್ಥ ಮತ್ತು ಅರ್ಥಛಾಯೆಗಳನ್ನು ನೀಡುವ, ಪ್ರಯೋಗಗಳನ್ನು ಬಳಸುವ ನಿಘಂಟು ಪ್ರಕಾರಕ್ಕೆ ಪದಪ್ರಯೋಗ ಕೋಶ ಎಂದು ಕರೆಯಲಾಗುತ್ತದೆ.

ಇಂಗ್ಲಿಷಿನಲ್ಲಿ 'Concordance' ಎಂದು ಕರೆಯಲಾಗುವ ಈ ನಿಘಂಟಿನ ಪ್ರಕಾರದಲ್ಲಿ ಅನೇಕ ಕೋಶಗಳು ಕನ್ನಡದಲ್ಲಿ ರಚನೆಯಾಗಿವೆ. ಈ ರೀತಿಯ ಮೊದಲ ಪ್ರಯತ್ನವನ್ನು ಮೊದಲು

ಮಾಡಿದವರು ಬಿ.ರಾಮಚಂದ್ರರಾವ್. ಇವರು ತಮ್ಮ ಪಿಎಚ್.ಡಿ. ಮಹಾಪ್ರಬಂಧ 'Descriptive words in Pampabharatha' ಎನ್ನುವ 'ವಿಕ್ರಮಾರ್ಜುನ ವಿಜಯ' ಕೃತಿಯಲ್ಲಿ ಪ್ರಕಟವಾದ ಎಲ್ಲ ಶಬ್ದಗಳನ್ನು ಪಟ್ಟಿ ಮಾಡಿ ಅರ್ಥ ಕೊಟ್ಟಿದ್ದಾರೆ. ಇತ್ತೀಚೆಗೆ ಕವಿಗಳ, ಸಾಹಿತಿಗಳ ಪದಪ್ರಯೋಗ ಕೋಶಗಳು ಕನ್ನಡ ನಿಘಂಟು ಪ್ರಪಂಚದಲ್ಲಿ ಯಥೇಚ್ಛವಾಗಿ ಬರುತ್ತಿವೆ.

ಎನ್.ಕೆ.ಕುಲಕರ್ಣಿಯವರ 'ಕುಮಾರವ್ಯಾಸ ಭಾರತ ನಿಘಂಟು' (೧೯೭), ತಾ.ಸು.ಶಾಮರಾಯರ 'ಕುಮಾರವ್ಯಾಸ ಭಾರತ ನಿಘಂಟು' (೧೯೮೧), ಡಿ.ಸಿ.ಅನಂತಸ್ವಾಮಿಯವರ 'ಸಮಗ್ರ ಗದಗು ಭಾರತ ನಿಘಂಟು' (೧೯೯೭), ಎ.ವಿ.ನಾವಡ ಹಾಗೂ ಸಿ.ಉಪೇಂದ್ರ ಸೋಮಯಾಜಿಯವರ 'ಗೋವಿಂದ ಪೈ ಪದಪ್ರಯೋಗಕೋಶ' (೧೯೮೬), ಶ್ರೀರಾಮಭಟ್ಟರು ಸಂಪಾದಿಸಿದ ಗೋಪಾಲಕೃಷ್ಣ ಅಡಿಗರ ಸಾಹಿತ್ಯಕ್ಕೆ ಸಂಬಂಧಿಸಿದ 'ಶಬ್ದಮಾರ್ಗ' (೧೯೮೧), ಜಿ.ವೆಂಕಟಸುಬ್ಬಯ್ಯನವರ 'ಮುದ್ದಣ ಪದಪ್ರಯೋಗ ಕೋಶ' (೧೯೯೬), ನಾ.ದಾಮೋದರ ಶೆಟ್ಟಿಯವರ 'ಮುದ್ದಣನ ಶಬ್ದಪ್ರತಿಭೆ', ಬಿ.ಬಿ.ರಾಜಪುರೋಹಿತರ 'ದ.ರಾ.ಬೇಂದ್ರೆ ಸಮಗ್ರ ಕಾವ್ಯ ನಿಘಂಟು' ಹಾಗೂ 'ದ.ರಾ.ಬೇಂದ್ರೆ ಕಾವ್ಯದ ನುಡಿಗಟ್ಟು ಕೋಶ' (೨೦೧೦), ಎ.ವಿ.ನಾವಡರ 'ಗೋವಿಂದ ಪೈ ನಿಘಂಟು' (೨೦೧೧), ಬಿ.ವಿ.ವಸಂತಕುಮಾರರ 'ಪಂಪನ ಪದಪ್ರಪಂಚ' (೨೦೧೧), ಪಿ.ವಿ.ನಾರಾಯಣರ 'ಪಂಪನ ನುಡಿಗಣಿ' (೨೦೧೩), ಬಸವರಾಜ ಮಲಶೆಟ್ಟಿಯವರ 'ಮಹಾಕವಿ ಹರಿಹರನ ಕೃತಿಗಳ ಪದಕೋಶ' (೧೯೯೧), ಮೃತ್ಯುಂಜಯ ರುಮಾಲೆಯವರ 'ರಗಳೆಗಳ ನಾಮಕೋಶ' (೨೦೦೦) ಮುಖ್ಯವಾದವು.

ಮೇಲಿನ ನಿಘಂಟುಗಳಂತೆ ವಚನಕಾರರ ಪದಪ್ರಯೋಗ ಕೋಶಗಳು ರಚನೆಯಾಗಿವೆ. ಎಸ್.ಆರ್.ಗುಂಜಾಳರ ಬಸವಣ್ಣನವರ 'ಪದಪ್ರಯೋಗ ಕೋಶ' (೧೯೭೩), ಎಸ್.ಆರ್.ಗುಂಜಾಳ ಮತ್ತು ಚಿ.ಎಲ್.ಬ್ಯಾಡಗಿಯವರ 'ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನ ಪದ ಪ್ರಕೋಶ' (೧೯೭೬), ಹಂ.ಸಂ.ವಿಜಯಕುಮಾರ ಅವರ 'ಅಲ್ಲಮ ವಚನ ಪ್ರಕೋಶ' (೧೯೮೨), ಎಂ.ಎಸ್.ಪಾಟೀಲರ 'ಸಿದ್ಧರಾಮೇಶ್ವರ ವಚನ ಪದ ಪ್ರಯೋಗಕೋಶ' (೧೯೮೩), ಮಡಿವಾಳ ಸ್ವಾಮಿಗಳ 'ಅಕ್ಕಮಹಾದೇವಿ ವಚನ ಪದ ಪ್ರಯೋಗ ಕೋಶ' (೨೦೦೬), ಜೇಡರ ದಾಸಿಮಯ್ಯನವರ ವಚನ ಪದಪ್ರಯೋಗ ಕೋಶ ಹೀಗೆ ಹಲವಾರು ವಚನಕಾರರ ಪ್ರಕೋಶಗಳು ಕನ್ನಡದಲ್ಲಿ ಬಂದಿವೆ. ಅದೇ ರೀತಿ ಶ್ರೀನಿವಾಸ ಹಾವನೂರ ಮತ್ತು ವಿ.ಕೃಷ್ಣರ ಸಂಪಾದಕತ್ವದಲ್ಲಿ ಹೊರಬಂದ 'ಕನಕದಾಸರ ಕೀರ್ತನೆಗಳ ಶಬ್ದಪ್ರಯೋಗ ಕೋಶ' ಕನಕದಾಸರ ಸಾಹಿತ್ಯದ ತಿಳಿವಳಿಕೆಗೆ ಸಹಕಾರಿಯಾಗಿವೆ. ಹೀಗೆ ಹಲವಾರು ಕವಿ ಪದಪ್ರಯೋಗ ಕೋಶಗಳು ಕನ್ನಡದಲ್ಲಿ ರಚನೆಯಾಗಿದ್ದು ಸಂಬಂಧಿಸಿದ ಕವಿಗಳ, ಸಾಹಿತಿಗಳ ಕೃತಿಗಳನ್ನು ಅಧ್ಯಯನ ಮಾಡುವಾಗ ವಿದ್ಯಾರ್ಥಿಗಳಿಗೆ, ಬೋಧಕರಿಗೆ, ಸಂಶೋಧಕರಿಗೆ ಸಹಾಯಕವಾಗಿವೆ.

### ೨.೩.೭. ಸಂಖ್ಯಾ ಪದಕೋಶಗಳು

ಭಾರತೀಯ ಸಂಸ್ಕೃತಿಯಲ್ಲಿ ಸಂಖ್ಯಾಶಾಸ್ತ್ರಕ್ಕೆ ವಿಶೇಷ ಸ್ಥಾನವಿದ್ದು, ಈ ಕ್ಷೇತ್ರಕ್ಕೆ ಸಂಬಂಧಿಸಿದ ಅನೇಕ ನಿಘಂಟುಗಳು ರಚನೆಯಾಗಿವೆ. ಕನ್ನಡದಲ್ಲಿ ಕಡೆಂಗೋಡ್ಲು ಸುಬ್ಬಣ್ಣ ಭಟ್ಟರ 'ತತ್ವ ನಿರ್ಣಯ ಕೋಶ'(೧೮೯೩) ಮೊದಲ ಸಂಖ್ಯಾಪದಕೋಶವಾಗಿದೆ. ತದನಂತರ ಬೋಳಾರ ರಾಮಕೃಷ್ಣಯ್ಯನವರ 'ನಾನಾರ್ಥ ಶಬ್ದಾವಳಿ ಮತ್ತು ಸಂಜ್ಞಾರ್ಥಗಳು' (೧೮೯೫), ಡಿ.ವಿ.ಹೊಳ್ಳರವರ 'ಸಂಜ್ಞಾರ್ಥ ತತ್ವಕೋಶ' (೧೯೫೩), ಟಿ.ವಿ.ವೆಂಕಟಾಚಲಶಾಸ್ತ್ರಿಯವರ 'ಶ್ರೀವತ್ಸ ನಿಘಂಟು' (೧೯೭೧), ಬನ್ನಂಜೆ ಗೋವಿಂದಾಚಾರ್ಯರ 'ಅಂಕೆಯಲ್ಲಿ ಆಧ್ಯಾತ್ಮ' ಎನ್ನುವ ಕೃತಿಗಳು ಸಂಖ್ಯಾಶಾಸ್ತ್ರ ಕ್ಷೇತ್ರದಲ್ಲಿ ಬಂದ ಪ್ರಮುಖ ಕೋಶಗಳಾಗಿದ್ದು, ಆ ಕ್ಷೇತ್ರದ ಅಧ್ಯಯನಕ್ಕೆ ಅನುಕೂಲಕರವಾಗಿವೆ.

### ೨.೩.೮. ಇತರೆ ಪದಕೋಶಗಳು

#### ೨.೩.೮.೧. ಧಾರ್ಮಿಕ ಹಾಗೂ ಪೌರಾಣಿಕ ನಿಘಂಟುಗಳು

ಭಾರತ ಧಾರ್ಮಿಕ ಚಳವಳಿಗಳ ದೇಶ. ಪ್ರಾಚೀನ ಕಾಲದಿಂದಲೂ ಹಿಂದೂ, ಬೌದ್ಧ, ಜೈನ, ಪಾರ್ಸಿ ಮೊದಲಾದ ಧರ್ಮಗಳ ಉಗಮ ಸ್ಥಾನ, ಅಷ್ಟೇ ಅಲ್ಲದೆ ಕ್ರೈಸ್ತ, ಇಸ್ಲಾಂ ಧರ್ಮಗಳಿಗೂ ಆಶ್ರಯ ಕೊಟ್ಟ ಜಾತ್ಯತೀತ ರಾಷ್ಟ್ರ. ಧರ್ಮಕ್ಕೆ ಸಂಬಂಧಿಸಿ ಹಲವಾರು ಧಾರ್ಮಿಕ ಕೃತಿಗಳು ರಚನೆಯಾದ ಹಿನ್ನೆಲೆಯಲ್ಲಿ ಧಾರ್ಮಿಕ ಹಾಗೂ ಪೌರಾಣಿಕ ಕ್ಷೇತ್ರದ ನಿಘಂಟುಗಳು ಹೊರಬಂದಿವೆ.

ಚಿಂತಾಮಣಿ ಕಾಲೆಬ್ ಹಾಗೂ ಸ್ವಾಂತಿ ಎಡ್ವರ್ಡ್ಸ್‌ರವರ 'ವೇದಕೋಶ' (೧೯೨೭), ಮ.ಪ್ರ.ಪೂಜಾರರವರ 'ಜೈನಧರ್ಮ ಪರಿಭಾಷೆ' (೧೯೩೦), ತ.ಸು.ಶಾಮರಾಯರು ಹಾಗೂ ಪ.ನಾಗರಾಜಯ್ಯನವರು ಸಂಪಾದಿಸಿದ 'ಜೈನ ಪರಿಭಾಷಾ ರತ್ನಕೋಶ' (೧೯೮೧), ಅನಂತರಂಗಾಚಾರ್ ಅವರ 'ಜೈನ ಪರಿಭಾಷಾ ಸಂಗ್ರಹ', ಎಸ್.ಕೆ.ರಾಮಚಂದ್ರರಾಯರು ಸಂಪಾದಿಸಿದ 'ಪ್ರಾಕೃತ ಪದಕೋಶ' (೧೯೮೫) (ಜೈನ ಯುಗಕ್ಕೆ ಸಂಬಂಧಿಸಿದ), ಸರಸ್ವತಿ ವಿಜಯಕುಮಾರ ಹಾಗೂ ಬಾ.ವೇ.ಶ್ರೀಧರರವರು ಸಂಪಾದಿಸಿದ 'ಜೈನ ಪರಿಭಾಷಾ ಪದ ವಿವರಕೋಶ' (೨೦೦೬), ಶಂಕರಾಚಾರ್ಯರ ಅದ್ವೈತ ಸಿದ್ಧಾಂತ ಪದಗಳನ್ನೊಳಗೊಂಡ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು ೨೦೦೩ರಲ್ಲಿ ಹೊರತಂದ 'ಪಾರಿಭಾಷಿಕ ಪದಕೋಶ', ಮಧ್ವಾಚಾರ್ಯರ ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದ ಟಿ.ಕೆ.ವೇಣುಗೋಪಾಲದಾಸರು ಸಂಪಾದಿಸಿದ 'ಮಾಧ್ವ ನಿಘಂಟು' (೧೯೯೫) ಹಾಗೂ 'ಶ್ರೀ ಮದ್ಭಾಗವತ ತಾತ್ಪರ್ಯ ನಿಘಂಟು' (೧೯೯೫), ವೇದದಲ್ಲಿರುವ ಶಬ್ದಗಳಿಗೆ ಅರ್ಥ ತಿಳಿಸುವ 'ವೈದಿಕ ಶಬ್ದಾರ್ಥ ಕೋಶ' (೧೯೯೯), ಹರಿದಾಸ ಸಾಹಿತ್ಯಕ್ಕೆ ಸಂಬಂಧಿಸಿದ ದಿದ್ದಿಗಿ ಜಗನ್ನಾಥರಾವ್ ಕುಲಕರ್ಣಿ ಅವರ 'ಶ್ರೀ ಹರಿಕಥಾಮೃತ ಸಾರ ದರ್ಪಣ' (೨೦೦೨), ವೀರಶೈವ ಮತದ ಪರಿಭಾಷೆಗಳನ್ನೊಳಗೊಂಡ ಫ.ಗು.ಹಳಕಟ್ಟಿಯವರ 'ಶಿವಾನುಭವ ಶಬ್ದಕೋಶ' (೧೯೪೩), ಡಾ.ಎಸ್.ವಿದ್ಯಾಶಂಕರ ಹಾಗೂ ಡಿ.ವಿರೂಪಾಕ್ಷಪ್ಪನವರ ಸಂಪಾದಕತ್ವದಲ್ಲಿ ಬಂದ 'ವೀರಶೈವ ಪಾರಿಭಾಷಿಕ ಪದಕೋಶ', ತ.ಸು.ಶಾಮರಾಯರ 'ಶಿವಶರಣ ಕಥಾರತ್ನಕೋಶ' (೧೯೯೩),

ಪುರಾಣಗಳಲ್ಲಿ ಉಲ್ಲೇಖವಾದ ವಿಶಿಷ್ಟ ಪದಗಳನ್ನು ದಾಖಲಿಸಿರುವ ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿಯವರು ಸಂಪಾದಿಸಿರುವ 'ಪುರಾಣನಾಮ ಚೂಡಾಮಣಿ' (೧೯೪೧) ಹಾಗೂ ಯಜ್ಞನಾರಾಯಣ ಉಡುಪರು ಸಂಪಾದಿಸಿದ 'ಪುರಾಣ ಭಾರತ ಕೋಶ' (೧೯೭೮), ಮೂಡಂಬೈಲಿನ ಸಿ.ಗೋಪಾಲಶಾಸ್ತ್ರಿಗಳು ಸಿದ್ಧಪಡಿಸಿದ 'ಮಹಾಭಾರತ ಕೋಶ', ಅ.ರಾ.ಸೇ. ಅವರ ಪ್ರಧಾನ ಸಂಪಾದಕತ್ವದಲ್ಲಿ ಮೂಡಿಬಂದ 'ಪರಮಾರ್ಥ ಪದಕೋಶ' (೧೯೯೯) ಹೀಗೆ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಇನ್ನೂ ಹಲವಾರು ವಿಶಿಷ್ಟ ಕೋಶಗಳು ನಿರ್ಮಾಣವಾಗಿ ಆ ಕ್ಷೇತ್ರದ ಅಧ್ಯಯನಕ್ಕೆ ಸಹಕಾರಿಯಾಗಿವೆ.

### ೨.೩.೮.೨. ಜಾನಪದ ನಿಘಂಟುಗಳು

ಅಜ್ಞಾತರು ರಚಿಸಿದ ಅಮರ ಸಾಹಿತ್ಯವೇ ಜಾನಪದ ಸಾಹಿತ್ಯ. ಜಾನಪದ ಕಥೆಗಳು, ಹಾಡುಗಳು, ಲಾವಣಿಗಳು, ಗಾದೆಗಳಲ್ಲಿ ಬಳಕೆಯಾದ ವಿಶಿಷ್ಟ ಪದಗಳನ್ನು ನಿಘಂಟು ಮಾದರಿಯಲ್ಲಿ ಸಂಗ್ರಹಿಸಿದ ಮೊದಲ ನಿಘಂಟು ಎಂದರೆ ಕ್ಯಾತನಹಳ್ಳಿ ರಾಮಣ್ಣನವರ 'ಜನಪದ ನಿಘಂಟು' (೧೯೮೭). ಇದಾದ ನಂತರ ಎಚ್.ಎಲ್.ನಾಗೇಗೌಡರ 'ಕನ್ನಡ ಜಾನಪದ ಕೋಶ', ಗೊ.ರು.ಚನ್ನಬಸಪ್ಪನವರ 'ಕನ್ನಡ ಜಾನಪದ ನಿಘಂಟು', ಚಂದ್ರಶೇಖರ ಕಂಬಾರ ಅವರ ಸಂಪಾದಕತ್ವದಲ್ಲಿ ಬಂದ 'ಕನ್ನಡ ಜಾನಪದ ವಿಶ್ವಕೋಶ' (೧೯೮೫), ಹಿ.ಚಿ.ಬೋರಲಿಂಗಯ್ಯ ಸಂಪಾದಕತ್ವದಲ್ಲಿ ರಚಿತವಾದ 'ಕರ್ನಾಟಕ ಜನಪದ ಕಲೆಗಳ ಕೋಶ' (೧೯೯೯), ಶಿವರಾಮಯ್ಯನವರು ರಚಿಸಿದ 'ಗ್ರಾಮೀಣ ಸಂಸ್ಕೃತಿ ಸಂದರ್ಭ ಕೋಶ' (೨೦೦೦), ಹಂಪಿ ವಿಶ್ವವಿದ್ಯಾಲಯದ ಸಾಂಸ್ಕೃತಿಕ ಪದಕೋಶಗಳು (೨೦೦೦-೨೦೦೧), ಎಚ್.ನಂಜೇಗೌಡರ 'ಜಾನಪದ ಕೋಶ' (೨೦೦೨), ಸುಧಾಕರರವರು ಸಂಪಾದಿಸಿದ 'ಜನಪದ ನುಡಿಗಟ್ಟುಗಳ ನುಡಿಕೋಶ' (೨೦೦೬), ಅಂಬಳಿಕೆ ಹಿರಿಯಣ್ಣನವರ 'ಮಲೆನಾಡಿನ ಸಾಂಸ್ಕೃತಿಕ ಪದಕೋಶ', ಸ.ಚಿ.ರಮೇಶರವರ 'ಜಾನಪದ ವಸ್ತುಕೋಶ' (೨೦೧೪), ವೀಣಾಕ್ಷಿ ಎಸ್.ಡಿ. ಅವರ ಸಂಪಾದನೆಯಲ್ಲಿ ಮೂಡಿಬಂದ 'ಮಲೆನಾಡ ನುಡಿಕೋಶ' (೨೦೧೪) ಹೀಗೆ ಜನಪದ ಸಾಹಿತ್ಯದ ಬಗೆಗೆ ಬಂದಿರುವ ವಿಶಿಷ್ಟ ಕೋಶಗಳಾಗಿವೆ.

### ೨.೩.೮.೩. ವೃತ್ತಿ ಪದಕೋಶಗಳು

ಬೇಸಾಯ, ಕುಂಬಾರ, ನೇಕಾರ ಮೊದಲಾದ ಆಯಾ ವೃತ್ತಿಗೆ ಸಂಬಂಧಿಸಿದ ಪಾರಿಭಾಷಿಕ ಪದಗಳನ್ನು ಸಂಗ್ರಹಿಸಿದ ಅನೇಕ ವೃತ್ತಿ ಪದಕೋಶಗಳು ಕನ್ನಡದಲ್ಲಿ ರಚನೆಯಾಗಿವೆ. ೨೦೦೭ರಲ್ಲಿ ಹೊರಬಂದ ಬಸವರಾಜ ಕುಂಚೂರುರವರ 'ಕುಂಬಾರಿಕೆ ವೃತ್ತಿ ಪದಕೋಶ' ಮೊದಲನೆಯ ವೃತ್ತಿ ಪದಕೋಶವಾಗಿದೆ. ಇದರ ನಂತರ ಹಂಪಿ ವಿಶ್ವವಿದ್ಯಾಲಯದಿಂದ ಪ್ರಕಟವಾದ ಸಾಂಬಮೂರ್ತಿರವರ 'ನೇಕಾರರ ವೃತ್ತಿ ಪದಕೋಶ', ಎಸ್.ಎಸ್.ಅಂಗಡಿರವರ 'ಕುಂಬಾರ ವೃತ್ತಿ ಪದಕೋಶ' ಹಾಗೂ 'ಸಂಕೀರ್ಣ ವೃತ್ತಿ ಪದಕೋಶ', ಡಿ.ಪಾಂಡುರಂಗಬಾಬುರವರ 'ಪಾಂಚಾಳ ವೃತ್ತಿ ಪದಕೋಶ', ಅಶೋಕಕುಮಾರ ರಂಜೇರೆ ಅವರ 'ವಿವಿಧ ವೃತ್ತಿ ಪದಕೋಶ', ಕೆ.ವಿ.ನಾರಾಯಣ ಅವರಿಂದ

ಸಂಪಾದಿಸಲ್ಪಟ್ಟ 'ಕೃಷಿ ಪದಕೋಶ' ಕನ್ನಡದಲ್ಲಿ ಪ್ರಕಟವಾದ ಪ್ರಮುಖ ವೃತ್ತಿ ಪದಕೋಶಗಳಾಗಿವೆ. ಇವುಗಳಿಂದ ಆಯಾ ವೃತ್ತಿಯ ವಿಶೇಷ ಪದಗಳ ತಿಳಿವಳಿಕೆ ಸಿಗುತ್ತದೆ.

**೨.೩.೮.೪. ಕನ್ನಡ-ಕನ್ನಡ ಕೋಶಗಳು**

ಕನ್ನಡದಲ್ಲಿ ಇತರೆಲ್ಲ ಕೋಶಗಳಿಗಿಂತ ಅತಿ ಹೆಚ್ಚು ರಚನೆಯಾದ ಕೋಶಗಳೆಂದರೆ ಕನ್ನಡ-ಕನ್ನಡ ಏಕಭಾಷಿಕ ಕೋಶಗಳಾಗಿವೆ. ಈಗಾಗಲೇ ದಾಖಲಿಸಿದಂತೆ ದೇಸಿ ವಿದ್ವಾಂಸರಿಂದ ರಚಿತವಾದ ಮೊದಲ ಕನ್ನಡ-ಕನ್ನಡ ನಿಘಂಟೆಂದರೆ ಗಂಗಾಧರ ಮಡಿವಾಳೇಶ್ವರ ತುರಮುರಿಯವರ 'ಶಬ್ದಮಂಜರಿ' (೧೮೮೦) ಇದಾದ ನಂತರ ಕನ್ನಡ ಶಬ್ದಾರ್ಥ ವಿವೇಚನೆಗೆ ಸಂಬಂಧಿಸಿದಂತೆ ಗುರುರಾವ್ ವಿಠ್ಠಲರಾವ್ ಮೊಹರೆ ಎನ್ನುವವರು 'ಶಬ್ದ ವ್ಯುತ್ಪತ್ತಿ' (೧೯೦೦) ಎನ್ನುವ ಕೋಶವನ್ನು ರಚಿಸಿದ್ದಾರೆ. ಆರ್.ಎಸ್.ನಾವೂರಕರ್ ಮತ್ತು ಸೇಡಿಯಾಪು ಕೃಷ್ಣಭಟ್ಟರಿಂದ ರಚಿತವಾಗಿ 'ಕನ್ನಡ ನಿಘಂಟು' (೧೯೫೧), ಎಚ್.ವಿ.ರಮಾಕಾಂತರ 'ಕನ್ನಡ-ಕನ್ನಡ ಶಬ್ದಕೋಶ' (೧೯೫೨), ಗುರುನಾಥ ಜೋಶಿ ಮತ್ತು ಜಿ.ಅಶ್ವತ್ಥನಾರಾಯಣರಾವ್‌ರಿಂದ ಸಂಪಾದಿಸಲ್ಪಟ್ಟ 'ಕನ್ನಡ-ಕನ್ನಡ ಶಬ್ದಕೋಶ' (೧೯೫೬), ಜೆ.ಎ.ಕವಲಿ ಅವರ 'ಸಚಿತ್ರ ಕನ್ನಡ ಕಸ್ತೂರಿ ಕೋಶ', ಸ.ಸ.ಮಾಳವಾಡ, ಕ.ವೆಂ.ರಾಜಗೋಪಾಲ ಮತ್ತು ಟಿ.ಕೇಶವಭಟ್‌ರವರ ಸಂಪಾದಕತ್ವದಲ್ಲಿ ಮೂಡಿಬಂದ 'ಕನ್ನಡ ಕಾವ್ಯ ಪದಮಂಜರಿ' (೧೯೭೦), ಶಿವರಾಮ ಕಾರಂತರ 'ಸಿರಿಗನ್ನಡಂ ಅರ್ಥಕೋಶ', ಕೊಳಂಬೆ ಪುಟ್ಟಣ್ಣಗೌಡರು ರಚಿಸಿದ 'ಅಚ್ಚಗನ್ನಡ ನುಡಿಕೋಶ' (೧೯೯೩), ಸ್ವಾಮಿ ಪುರುಷೋತ್ತಮಾನಂದರ 'ಪದ್ಯಕ್ಕೆ ಇಷ್ಟು ಸಾಕು ಕನ್ನಡ ಶಬ್ದ ಸಂಪತ್ತು' (೨೦೦೧), ಡಿ.ಟಿ.ರಂಗಸ್ವಾಮಿಯವರ 'ಕನ್ನಡ-ಕನ್ನಡ ಅರ್ಥಕೋಶ' ಹೀಗೆ ಇನ್ನೂ ಹಲವಾರು ಕನ್ನಡ-ಕನ್ನಡ ಕೋಶಗಳು ಬಂದಿವೆ. ಇವೆಲ್ಲವೂ ವಿವಿಧ ವಲಯ, ಕ್ಷೇತ್ರಗಳ ಬಗೆಗಿನ ಮಿತಿಯುಳ್ಳ ವ್ಯಾಪ್ತಿಯನ್ನು ಹೊಂದಿರುವಂತಹದ್ದು. ಮೊದಲು ಸಾಮಾನ್ಯ ಬಳಕೆಯ ಭಾಷೆಗೆ ಒಂದು ನಿಘಂಟು ರಚನೆಯಾಗುತ್ತಿದ್ದವು. ಆನಂತರ ಇತರ ಕಡೆಗೂ ವಿಸ್ತರಿಸಿದುದು ಕಂಡುಬರುತ್ತವೆ. ಕೆಲವು ಶಾಸ್ತ್ರಗಳಿಗೆ ಅನುಸಾರವಾಗಿ ಕೆಲವು ಕೇವಲ ಸಂಗ್ರಹಗಳಾಗಿ ಬಂದಿರುವುದನ್ನು ಕಾಣಬಹುದು. ಆದರೆ ಇವೆಲ್ಲವುಗಳಿಗಿಂತ ಶ್ರೇಷ್ಠವಾದ, ಭಾಷಾಶಾಸ್ತ್ರ ನಿಯಮಕ್ಕನುಗುಣವಾಗಿ, ವೈಜ್ಞಾನಿಕವಾಗಿ, ಕ್ರಮಬದ್ಧವಾಗಿ ಜೋಡಿಸಲ್ಪಟ್ಟ ನಿಘಂಟೆಂದರೆ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು'. ಇದೊಂದು ಬೃಹತ್ ನಿಘಂಟು ಯೋಜನೆಯಾಗಿದ್ದು, ೧೯೪೩ರಿಂದ ೧೯೯೫ರವರೆಗೆ ಸುಮಾರು ೫೦ ವರ್ಷಗಳ ದೀರ್ಘಾವಧಿಯಲ್ಲಿ ರಚಿತವಾದ ಇದು ಕನ್ನಡ ಭಾಷೆಯ ಸಮರ್ಥ ಪ್ರತಿನಿಧಿ. ಕಿಟೆಲ್ ಕೋಶವನ್ನು ಹೊರತುಪಡಿಸಿದರೆ ಅತಿ ಹೆಚ್ಚು ಪ್ರಚಲಿತದಲ್ಲಿರುವ ನಿಘಂಟಾಗಿದೆ.

ಹೀಗೆ ರನ್ನಕಂದದಿಂದ ಪ್ರಾರಂಭವಾದ ನಿಘಂಟು ಪರಂಪರೆ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟಿನ ಎಂಟು ಸಂಪುಟಗಳವರೆಗೂ ಬಹುವಿಸ್ತಾರವನ್ನು ಒಳಗೊಂಡಿದೆ. ಈಗಲೂ ವೈವಿಧ್ಯಮಯವಾದ, ತಲಸ್ಪರ್ಶಿಯಾದ ನಿಘಂಟುಗಳು ಕನ್ನಡದಲ್ಲಿ ಬರುತ್ತಿವೆ. ಆದರೆ

ಕನ್ನಡ ನುಡಿಯ ಹಿರಿಮೆಯೆಂದೇ ಬಿಂಬಿತವಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ತನ್ನದೇ ಆದ ಮಹತ್ವವನ್ನು ಒಳಗೊಂಡಿದೆ.

"ಪ್ರಪಂಚದಲ್ಲಿ ವೈವಿಧ್ಯಮಯವಾದ ನಿಘಂಟುಗಳು ಬಳಕೆಯಲ್ಲಿವೆ. ಆ ಎಲ್ಲ ನಿಘಂಟುಗಳನ್ನು ಅಧ್ಯಯನದ ಸೌಕರ್ಯಕ್ಕಾಗಿ ಕೆಲವು ವರ್ಗ, ಉಪವರ್ಗಗಳನ್ನಾಗಿ ವಿಂಗಡಿಸಬೇಕಾಗುತ್ತದೆ. ಹಾಗೆ ವರ್ಗೀಕರಿಸುವಾಗ ಮೂರು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

೧. ಭಾಷೆಗಳ ಸಂಖ್ಯೆಗಳನ್ನಾಧರಿಸಿ :

ಅ) ಏಕಭಾಷಿಕ ಆ) ದ್ವಿಭಾಷಿಕ ಇ) ಬಹುಭಾಷಿಕ

೨. ಭಾಷೆಗಳ ಸ್ಥಾನಮಾನವನ್ನಾಧರಿಸಿ :

ಅ) ಬರೆಹ ಭಾಷೆ ಆ) ಆಡು ಭಾಷೆ

೩. ಭಾಷೆಗಳ ಕಾಲಘಟ್ಟವನ್ನಾಧರಿಸಿ :

ಅ) ಐತಿಹಾಸಿಕ ಆ) ಸಮಕಾಲೀನ

ಯಾವುದೇ ಒಂದು ಸೀಮಿತ ವಲಯಕ್ಕೆ ನಿರ್ಬಂಧಗೊಳಿಸದೆ ಸಾಮಾನ್ಯವಾಗಿ ಬರೆಹದ ಭಾಷೆಯ ನಿಘಂಟುಗಳು ಸಾಮಾನ್ಯ ನಿಘಂಟುಗಳಾಗಿವೆ. ಅವುಗಳ ರಚನೆ ವಿವರಣಾತ್ಮಕವಾಗಿರುತ್ತದೆ. ಈ ಬಗೆಯ ನಿಘಂಟುಗಳಲ್ಲಿ ಒಂದು ಭಾಷೆಯ ಶಬ್ದ, ಅದರ ಪರ್ಯಾಯ ರೂಪಗಳು, ಅವುಗಳ ಅರ್ಥ ವಿವರಣೆ, ವ್ಯುತ್ಪತ್ತಿ, ವ್ಯಾಕರಣಾಂಶಗಳು ಅಡಕವಾಗಿರುತ್ತವೆ.

ಸಾಮಾನ್ಯ ನಿಘಂಟುಗಳಲ್ಲಿ ಮೂರು ಬಗೆ.

ಅ) ಏಕಭಾಷಿಕ ಆ) ದ್ವಿಭಾಷಿಕ ಇ) ಬಹುಭಾಷಿಕ

**ಅ) ಏಕಭಾಷಿಕ** : ಇದರ ಹೆಸರೇ ಹೇಳುವಂತೆ ಯಾವುದಾದರೊಂದು ಭಾಷೆಯ ನಿಘಂಟಿಮಗಳಿಗೆ ಅದೇ ಭಾಷೆಯಲ್ಲಿಯೇ ಅರ್ಥ ವಿವರಣೆಯನ್ನು ಕೊಡಲಾಗುತ್ತದೆ. ಉದಾ : ರನ್ನಕಂದ, ಸಿರಿಗನ್ನಡ ಅರ್ಥಕೋಶ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು.

**ಆ) ದ್ವಿಭಾಷಿಕ** : ಒಂದು ಭಾಷೆಯ ಶಬ್ದಗಳಿಗೆ ಇನ್ನೊಂದು ಭಾಷೆಯಲ್ಲಿ ಅರ್ಥ ವಿವರಣೆಯನ್ನು ನೀಡುವ ನಿಘಂಟುಗಳು ದ್ವಿಭಾಷಿಕ ನಿಘಂಟುಗಳೆಂದು ಕರೆಯುತ್ತಾರೆ. ಉದಾ : ಕನ್ನಡ–ಇಂಗ್ಲಿಶ್ ನಿಘಂಟು.

**ಇ) ಬಹುಭಾಷಿಕ** : ಎರಡು ಭಾಷೆಗಳಿಗಿಂತ ಹೆಚ್ಚು ಭಾಷೆಗಳನ್ನು ಉಪಯೋಗಿಸಿಕೊಂಡು ರಚಿಸುವ ನಿಘಂಟುಗಳನ್ನು ಬಹುಭಾಷಾ ನಿಘಂಟುಗಳೆಂದು ಕರೆಯುತ್ತಾರೆ. ಉದಾ : ಎಲ್.ಎಸ್. ಚಿಟಗುಪ್ಪಿಯವರ ಹಿಂದಿ–ಕನ್ನಡ–ಇಂಗ್ಲಿಶ್ ಶಬ್ದಕೋಶ, ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದವರು ಸಿದ್ಧಪಡಿಸಿದ ತುಳು–ಕನ್ನಡ–ಇಂಗ್ಲಿಶ್ ನಿಘಂಟು ಸಂಪುಟಗಳು".[೧೦]

ಈ ರೀತಿ ಭಾಷೆಗಳ ರಚನೆ, ಸಂಖ್ಯೆ, ಸ್ಥಾನಮಾನ, ಕಾಲಘಟ್ಟ ಮೊದಲಾದ ಅಂಶಗಳ ಹಿನ್ನೆಲೆಯಲ್ಲಿ ನಿಘಂಟುಗಳನ್ನು ವರ್ಗೀಕರಿಸಲಾಗಿದೆ.

## ೨.೪. ಕನ್ನಡ ನಿಘಂಟುಗಳನ್ನು ಕುರಿತ ಅಧ್ಯಯನ ಸಮೀಕ್ಷೆ

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಳೆದ ಆರೇಳು ಶತಮಾನಗಳಿಂದ ನಿಘಂಟಿಗೆ ಸಂಬಂಧಿಸಿದ ಅಧ್ಯಯನಗಳು ವೈಜ್ಞಾನಿಕವಾಗಿ, ಭಾಷಾಶಾಸ್ತ್ರ ನಿಯಮಗಳಿಗೆ ಅನುಗುಣವಾಗಿ ನಡೆದು ಬಂದಿರುವುದು ತಿಳಿದುಬಂದಿರುತ್ತದೆ. ಕನ್ನಡದಲ್ಲಿಯೂ ಮಿಶನರಿಗಳ ಪ್ರವೇಶದೊಂದಿಗೆ ನಿಘಂಟು ಕ್ಷೇತ್ರ ವೈಜ್ಞಾನಿಕವಾಗಿ, ಭಾಷಾತತ್ವಗಳ ಹಿನ್ನೆಲೆಯಲ್ಲಿ ಬೆಳವಣಿಗೆ ಹೊಂದಿತು. ಇಂದು ಕನ್ನಡ ನಿಘಂಟು ಕ್ಷೇತ್ರ ವಿಸ್ತಾರವಾಗಿ ಬೆಳೆದಿದ್ದು, ನಿಘಂಟು ರಚನೆಯ ಜೊತೆಗೆ ಆ ಕ್ಷೇತ್ರದ ಅಧ್ಯಯನಗಳು ಗಂಭೀರವಾಗಿ ನಡೆಯುತ್ತಿವೆ. ಕನ್ನಡ ನಿಘಂಟುಗಳ ಬಗೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಸಂಪಾದಕ ಮಂಡಳಿಯ ಅಧ್ಯಕ್ಷರಾಗಿದ್ದ ಡಿ.ಎಲ್.ನರಸಿಂಹಾಚಾರ್‌ರವರು ೧೯೪೦ರ ದಶಕದಲ್ಲಿ ಬರೆದ ಲೇಖನವೇ 'ಕನ್ನಡಕ್ಕೆ ಹೊಸ ನಿಘಂಟು'. ಆ ಕಾಲದಲ್ಲಿ ಕಿಟೆಲ್ ಕೋಶವೇ ಪ್ರಸಿದ್ಧವಾದ ನಿಘಂಟಾಗಿತ್ತು. ಇದನ್ನು ಮನಗಂಡ ನರಸಿಂಹಾಚಾರ್ ಕನ್ನಡಕ್ಕೆ ಒಂದು ಹೊಸ ನಿಘಂಟಿನ ಅವಶ್ಯಕತೆಯನ್ನು ಈ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ. "ಹಿಂದಿನ ಕಾವ್ಯಗಳನ್ನು ಮೊದಲಿನಿಂದ ಕಡೆಯವರೆಗೂ ಓದಿ ಯಾವ ಪದಕ್ಕೂ ಬಿಡದೆ ಅರ್ಥವನ್ನು ತಿಳಿಯಲೇಬೇಕೆಂದು ಹಠತೊಟ್ಟು ಹೊರಟವರಿಗೆ ಮಾತ್ರ ಹೊಸ ನಿಘಂಟು ಇದ್ದಿದ್ದರೆ ಚೆನ್ನಾಗಿತ್ತಲ್ಲ ಎಂದು ಅಡಿಗಡಿಗೆ ಹೇಳಬೇಕಾದ ಅವಸ್ಥೆ ಬಂದಿದೆ"[೧೧] ಎಂದು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯವೇ ಮುಂದೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಬೃಹತ್ ಪ್ರಮಾಣದ ನಿಘಂಟು ಹೊರಬರಲು ಮಹತ್ವದ ಪಾತ್ರ ವಹಿಸಿತು.

ಕಿಟೆಲ್ ಕೋಶ ರಚನೆಯಾದ ಸಂದರ್ಭದಲ್ಲಿ ಲಭ್ಯವಿರದ ಕೃತಿಗಳು, ಅರ್ಥಸ್ಪಷ್ಟತೆಯ ಕೊರತೆ ಮೊದಲಾದ ಕಾರಣಗಳಿಂದ ಆ ಕೋಶ ಅಪೂರ್ಣವಾದದ್ದು ಎನ್ನುವುದನ್ನು ತಿಳಿದ ಡಿ.ಎಲ್.ನರಸಿಂಹಾಚಾರ್ ಕನ್ನಡಕ್ಕೆ ಹೊಸ ನಿಘಂಟು ಬೇಕಾಗಿದೆ ಎನ್ನುವುದನ್ನು ಹಲವು ಉದಾಹರಣೆಗಳ ಮೂಲಕ ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ. ಈ ಅಂಶಗಳೇ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿವೆ.

ಕನ್ನಡ ಭಾಷೆಯ ಜೀವಾಳ ಆ ಭಾಷೆಯ ಪದಗಳು. ಭಾಷೆಯ ಬೆಳವಣಿಗೆಯಲ್ಲಿ, ಅದರ ಅವಸ್ಥೆಗಳನ್ನು ಅರಿಯುವಲ್ಲಿ ಪದಗಳ ಚರಿತ್ರೆಯ ತಿಳಿವಳಿಕೆ ಅತ್ಯಗತ್ಯ. ಪ್ರಸ್ತುತ ಕಾಲಮಾನದಲ್ಲಿ ಪದಗಳ ಶೋಧನೆ ಮತ್ತು ಅಭ್ಯಾಸಕ್ಕೆ ಒತ್ತು ಕೊಡಲಾಗಿದ್ದು, ಅನೇಕ ಸಂಶೋಧಕರು ನಿಘಂಟು ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಟಿ.ವಿ.ವೆಂಕಟಾಚಲಶಾಸ್ತ್ರಿಯವರು ಕನ್ನಡದ ಸಂಶೋಧಕರಾಗಿದ್ದು, ಕನ್ನಡ ಭಾಷೆ, ಛಂದಸ್ಸು, ಅಲಂಕಾರ, ವ್ಯಾಕರಣ, ನಿಘಂಟು ಕ್ಷೇತ್ರಗಳಿಗೆ ಅವರ ಕೊಡುಗೆ ವಿಶಿಷ್ಟವಾದುದು. ಇತ್ತೀಚಿನ ದಿನಗಳಲ್ಲಿ ನಿಘಂಟು ಕ್ಷೇತ್ರದ ಬಗ್ಗೆ ಅಧಿಕೃತವಾಗಿ ಮಾತನಾಡುವ

ವಿದ್ವಾಂಸರಲ್ಲಿ ಇವರು ಒಬ್ಬರು. ಶ್ರೀವತ್ಸ ನಿಘಂಟು, ಗಜಶಾಸ್ತ್ರ ಶಬ್ದಕೋಶ, ಗ್ರಂಥಸಂಪಾದನ ಪರಿಭಾಷಾಕೋಶ, ಕನ್ನಡ ಛಂದಃಕೋಶ, ಅಚ್ಚಗನ್ನಡ ಪ್ರಾಣಿ ಪದಕೋಶ ನಿಘಂಟುಗಳನ್ನು ಟಿ.ವಿ. ವೆಂಕಟಾಚಲಶಾಸ್ತ್ರಿ ಅವರು ರಚಿಸಿದ್ದಾರೆ. ನಿಘಂಟು ಕುರಿತಂತೆಯೂ ಹಲವು ಲೇಖನಗಳನ್ನು ಬರೆದಿದ್ದಾರೆ. ಅದರಲ್ಲಿಯೂ ಅವರು ೧೯೯೬ರಲ್ಲಿ ಬರೆದ 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು' ಎನ್ನುವ ಲೇಖನದಲ್ಲಿ ಕನ್ನಡ ನಿಘಂಟು ಬೆಳವಣಿಗೆಯ ಇತಿಹಾಸ, ಸಿದ್ಧವಾದ ಬಗೆ (ಪಥ ಕ್ರಮಣ), ಈ ನಿಘಂಟಿಗೆ ಬಳಸಿದ ನಿಘಂಟು ಸಾಮಗ್ರಿಯ ಸ್ವರೂಪ ಮತ್ತು ವ್ಯಾಪ್ತಿ, ನಿಘಂಟು ರಚನೆಯ ಸಂವಿಧಾನ, ಅನುಬಂಧ ಸಂಪುಟ, ಪರಿಷ್ಕರಣ ಮತ್ತು ಪುನರ್ಮುದ್ರಣ, ವಿಸ್ತರಣಾ ಯೋಜನೆಗಳು, ಫಲಪ್ರಯೋಜನಗಳು, ವಿದ್ವಾಂಸರು, ಸಾರ್ವಜನಿಕರು, ಸರ್ಕಾರ ಇವರ ಸಮಾನ ಸಹಭಾಗಿತ್ವ ಮೊದಲಾದ ವಿಷಯಗಳ ಕುರಿತು ತಲಸ್ಪರ್ಶಿಯಾಗಿ ಅಭ್ಯಸಿಸಿ ಚರ್ಚಿಸಲಾಗಿದೆ. ಕನ್ನಡ ನಿಘಂಟು ಸಂಪಾದಕ ಸಮಿತಿಯಲ್ಲಿ ಒಬ್ಬರಾದ ಟಿ.ವಿ.ವೆಂಕಟಾಚಲಶಾಸ್ತ್ರಿಯವರು ಈ ನಿಘಂಟನ್ನು ಪ್ರತಿಯೊಂದು ಆಯಾಮಗಳಲ್ಲಿ ವಿಶ್ಲೇಷಿಸಿ ಬಹುಉಪಯುಕ್ತವಾದ ವಿಚಾರಗಳನ್ನು 'ಶಾಸ್ತ್ರೀಯ – ೧' ಎನ್ನುವ ಕೃತಿಯಲ್ಲಿ ವಿವರಿಸಿದ್ದಾರೆ.

ಗುಂಡ್ಮಿ ಚಂದ್ರಶೇಖರ ಐತಾಳರು ಸಂಪಾದಿಸಿರುವ 'ಸಂಶೋಧನ ವಿಹಾರ' (೧೯೯೮) ಸಂಶೋಧನಾ ಲೇಖನಗಳ ಸಂಗ್ರಹವಾಗಿದೆ. ಈ ಗ್ರಂಥದಲ್ಲಿ ಲೇಖಕರು 'ಸಂಕ್ಷಿಪ್ತ ಕನ್ನಡ ನಿಘಂಟು' ಮತ್ತು 'ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ ನಿಘಂಟು – ಅನರ್ಥಗಳ ಗಂಟು' ಎನ್ನುವ ಲೇಖನಗಳನ್ನು ಬರೆದಿದ್ದು, ಈ ನಿಘಂಟಿನಲ್ಲಿ ಹಲವಾರು ಪದಗಳಿಗೆ ಅನರ್ಥಗಳನ್ನು ನೀಡಿರುವುದನ್ನು ಉದಾಹರಣೆ ಸಮೇತವಾಗಿ ತೋರಿಸಿದ್ದಾರೆ. ಈ ದೋಷಗಳನ್ನು ತಿದ್ದುಪಡಿ ಮಾಡಬೇಕೆಂದು ಸೂಚಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗದಿಂದ ಪ್ರಕಟವಾಗುವ ಮಾಸಪತ್ರಿಕೆಯಾದ 'ನಮ್ಮ ಕನ್ನಡ' (೧೯೯೯) ಪತ್ರಿಕೆಯಲ್ಲಿ ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ವಿಷಯಗಳನ್ನು ಚರ್ಚೆ ಮಾಡಲಾಗಿದೆ. 'ನಮ್ಮ ಕನ್ನಡ' ಪತ್ರಿಕೆಯ ೯ನೇ ಸಂಚಿಕೆಯಲ್ಲಿ ಪ್ರಕಟವಾಗಿರುವ ಕೆ.ವಿ.ನಾರಾಯಣ ಅವರ 'ಕನ್ನಡ–ಕನ್ನಡ ನಿಘಂಟಿನ ಕಂಪ್ಯೂಟರೀಕರಣ' ಎನ್ನುವ ಲೇಖನದಲ್ಲಿ ತಂತ್ರಜ್ಞಾನದ ಬಳಕೆಯ ಸಾಧ್ಯತೆಗಳನ್ನು ಕುರಿತು ಚರ್ಚಿಸಲಾಗಿದೆ.

'ಅರುಹು–ಕುರುಹು' (ಅಕ್ಟೋಬರ್–ಡಿಸೆಂಬರ್, ೨೦೧೨) ಎನ್ನುವ ಕನ್ನಡದ ತ್ರೈಮಾಸಿಕ ಪತ್ರಿಕೆಯಲ್ಲಿ 'ನಿಘಂಟು ನಿರಂತರ ನಿಲುಗಡೆ ಇಲ್ಲ' ಎನ್ನುವ ಲೇಖನವಿದೆ. ನಿಘಂಟು ತಜ್ಞ ಜಿ.ವೆಂಕಟಸುಬ್ಬಯ್ಯ ಇವರು ಆಗಸ್ಟ್ ೨೩ಕ್ಕೆ ನೂರನೇ ವರ್ಷಕ್ಕೆ ಕಾಲಿಟ್ಟ ಸಂದರ್ಭದಲ್ಲಿ ಪಿ.ವಿ.ನಾರಾಯಣ ಮತ್ತು ಶ್ರೀರಾಮಭಟ್ಟ ಇವರು ನಡೆಸಿದ ಸಂದರ್ಶನ ವರದಿ ಇದಾಗಿದ್ದು, ಜಿ. ವೆಂಕಟಸುಬ್ಬಯ್ಯನವರು ಹದಿನೇಳು ವರ್ಷ ನಿರಂತರವಾಗಿ 'ಇಗೋ ಕನ್ನಡ' ಅಂಕಣ ಬರೆದರು ಹಾಗೂ ಅರ್ಧ ಶತಮಾನಗಳಷ್ಟು ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು'

ಯೋಜನೆಯಲ್ಲಿ ತೊಡಗಿಸಿಕೊಂಡ ಅನುಭವದ ವಿಚಾರಗಳ ವಿನಿಮಯ ಇಲ್ಲಿ ನಡೆದಿದೆ. ಸಂದರ್ಶಕರು ಜಿ.ವೆಂಕಟಸುಬ್ಬಯ್ಯನವರಿಗೆ ಕೇಳಿದ ಹದಿನಾರು ಪ್ರಶ್ನೆಗಳಿಗೆ ತಮ್ಮ ನಿಘಂಟಿನ ಬಗೆಗಿನ ಆಸಕ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದ ಸಂದರ್ಭದ ಕಾರ್ಯ ವೈಖರಿ, ನಿಘಂಟಿನ ಸ್ವರೂಪ, ಜಾನಪದ ನಿಘಂಟು, ಕನ್ನಡಕ್ಕೆ ಶಬ್ದಕೋಶದ ಅಗತ್ಯತೆ, ಕಿಟೆಲ್ ಕೋಶ ಮತ್ತು ಪರಿಷತ್ತಿನ ನಿಘಂಟಿಗಿರುವ ವ್ಯತ್ಯಾಸಗಳು, ನಿಘಂಟಿನ ಇತರ ಪದಗಳ ನಿಷ್ಕರ್ಷೆ, ಭಾಷಾ ವಿಜ್ಞಾನದ ಆನ್ವಯಿಕ ಶಾಖೆಯಾಗಿ ನಿಘಂಟುಶಾಸ್ತ್ರದ ಬೆಳವಣಿಗೆ ಮತ್ತು ಸಾಧ್ಯತೆ, ನಿಘಂಟು ರಚನೆಗೆ ಬೇಕಾದ ಸಂಗತಿಗಳು, ನಿಘಂಟುಗಳ ವೈವಿಧ್ಯತೆ ಮೊದಲಾದ ವಿಚಾರಗಳನ್ನು ವಿಸ್ತೃತವಾಗಿ ತಿಳಿಸಿದ್ದಾರೆ. ಈ ವಿಷಯಗಳೆಲ್ಲವೂ ನಿಘಂಟು ಹಾಗೂ ಸಂಶೋಧನೆಗೆ ಪೂರಕವಾಗಿವೆ.

ರಮೇಶಚಂದ್ರ ದತ್ತರವರು ರಚಿಸಿದ 'ಕನ್ನಡ ನಿಘಂಟು ರಚನಾ ಕಲೆ' (೧೯೯೭) ಕೃತಿಯು ಕನ್ನಡ ನಿಘಂಟು ಕ್ಷೇತ್ರದ ವಿಸ್ತಾರವಾದ ಮಾಹಿತಿಯನ್ನು ಒಳಗೊಂಡ ಮೊದಲ ಸಂಶೋಧನಾ ಗ್ರಂಥ. ಮದ್ರಾಸ್ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ ಇದಾಗಿದ್ದು, ಒಟ್ಟು ನಾಲ್ಕು ಅಧ್ಯಾಯಗಳಿವೆ. ನಿಘಂಟು ಅರ್ಥ ಮತ್ತು ವ್ಯಾಖ್ಯೆ, ಜಾಗತಿಕ ಭಾರತೀಯ ನಿಘಂಟಿನ ಇತಿಹಾಸ, ಕನ್ನಡದ ಪ್ರಾಚೀನತೆಯ ಬೆಳವಣಿಗೆಯ ಪ್ರಮುಖ ಘಟ್ಟಗಳ ವಿವರಣೆಯನ್ನು ಸಂಶೋಧಕರು ಮೊದಲ ಅಧ್ಯಾಯದಲ್ಲಿ ನೀಡಿದ್ದಾರೆ. ಅಧ್ಯಾಯ ಎರಡು ಮತ್ತು ಮೂರರಲ್ಲಿ ಕ್ರಮವಾಗಿ ದ್ರಾವಿಡ ಭಾಷಾ ನಿಘಂಟುಗಳು ಮತ್ತು ಕನ್ನಡ ನಿಘಂಟುಗಳು ಎನ್ನುವ ವಿಷಯವನ್ನು ಕುರಿತು ವಿವರಣಾತ್ಮಕ ವಿಚಾರಗಳನ್ನು ನೀಡಿದ್ದಾರೆ. ಕೊನೆಯ ಅಧ್ಯಾಯದಲ್ಲಿ ಆವರೆಗೂ ಬಂದ ಕನ್ನಡ ನಿಘಂಟುಗಳನ್ನು ಕುರಿತು ವಿಶೇಷಣೆಯನ್ನು ನೀಡಿದ್ದಾರೆ. ಕನ್ನಡ ನಿಘಂಟು ಕ್ಷೇತ್ರದ ಪರಿಚಯವನ್ನು ನೀಡಿದ ಮೊದಲ ಮಹಾಪ್ರಬಂಧ ಇದಾಗಿದೆ.

ಅಂಗಡಿ ಎಸ್.ಎಸ್. ಅವರು 'ಮಿಶನರಿಗಳ ದ್ವಿಭಾಷಿಕ ನಿಘಂಟುಗಳು ತೌಲನಿಕ ಅಧ್ಯಯನ' (೧೯೯೯) ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಮಿಶನರಿಗಳು ರಚಿಸಿದ ನಿಘಂಟುಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿದ್ದಾರೆ. ಈ ಗ್ರಂಥದಲ್ಲಿ ಒಟ್ಟು ೭ ಅಧ್ಯಾಯಗಳಿದ್ದು, ಮೊದಲ ಅಧ್ಯಾಯದಲ್ಲಿ ನಿಘಂಟು ಅರ್ಥ ಮತ್ತು ಸ್ವರೂಪ, ನಿಘಂಟು ರಚನಾ ವಿಧಾನಗಳು, ನಿಘಂಟುಗಳ ವರ್ಗೀಕರಣ, ನಿಘಂಟುಶಾಸ್ತ್ರ ಮತ್ತು ಭಾಷಾಶಾಸ್ತ್ರಗಳ ನಡುವಿನ ಸಂಬಂಧಗಳನ್ನು ಮೊದಲ ಅಧ್ಯಾಯದಲ್ಲಿ ವಿವರಿಸಿದ್ದಾರೆ. ೨ನೇ ಅಧ್ಯಾಯದಲ್ಲಿ ಮಿಶನರಿ ಪದದ ಅರ್ಥ, ಮಿಶನರಿಗಳ ಆಗಮನ, ಮಿಶನರಿಗಳ ಸಾಹಿತ್ಯ ಮತ್ತು ಮಿಶನರಿಗಳ ಬಗ್ಗೆ ಈವರೆಗೂ ನಡೆದಿರುವ ಅಧ್ಯಯನವನ್ನು ವಿವರಿಸಿದ್ದಾರೆ. ೩ನೇ ಅಧ್ಯಾಯದಲ್ಲಿ ಮಿಶನರಿಗಳ ಇಂಗ್ಲಿಶ್ – ಕನ್ನಡ ಕೋಶಗಳು ಮತ್ತು ಕನ್ನಡ– ಇಂಗ್ಲಿಶ್ ಕೋಶಗಳ ಸಮೀಕ್ಷೆ ಮಾಡಿದ್ದಾರೆ. ೪ ಮತ್ತು ೫ನೇ ಅಧ್ಯಾಯದಲ್ಲಿ ಮಿಶನರಿಗಳ ನಿಘಂಟು ರಚನಾ ವಿನ್ಯಾಸವನ್ನು ವಿವರಿಸಿ ಅವುಗಳಲ್ಲಿ ದಾಖಲಾದ ಸಮಾನಾರ್ಥಕಗಳು,

ನಾನಾರ್ಥಕಗಳು, ನಿಷೇಧಾರ್ಥಗಳು, ಸಂಕ್ಷೇಪಗಳು ಗಾದೆಗಳು, ನುಡಿಗಟ್ಟುಗಳು ಮೊದಲಾದ ವ್ಯಾಕರಣಾಂಶಗಳ ವಿವರಣೆಯನ್ನು ನೀಡಿದ್ದಾರೆ. ೬ನೇ ಅಧ್ಯಾಯದಲ್ಲಿ ಮಿಶನರಿಗಳ ನಿಘಂಟುಗಳ ಮೌಲ್ಯಮಾಪನ ಮಾಡುತ್ತಾ, ಪರಸ್ಪರ ನಿಘಂಟುಗಳ ಹೋಲಿಕ ವ್ಯತ್ಯಾಸಗಳನ್ನು, ಇತಿಮಿತಿಗಳನ್ನು, ಕನ್ನಡ ನಿಘಂಟುರಚನೆಗೆ ಮಿಶನರಿ ಕೋಶಕಾರರ ಕೊಡುಗೆ ಬಗ್ಗೆ ವಿಶ್ಲೇಷಿಸಿದ್ದಾರೆ. ಕೊನೆಯ ಅಧ್ಯಾಯದಲ್ಲಿ ಪ್ರಾಚೀನ, ಆಧುನಿಕ ನಿಘಂಟುಗಳ ಮಾಹಿತಿಯನ್ನು ನೀಡಿ, ಪಾರಿಭಾಷಿಕ ಪದಸೂಚಿಯನ್ನು ನೀಡಿದ್ದಾರೆ. ನಿಘಂಟುಗಳ ಬಗ್ಗೆ ನಡೆದಿರುವ ಗಂಭೀರ ಅಧ್ಯಯನಗಳಲ್ಲಿ ಈ ಸಂಶೋಧನ ಗ್ರಂಥವೂ ಒಂದಾಗಿದೆ.

ಸುಧಾ ಎಸ್. ಕೌಜಗೇರಿಯವರ 'ಕಿಟೆಲ್ ಕೋಶ ಸಾಂಸ್ಕೃತಿಕ ಅಧ್ಯಯನ' (೨೦೦೮) ಎನ್ನುವ ಕೃತಿಯು ಸಂಶೋಧನಾ ಗ್ರಂಥವಾಗಿದೆ. ಈ ಗ್ರಂಥದಲ್ಲಿ ನಿಘಂಟಿನ ಪ್ರಾಚೀನತೆ, ನಿಘಂಟು ರಚನಾ ವಿಜ್ಞಾನ, ನಿಘಂಟಿನ ವ್ಯಾಖ್ಯೆಗಳು, ಸಾಮಾನ್ಯ ನಿಘಂಟಿನ ರಚನೆಯ ಸ್ವರೂಪ ಮೊದಲಾದ ಮಾಹಿತಿಯನ್ನು ಸಂಶೋಧಕರು ನೀಡಿದ್ದಾರೆ. ಇದರ ಜೊತೆಗೆ ಕಿಟೆಲ್‌ರವರ ಕನ್ನಡ-ಇಂಗ್ಲಿಶ್ ಕೋಶದ ವಿವರವನ್ನು ನೋಡಿದ್ದಾರೆ. ಕಿಟೆಲ್ ಶಬ್ದಕೋಶದ ರಚನೆಗೆ ಪ್ರೇರಣೆಗಳಾವುವು? ಈ ಶಬ್ದಕೋಶದ ಸ್ವರೂಪ, ಕಿಟೆಲ್ ಮತ್ತು ಇತರರ ಶಬ್ದಕೋಶಗಳ ತೌಲನಿಕ ವಿವೇಚನೆಯನ್ನು ಮಾಡಿದ್ದಾರೆ. ನಂತರ ಕಿಟೆಲ್ ಕೋಶದ ಆಕರಗಳನ್ನು ನೀಡುತ್ತಾ ಹಳಗನ್ನಡ ಸಾಹಿತ್ಯ ಕೃತಿಗಳು, ನಡುಗನ್ನಡ ಸಾಹಿತ್ಯ ಕೃತಿಗಳು, ಹೊಸಗನ್ನಡ ಸಾಹಿತ್ಯ ಕೃತಿಗಳು, ದ್ರಾವಿಡ- ಇಂಗ್ಲಿಶ್ ನಿಘಂಟುಗಳು, ಸಂಸ್ಕೃತ ನಿಘಂಟುಗಳು, ಮರಾಠಿ ನಿಘಂಟು ಎಂದು ವಿಂಗಡಿಸಿ, ಕಿಟೆಲ್ ಕೋಶದ ರಚನೆಗೆ ಅವಶ್ಯವಿದ್ದ ಮೂಲ ಸಾಮಗ್ರಿಗಳ ಪರಿಪೂರ್ಣ ಹಾಗೂ ವಿವರವಾದ ಮಾಹಿತಿಯನ್ನು ನೀಡಿದ್ದಾರೆ. ಸಂಶೋಧಕರು ಮುಂದಿನ ಮೂರು ಅಧ್ಯಾಯಗಳಲ್ಲಿ ಕಿಟೆಲ್ ಶಬ್ದಕೋಶದ ಸಾಂಸ್ಕೃತಿಕ ಅಧ್ಯಯನವನ್ನು ಭೌತಿಕ, ಅಭೌತಿಕ ಹಾಗೂ ಶಾಬ್ದಿಕ ಸಂಸ್ಕೃತಿ ಎಂದು ಮೂರು ಭಾಗಗಳಾಗಿ ವಿಂಗಡಿಸಿ ಸವಿವರವಾದ ಮಾಹಿತಿಯನ್ನು ನೀಡಿ ಮುಂದಿನ ಸಂಶೋಧನೆಯ ಸೂಚನೆಯನ್ನು ನೀಡಿದ್ದಾರೆ. ಈ ಕೃತಿಯಲ್ಲಿ ನಿಘಂಟಿಗೆ ಅವಶ್ಯವಾದ ಪ್ರಾಥಮಿಕ ತಿಳಿವಳಿಕೆಯ ಜೊತೆಜೊತೆಗೆ ಕಿಟೆಲ್ ಕೋಶದ ವಿಶೇಷ ಅಧ್ಯಯನದ ಮಾದರಿಯನ್ನು ನೀಡಿರುವುದು ಉಪಯುಕ್ತ ಮಾಹಿತಿಯಾಗಿದೆ.

ನಿಘಂಟು ಕ್ಷೇತ್ರದ ಪರಿಚಯವನ್ನು ತಿಳಿಸುವ ಮತ್ತೊಂದು ಮಹತ್ವದ ಕೃತಿ ವಿಲ್ಯಂ ಮಾಡ್ತ ಮತ್ತು ಆರ್.ವಾಯ್.ಕುಲಕರ್ಣಿಯವರು ಬರೆದಿರುವ ಕೃತಿ 'ನಿಘಂಟು ರಚನಾ ವಿಜ್ಞಾನ' (೧೯೯೪). ಈ ಕೃತಿಯಲ್ಲಿ ನಿಘಂಟು ರಚನಾ ವಿಜ್ಞಾನದ ವಿವರಗಳನ್ನು, ಕನ್ನಡ ನಿಘಂಟುಗಳ ಬೆಳವಣಿಗೆ, ವೃತ್ತಿ ಪದಕೋಶಗಳ ಸಂಕ್ಷಿಪ್ತ ಚರಿತ್ರೆ, ಪ್ರಾಯೋಗಿಕ ಪ್ರಶ್ನಾವಳಿಗಳು, ವೃತ್ತಿ ಪದಕೋಶದ ಸ್ವರೂಪ ಮತ್ತು ರಚನೆಯ ವಿಷಯಗಳನ್ನು ವಿವರಿಸಿದ್ದಾರೆ.

ನಾರಾಯಣ ಕೆ.ವಿ. ಅವರು ಸಂಪಾದಿಸಿರುವ 'ಭಾಷೆ' (೨೦೦೦) (ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ-೧) ಎನ್ನುವ ಕೃತಿಯಲ್ಲಿ ನಿಘಂಟಿಗೆ ಸಂಬಂಧಿಸಿದ ಲೇಖನವನ್ನು ಎನ್.ಬಸವಾರಾಧ್ಯರು

ಬರೆದಿದ್ದಾರೆ. ಈ ಲೇಖನದಲ್ಲಿ ನಿಘಂಟುವಿನ ಸ್ವರೂಪ, ನಿಘಂಟುಗಳ ಚರಿತ್ರೆ, ನಿಘಂಟುಗಳ ಬಳಕೆಯ ವಿಧಾನಗಳು, ಬಳಕೆಯ ಬಗೆಗಳು, ನಿಘಂಟು ರಚನೆಯಲ್ಲಿ ಆಗುತ್ತಿರುವ ಪರಿವರ್ತನೆಗಳು, ಬರಲಿರುವ ದಿನಗಳಲ್ಲಿ ನಿಘಂಟು ಎನ್ನುವ ವಿಚಾರಗಳನ್ನು ತಿಳಿಸಿದ್ದಾರೆ.

ಮಲ್ಲೇಪುರಂ ಜಿ. ವೆಂಕಟೇಶರವರು 'ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ' (೨೦೦೦) ಎನ್ನುವ ವಿಶಿಷ್ಟ ಬಗೆಯ ನಿಘಂಟನ್ನು ಕನ್ನಡ ನಿಘಂಟು ಕ್ಷೇತ್ರಕ್ಕೆ ನೀಡಿದ್ದಾರೆ. ಈ ನಿಘಂಟಿನ ವಿವೇಚನೆಯನ್ನು ಮಾಡುತ್ತಾ ಭಾಷೆಯ ಬೆಳವಣಿಗೆಯಲ್ಲಿ ಕೋಶಗಳ ಮಹತ್ವ ತಿಳಿಸುತ್ತಾ ನಿಘಂಟುಶಾಸ್ತ್ರದ ಮೂಲ ಅಂಶಗಳನ್ನು ತಿಳಿಸುತ್ತಾರೆ.

ತಾಳ್ತಜೆ ವಸಂತಕುಮಾರ್ ರಚಿಸಿರುವ 'ಮುತ್ತಿನ ಸತ್ತಿಗೆ' (೨೦೦೧) ಕೃತಿಯನ್ನು ಮುಂಬಯಿ ವಿಶ್ವವಿದ್ಯಾಲಯ ಪ್ರಕಟಿಸಿದೆ. ಈ ಕೃತಿಯ 'ನಾನಾರ್ಥ ಪದಕೋಶ' ಎನ್ನುವ ಲೇಖನದಲ್ಲಿ ಭಾಷೆ ಸಾಹಿತ್ಯಗಳ ಬೆಳವಣಿಗೆಯ ದೃಷ್ಟಿಯಿಂದ ನಿರ್ಣಾಯಕ ಪಾತ್ರವನ್ನು ವಹಿಸುವ ನಿಘಂಟುಗಳಲ್ಲಿ 'ನಾನಾರ್ಥ ಪದಕೋಶ'ವು ಪ್ರಮುಖವಾದದ್ದು. ಇದು ಸಾಂಪ್ರದಾಯಿಕ ನಿಘಂಟಿಗಿಂತ ತೀರಾ ಬೇರೆಯಾದ, ಅದಕ್ಕಿಂತ ಹೆಚ್ಚು ವ್ಯಾಪಕವಾದ, ಉಪಯುಕ್ತವಾದ ಸಾಹಿತ್ಯ ಕೃತಿಯಾಗಿದೆ ಎಂದು ಅದರ ಮಹತ್ವವನ್ನು ತಿಳಿಸಿದ್ದಾರೆ. ಇದೇ ಗ್ರಂಥದ ಮತ್ತೊಂದು ಲೇಖನ 'ಕನ್ನಡ ನಿಘಂಟು ಮತ್ತು ಕಿಟೆಲ್ ಮಾದರಿ'. ಇದರಲ್ಲಿ ಲೇಖಕರು ಕಿಟೆಲ್ ಕೋಶದ ಮಹತ್ವವನ್ನು ತಿಳಿಸಿದ್ದಾರೆ. ಕಿಟೆಲ್ ಕೋಶವು ಶಾಸ್ತ್ರೀಯವಾಗಿ ಸಂಪಾದಿಸಿಲ್ಪಟ್ಟ ಮೊದಲ ನಿಘಂಟಾಗಿದ್ದು, ಮೂಲರೂಪಾತ್ಮಕ ಮಾದರಿಯನ್ನು ಒಳಗೊಂಡಿದೆ ಎಂದು ತಿಳಿಸಿದ್ದಾರೆ.

ಗ್ರಂಥ ಸಂಪಾದನೆ ಕ್ಷೇತ್ರದಲ್ಲಿ ಅಧ್ಯಯನ ನಡೆಸಿರುವ ಬಿ.ಎಸ್.ಸಣ್ಣಯ್ಯನವರು 'ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ' (೨೦೦೨) ಎನ್ನುವ ಕೃತಿಯನ್ನು ರಚಿಸಿದ್ದು, ಇದನ್ನು ಬೆಂಗಳೂರಿನ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದೆ. ಈ ಕೃತಿಯಲ್ಲಿನ 'ಶಾಸ್ತ್ರಗ್ರಂಥಗಳು' ಎನ್ನುವ ೧೨ನೇ ಅಧ್ಯಾಯ 'ನಿಘಂಟುಗಳು' ಎನ್ನುವ ಲೇಖನದಲ್ಲಿ ನಿಘಂಟುಗಳ ಇತಿಹಾಸ, ಸಂಪಾದಿತ ನಿಘಂಟುಗಳ ಸಂಕ್ಷಿಪ್ತ ಪರಿಚಯವನ್ನು ಲೇಖಕರು ನೀಡಿರುವುದು ಸಂಶೋಧನೆಗೆ ಅನುಕೂಲಕರವಾದ ಮಾಹಿತಿಯಾಗಿದೆ.

ಇತ್ತೀಚೆಗೆ ನಿಘಂಟು ಕ್ಷೇತ್ರದಲ್ಲಿ ಅಧ್ಯಯನ ಮಾಡುತ್ತಿರುವ ನಿಘಂಟುಕಾರರಲ್ಲಿ ಎಸ್.ಎಸ್.ಅಂಗಡಿಯವರು ಒಬ್ಬರು. ಪಿಎಚ್.ಡಿ. ಸಂಶೋಧನಾ ವಿಷಯಕ್ಕೆ ಮಿಶನರಿಗಳ ನಿಘಂಟು ಕ್ಷೇತ್ರವನ್ನೇ ಆರಿಸಿಕೊಂಡು ಮಿಶನರಿಗಳ ನಿಘಂಟುಗಳ ಕುರಿತ ತೌಲನಿಕ ಅಧ್ಯಯನವನ್ನು ನಡೆಸಿ ಆ ಕ್ಷೇತ್ರದ ಮಾಹಿತಿಯ ಅನುಭವದ ಹಿನ್ನೆಲೆಯಲ್ಲಿ 'ಕನ್ನಡ ನಿಘಂಟು ರಚನೆ' (೨೦೦೩) ಎನ್ನುವ ಗ್ರಂಥದಲ್ಲಿ ನಿಘಂಟು ರಚನಾ ಸ್ವರೂಪವನ್ನು ವಿವಿಧ ದೃಷ್ಟಿಕೋನಗಳಲ್ಲಿ ಯಾವ ರೀತಿ ನೋಡಬಹುದು ಎನ್ನುವುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಿದ್ದಾರೆ. ನಿಘಂಟು ಕ್ಷೇತ್ರದ ಸಮಗ್ರ ತಿಳಿವಳಿಕೆಗೆ ಈ ಕೃತಿ ಮಹತ್ವದ್ದಾಗಿದೆ. ನಿಘಂಟು ಎಂದರೇನು? ನಿಘಂಟುಗಳ ವರ್ಗೀಕರಣ, ನಿಘಂಟು ರಚನೆಯ ಶಿಲ್ಪ, ವಿವಿಧ ನಿಘಂಟು ರಚನೆಯ ಸ್ವರೂಪ, ಆಡುಭಾಷೆಗಳ ನಿಘಂಟುಗಳ

ರಚನೆ ಮತ್ತು ಉಪಯುಕ್ತತೆ, ಮಕ್ಕಳ ನಿಘಂಟು, ವಿಶ್ವಕೋಶ, ನಿಘಂಟು ರಚನೆಯ ಸಾಮಾಜಿಕ ಆಯಾಮ, ನಿಘಂಟು ರಚನೆಯಲ್ಲಿ ಕಂಪ್ಯೂಟರ್‌ನ ಬಳಕೆ, ಭಾಷೆಯ ಆಧುನೀಕರಣ ಮತ್ತು ನಿಘಂಟು ರಚನೆ, ಕನ್ನಡ ನಿಘಂಟು ಪರಂಪರೆ, ಕನ್ನಡದಲ್ಲಿ ನಿಘಂಟು ಸಾಹಿತ್ಯದ ಅಧ್ಯಯನ ಮೊದಲಾದ ವಿಷಯಗಳನ್ನು ವಿವರವಾಗಿ ದಾಖಲಿಸಿಲಾಗಿದೆ. ಇದೊಂದು ಕನ್ನಡ ನಿಘಂಟು ಕ್ಷೇತ್ರದ ವಿಶಿಷ್ಟವಾದ ಕೃತಿಯಾಗಿದೆ.

'ಕನ್ನಡ ಸಾಹಿತ್ಯ ಪರಿಷತ್ತು – ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ' (೨೦೦೩) ಎನ್ನುವ ಕೃತಿಯ ಲೇಖಕರು ಎಂ.ಎಲ್.ಶಂಕರಲಿಂಗಪ್ಪನವರು. ಇದೊಂದು ಮಹಾಪ್ರಬಂಧವಾಗಿದ್ದು, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಕಲೆ, ಇತಿಹಾಸಗಳ ಉಳಿವು, ಬೆಳವಣಿಗೆಗಾಗಿ ರೂಪುಗೊಂಡ ಕನ್ನಡ ಸಾಹಿತ್ಯ ಪರಿಷತ್ತಿನ ಸಮಗ್ರ ಅಧ್ಯಯನವನ್ನು ಈ ಕೃತಿ ಮಾಡಿದೆ. ಕರ್ನಾಟಕದ ಸಂಕ್ಷಿಪ್ತ ಪರಿಚಯವನ್ನು ಮಾಡಿಸುತ್ತ ಸಂಘಟನೆಯ ಐತಿಹಾಸಿಕ ಬೆಳವಣಿಗೆಯನ್ನು ದಾಖಲಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಯ ಆರಂಭದ ಹೆಜ್ಜೆಗಳನ್ನು ಗುರುತಿಸುತ್ತಾ ಸಾಹಿತ್ಯ ಸಮ್ಮೇಳನಗಳನ್ನು, ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳ ವೈವಿಧ್ಯತೆ ಮತ್ತು ವಿಶ್ಲೇಷಣೆಯನ್ನು ನೀಡಿದ್ದಾರೆ. ಈ ಗ್ರಂಥದ ಪುಟ ೧೬೫ರಲ್ಲಿ ಕನ್ನಡ–ಕನ್ನಡ ನಿಘಂಟು ಲೇಖನದಲ್ಲಿ ಅದರ ಯೋಜನೆಯ ಮಾಹಿತಿ ತಿಳಿಸಿದ್ದಾರೆ.

ಎಂ.ಎಲ್.ಶಂಕರಲಿಂಗಪ್ಪರವರು 'ಕನ್ನಡ ಸಾಹಿತ್ಯ ಪರಿಷತ್ತಿನ ಸಾಹಿತ್ಯ ಸಮ್ಮೇಳನಗಳ ನಿರ್ಣಯಗಳು' (೨೦೦೩) ಎನ್ನುವ ಕೃತಿಯನ್ನು ಸಂಪಾದಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಹಮ್ಮಿಕೊಂಡ ಕಾರ್ಯಚಟುವಟಿಕೆಗಳಲ್ಲಿ ಪ್ರಮುಖವಾದದ್ದು ಸಾಹಿತ್ಯ ಸಮ್ಮೇಳನಗಳ ಆಯೋಜನೆ. ಇಲ್ಲಿಯವರೆಗೂ ೮೩ ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದೆ. ಈ ಸಮ್ಮೇಳನಗಳಲ್ಲಿ ಕೈಗೊಂಡ ನಿರ್ಣಯಗಳು ಐತಿಹಾಸಿಕ ಮಹತ್ವವನ್ನು ಹೊಂದಿವೆ. ಕನ್ನಡ ನಾಡು, ನುಡಿ, ಸಂಸ್ಕೃತಿಯ ವರ್ಧನೆಯಲ್ಲಿ ಪ್ರಮುಖ ಪಾತ್ರ ವಹಿಸಿರುವ ನಿರ್ಣಯಗಳನ್ನು ಈ ಪುಸ್ತಕದಲ್ಲಿ ದಾಖಲು ಮಾಡಿದ್ದಾರೆ. ಪ್ರಸ್ತುತ ಗ್ರಂಥದಲ್ಲಿ ೬೯ ಸಮ್ಮೇಳನಗಳಲ್ಲಿ ಕೈಗೊಂಡ ನೂರಾರು ನಿರ್ಣಯಗಳಿದ್ದು, ನಿಘಂಟು, ವಿಶ್ವಕೋಶ, ಪಾರಿಭಾಷಿಕ ಪದಕೋಶಗಳಿಗೆ ಸಂಬಂಧಿಸಿದ ನಿರ್ಣಯಗಳನ್ನು ಇಲ್ಲಿ ದಾಖಲಿಸಲಾಗಿದೆ.

ಬಿ.ಬಿ.ರಾಜಪುರೋಹಿತರು 'ಭಾಷೆ ಮತ್ತು ಅರ್ಥಗಳ ಗುಟ್ಟು' (೨೦೦೫) ಎನ್ನುವ ಕೃತಿಯಲ್ಲಿ 'ನಿಘಂಟು ನಿರ್ಮಾಣ ಮತ್ತು ತಾತ್ವಿಕ ವಿವೇಚನೆ' ಹಾಗೂ 'ಸಂಕ್ಷಿಪ್ತ ಕನ್ನಡ ನಿಘಂಟು–ಒಂದು ಪರಿಶೀಲನೆ' ಎನ್ನುವ ಲೇಖನಗಳನ್ನು ಬರೆದಿದ್ದಾರೆ. 'ನಿಘಂಟು ನಿರ್ಮಾಣ ಮತ್ತು ತಾತ್ವಿಕ ವಿವೇಚನೆ' ಎನ್ನುವ ಲೇಖನದಲ್ಲಿ ನಿಘಂಟು ಪ್ರಕಾರಗಳು, ಸಾಮಗ್ರಿ ಆಕಲನ, ಅರ್ಥದ ವ್ಯವಸ್ಥೆ, ವ್ಯಾಕರಣದ ಚೌಕಟ್ಟು, ನಿಘಂಟಿನ ನಿರೂಪಣೆ, ಭಾರತೀಯ ಭಾಷೆಗಳಲ್ಲಿ ನಿಘಂಟು ಕಾರ್ಯ, ಕನ್ನಡದಲ್ಲಿ ನಿಘಂಟು ಕಾರ್ಯ, ಹೊಸಗನ್ನಡದಲ್ಲಿ ನಿಘಂಟು, ನಿಘಂಟಿನ ಇತಿಮಿತಿ, ಕನ್ನಡದಲ್ಲಿ

ಆಗಬೇಕಾದ ಕಾರ್ಯ, ನಿಘಂಟು-ಶಾಸ್ತ್ರ ಗ್ರಂಥಗಳು, ತಾಂತ್ರಿಕ ಯುಗದಲ್ಲಿ ನಿಘಂಟು ಎನ್ನುವ ವಿಷಯಗಳನ್ನು ಚರ್ಚಿಸಲಾಗಿದೆ. 'ಸಂಕ್ಷಿಪ್ತ ಕನ್ನಡ ನಿಘಂಟು' ಎನ್ನುವ ಲೇಖನದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಹೊರಬಂದ 'ಸಂಕ್ಷಿಪ್ತ ಕನ್ನಡ ನಿಘಂಟು'ವಿನ ಪರಿಶೀಲನೆ ಮಾಡಿ ಅದರಲ್ಲಿ ಆಗಬೇಕಾದ ತಿದ್ದುಪಡಿಗಳನ್ನು ಉದಾಹರಣೆ ಸಹಿತವಾಗಿ ನೀಡಲಾಗಿದೆ.

ಜಗನ್ನಾಥ ಹೇಮಾದ್ರಿಯವರ 'ಕನ್ನಡ ಸಾಹಿತ್ಯ ಪರಿಷತ್ತು' (೨೦೦೬) ಎನ್ನುವ ಕೃತಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ, ಇತಿಹಾಸ – ಇವುಗಳ ರಕ್ಷಣೆ ಹಾಗೂ ಅಭಿವೃದ್ಧಿಯ ಮುಖ್ಯ ಉದ್ದೇಶದಿಂದ ೧೯೧೫ರಲ್ಲಿ ಸ್ಥಾಪಿತವಾದ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಸಮಗ್ರ ಪರಿಚಯವನ್ನು ಮಾಡಿದ್ದಾರೆ. ಕರ್ನಾಟಕದ ಪ್ರಬಲ ಸಾಂಸ್ಕೃತಿಕ ಕೇಂದ್ರವಾಗಿರುವ ಈ ಸಂಸ್ಥೆಯು ವಿದ್ವಾಂಸರ, ನುಡಿ ಅಭಿಮಾನಿಗಳ ಮತ್ತು ಸರಕಾರದ ಪ್ರೋತ್ಸಾಹದಿಂದ ಭಾಷಾಭಿಮಾನವನ್ನು ಬೆಳೆಸುತ್ತಿದೆ. ೨೨ ಅಧ್ಯಾಯಗಳ ಈ ಕೃತಿಯಲ್ಲಿ 'ನಿಘಂಟು ನಿರ್ಮಾಣ' ಲೇಖನವು ಪ್ರಸ್ತುತ ಅಧ್ಯಯನಕ್ಕೆ ಉಪಯುಕ್ತವಾಗಿದ್ದು, ಕನ್ನಡ ನಿಘಂಟು ರಚನೆಯ ಕಾರ್ಯವು ಪರಿಷತ್ತಿನ ಸಂವಿಧಾನದಲ್ಲಿದ್ದು, ಮಹತ್ವಪೂರ್ಣ ಧ್ಯೇಯವಾಗಿತ್ತು ಎಂದು ತಿಳಿಸುತ್ತಾ ಈ ನಿಘಂಟು ರಚನೆಯ ಐತಿಹಾಸಿಕ ಬೆಳವಣಿಗೆಯನ್ನು ಆಧಾರಸಮೇತವಾಗಿ ದಾಖಲಿಸಿದ್ದಾರೆ. ಸದರಿ ಪುಸ್ತಕದ ೧೪೦ ರಿಂದ ೧೪೨ರವರೆಗಿನ ಪುಟಗಳಲ್ಲಿ ಕನ್ನಡ ನಿಘಂಟು ರಚನೆ ಪ್ರಾರಂಭವಾದಾಗಿನಿಂದ ಮುಗಿಯುವವರೆಗಿನ ಕನ್ನಡ ನಿಘಂಟು ಸಂಪಾದಕ ಸಮಿತಿಯ ಪಟ್ಟಿಯನ್ನು ನೀಡಿದ್ದಾರೆ. 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ' ಎನ್ನುವ ಪ್ರಸ್ತುತ ಅಧ್ಯಯನ ವಿಷಯಕ್ಕೆ ಈ ಗ್ರಂಥವು ಆಕರ ಕೃತಿಯಾಗಿದೆ.

೨೦೦೬ರಲ್ಲಿ ಮೈಸೂರಿನ ಡಿ.ವಿ.ಕೆ. ಮೂರ್ತಿ ಪ್ರಕಾಶನ ಸಂಸ್ಥೆ ಪ್ರಕಟಿಸಿದ ಕೃತಿ ನಿರುಕ್ತ – ಶಬ್ದಾರ್ಥ ನಿರ್ವಚನ ಶಾಸ್ತ್ರ. ಈ ಕೃತಿಯ ಲೇಖಕರು ಎನ್.ಎಸ್.ಅನಂತರಂಗಾಚಾರ್ ಅವರು. ವೇದಗಳಲ್ಲಿ ಕ್ಲಿಷ್ಟವಾದ ಶಬ್ದಗಳ ಸಂಗ್ರಹವಾದ ನಿಘಂಟಿನ ವಿವರಣೆಯನ್ನು ನಿರುಕ್ತ ನೀಡುತ್ತದೆ. ಈ ಗ್ರಂಥವನ್ನು ಮೂಲತಃ ಬರೆದವರು ಯಾಸ್ಕಚಾರ್ಯರು. ವೇದಮಂತ್ರಗಳ ಅರ್ಥಾನುಸಂಧಾನವನ್ನು ಮಾಡಿಕೊಡುವುದು ಇದರ ಗುರಿಯಾಗಿದ್ದು, ಇದೊಂದು ಸೂತ್ರಗ್ರಂಥವಾಗಿದೆ. ಯಾಸ್ಕರ ಈ ಗ್ರಂಥದಲ್ಲಿ ಶಬ್ದಗಳ ವಿಭಾಗ, ಮಂತ್ರಗಳ ಅರ್ಥತತ್ವ, ಮಂತ್ರದರ್ಶನ ಪ್ರಕಾರಗಳು, ದೇವತಾ ಪರಿಜ್ಞಾನ, ನಿರ್ವಚನ ಕ್ರಮ ಮೊದಲಾದವುಗಳನ್ನು ವಿವರಿಸಲಾಗಿದೆ. ಯಾಸ್ಕರ ಸಂಸ್ಕೃತದ ನಿರುಕ್ತವನ್ನು ಕನ್ನಡದಲ್ಲಿ ಸ್ಥೂಲ ಪರಿಚಯ ಈ ಕೃತಿ ಮಾಡಿಕೊಡುತ್ತದೆ. ಈ ಕೃತಿಯಲ್ಲಿ ಲೇಖಕರು ವೇದ, ವೇದಾಂಗ, ನಿಘಂಟು, ನಿರುಕ್ತದ ಸ್ವರೂಪ, ನಿರ್ವಚನ ಕ್ರಮ, ನಿರುಕ್ತದಲ್ಲಿನ ವ್ಯಾಕರಣಾಂಶಗಳು, ನಿರುಕ್ತವೂ ಅಲಂಕಾರಶಾಸ್ತ್ರವೂ, ನಿರುಕ್ತದಲ್ಲಿನ ಉಪಾಖ್ಯಾನಗಳು, ನಿರುಕ್ತವೂ ಸಮಾಜವೂ ಮೊದಲಾದ ಅಧ್ಯಾಯಗಳಲ್ಲಿ ಉದಾಹರಣೆ ಸಮೇತವಾಗಿ ವಿಶ್ಲೇಷಿಸಿದ್ದಾರೆ. ಈ ಕೃತಿಯು ಪ್ರಸ್ತುತ ಅಧ್ಯಯನಕ್ಕೆ ಸಹಕಾರಿಯಾಗಿದ್ದು, ನಿಘಂಟಿನ ಪ್ರಾಚೀನ ಪರಂಪರೆಯನ್ನು ತಿಳಿಯಲು ಸಹಕಾರಿಯಾಗುತ್ತದೆ.

ವಸಂತಕುಮಾರ್ ಅವರ 'ಕ್ರಿಯಾತ್ಮಕ ಕನ್ನಡ' (೨೦೦೬) ಎನ್ನುವ ಕೃತಿಯ ಐದನೇ ಭಾಗವು 'ಭಾಷಾ ಮಾಧ್ಯಮ' ಎನ್ನುವ ವಿಷಯದಿಂದ ಕೂಡಿದೆ. ಇದರಲ್ಲಿ ಭಾಷೆಯಲ್ಲಿ ಪದಕೋಶದ ಸ್ಥಾನಮಾನಗಳು, ಪದಕೋಶದ ಬೆಳವಣಿಗೆ, ಪದಕೋಶದ ಬೆಳವಣಿಗೆಗೆ ಕಾರಣಗಳು, ನುಡಿಬೆರಕೆ, ನಿಘಂಟು, ನಿಘಂಟು ವೈವಿಧ್ಯ, ನಿಘಂಟು ರಚನಾ ಸಂವಿಧಾನ, ಕನ್ನಡ ನಿಘಂಟುಗಳ ಚರಿತ್ರೆ, ಭಾಷಾಶುದ್ಧಿ ಮೊದಲಾದ ವಿಷಯಗಳ ಚರ್ಚೆಯನ್ನು ಮಾಡಿದ್ದಾರೆ.

ಬಿ.ಬಿ. ರಾಜಪುರೋಹಿತರು ರಚಿಸಿರುವ ಹಲವಾರು ಲೇಖನಗಳ ಸಂಗ್ರಹವೇ 'ವ್ಯಾ–ಸಾ–ನು–ಭಾ–ವ' (೨೦೦೯). ಈ ಗ್ರಂಥದಲ್ಲಿ 'ನಿಘಂಟು ರಚನೆ ಮತ್ತು ಭಾಷಾವಿಶ್ಲೇಷಣೆ' ಎನ್ನುವ ಲೇಖನದಲ್ಲಿ ಭಾಷೆಯ ಹಿನ್ನೆಲೆಯಲ್ಲಿ ನಿಘಂಟಿನ ಉಪಯುಕ್ತತೆಯನ್ನು ನೋಡುವ ಪ್ರಯತ್ನವನ್ನು ಮಾಡಲಾಗಿದೆ.

ಕೆ.ವಿ.ನಾರಾಯಣರವರು ಸಂಪಾದಿಸಿರುವ ಹಂಪಿ, ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 'ಕನ್ನಡ ಜಗತ್ತು ಅರ್ಧಶತಮಾನ' (೨೦೦೯) ಕೃತಿಯಲ್ಲಿ ಏಕೀಕರಣೋತ್ತರ ಐವತ್ತು ವರ್ಷಗಳಲ್ಲಿ ಭಾಷೆಯ ನೆಲೆಯಲ್ಲಿ ಏನೆಲ್ಲ ಬದಲಾವಣೆಗಳನ್ನು ಕಂಡಿದೆ, ಯಾವ ಬಗೆಯ ಸವಾಲುಗಳನ್ನು ಎದುರಿಸಿದೆ ಮತ್ತು ಎದುರಿಸುತ್ತಿದೆ ಎಂಬುದನ್ನು ಬಹುಶಿಸ್ತೀಯ ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಈ ಕೃತಿಯ ಮೂರನೇ ಅಧ್ಯಾಯದಲ್ಲಿ ಕನ್ನಡ ರಚನೆಯಲ್ಲಿ ಆಗಿರುವ ಪಲ್ಲಟಗಳು, ಪದರಚನೆ, ಪದಕೋಶ, ಮಾತು ಮತ್ತು ಬರೆಹ, ಕನ್ನಡ ಮತ್ತು ತಂತ್ರಜ್ಞಾನ ಎನ್ನುವ ಲೇಖನಗಳಲ್ಲಿ ನಮ್ಮ ಕನ್ನಡ ಭಾಷೆಯ ಪದಬೆಳವಣಿಗೆಯಲ್ಲಾಗಿರುವ ವ್ಯತ್ಯಾಸಗಳು, ಪದಪಲ್ಲಟಗಳು ಮತ್ತು ತಂತ್ರಜ್ಞಾನವು ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ಯಾವ ಪಾತ್ರ ವಹಿಸಬಹುದು ಎನ್ನುವ ವಿಷಯಗಳ ಕುರಿತು ಚರ್ಚಿಸಲಾಗಿದೆ.

ಅ.ರಾ.ಮಿತ್ರರವರ ಸಂಕೀರ್ಣ ಬರಹಗಳ ಸಂಕಲನವೇ 'ಮಿತ್ರಾವಲೋಕನ'(೨೦೦೯). ಈ ಕೃತಿಯಲ್ಲಿ ಲೇಖಕರು 'ಭಾಷೆಯ ಬೆಳವಣಿಗೆಯಲ್ಲಿ ನಿಘಂಟುಗಳ ಪಾತ್ರ' ಎನ್ನುವ ಲೇಖನದಲ್ಲಿ 'ಶಬ್ದದ ಮೂಲ, ಉಚ್ಚಾರ ಕ್ರಮ, ಐತಿಹಾಸಿಕವಾಗಿ ಶಬ್ದ ನಡೆದು ಬಂದ ದಾರಿ, ಅರ್ಥ ಮತ್ತು ಅರ್ಥದ ಪದರುಗಳು, ಶಬ್ದದ ಸಮಗ್ರ ಸ್ವರೂಪವನ್ನು ತಿಳಿಸುವ ಲಕ್ಷಣ ನಿರ್ದೇಶನ, ಪರ್ಯಾಯ ಶಬ್ದಗಳು, ವಿವಿಧ ಅರ್ಥಗಳ ನೆರಳನ್ನು ಮನಗಾಣಿಸುವ ಪ್ರಯೋಗಗಳು, ಜ್ಞಾತಿ ಶಬ್ದಗಳು ಇವುಗಳ ವಿವೇಚನೆಯೇ ನಿಘಂಟಿನ ಗುರಿಯಾಗಿದೆ' ಎನ್ನುವುದನ್ನು ವಿವರಿಸಿ ನಿಘಂಟುಗಳು ಭಾಷೆಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಭಾಷೆಯಲ್ಲಿ ಶಬ್ದರಚನೆ ನಿರಂತರವಾಗಿ ನಡೆಯುತ್ತದೆ. ಕನ್ನಡ ಭಾಷೆಯಲ್ಲಿ ಪದಗಳನ್ನು ದಾಖಲಿಸುವ ಬಹುಮುಖೀ ನಿಘಂಟುಗಳು ಬರಲೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯವು ಕನ್ನಡ ಸಾಹಿತ್ಯವು ಜನಸಾಮಾನ್ಯರಿಗೆ ತಿಳಿಯಬೇಕೆಂಬ ಉದ್ದೇಶದಿಂದ ಜಿ.ಎಸ್.ಶಿವರುದ್ರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ 'ಸಾಮಾನ್ಯನಿಗೆ ಸಾಹಿತ್ಯ

ಚರಿತ್ರೆ' (೨೦೧೦) ಎನ್ನುವ ೧೦ ಸಂಪುಟಗಳನ್ನು ಪ್ರಕಟಿಸಿದೆ. ಇದರಲ್ಲಿ ಮೂರನೇ ಸಂಪುಟವನ್ನು ಸಂಪಾದಿಸಿದವರು ಎಂ.ವಿ. ಸೀತಾರಾಮಯ್ಯನವರು. ಈ ಗ್ರಂಥದಲ್ಲಿ ಒಟ್ಟು ಆರು ವಿಭಾಗಗಳಿದ್ದು, ನಾಲ್ಕನೇ ವಿಭಾಗವು 'ವ್ಯಾಕರಣ–ನಿಘಂಟು–ಜ್ಞಾನಕೋಶ' ಎನ್ನುವ ಶೀರ್ಷಿಕೆಯನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ನಿಘಂಟು ಎಂದರೇನು? ಕನ್ನಡ ನಿಘಂಟು ಪರಂಪರೆಯಲ್ಲಿ ಪ್ರಾಚೀನ ನಿಘಂಟುಗಳು ಮತ್ತು ವಿಶ್ವಕೋಶಗಳ ಮಾಹಿತಿಯನ್ನು ನೀಡಲಾಗಿದೆ.

ಪಾದೇಕಲ್ಲು ವಿಷ್ಣುಭಟ್ಟ ಸಂಪಾದಿಸಿರುವ 'ವಿದ್ವಜ್ಜೀವಿತ' (೨೦೧೧) ಎನ್ನುವ ಜಿ. ವೆಂಕಟಸುಬ್ಬಯ್ಯನವರ ಗೌರವ ಗ್ರಂಥವು ನಿಘಂಟು ಕ್ಷೇತ್ರದ ಅಪರೂಪದ ಪುಸ್ತಕ. ಈ ಕೃತಿಯಲ್ಲಿ ಕೃತಿ ಸರಣಿ, ನಿಘಂಟು ಲೋಕ, ಸಾಹಿತ್ಯ ಸಂಪಾದನ, ಅನುವಾದ, ಸಂದರ್ಶನ ಎನ್ನುವ ಐದು ಅಧ್ಯಾಯಗಳಿದ್ದು, ಇದರ ಜೊತೆಗೆ ಅನುಬಂಧವು ಇದೆ. ಪ್ರಸ್ತುತ ಈ ಕೃತಿಯಲ್ಲಿ ನಿಘಂಟು ಲೋಕ ಎನ್ನುವ ಅಧ್ಯಾಯವು, ಜಿ.ವೆಂಕಟಸುಬ್ಬಯ್ಯನವರ ನಿಘಂಟು ಲೋಕದ ಸಾಧನೆಗಳನ್ನು ವಿವರಿಸುವುದಷ್ಟೇ ಅಲ್ಲದೇ ಅವರೇ ಸ್ವತ: ರಚಿಸಿದ ನಿಘಂಟುಗಳ ವಿಮರ್ಶಾ ಲೇಖನಗಳ ಮಾಹಿತಿ ಇದೆ ಹಾಗೂ ಪ್ರಸ್ತುತ ಕನ್ನಡ ನಿಘಂಟು ಲೋಕದಲ್ಲಾಗಬೇಕಾದ ಬದಲಾವಣೆಗಳ ಬಗ್ಗೆ 'ಕನ್ನಡ ಕೋಶ ವಿಸ್ತಾರ' ಎನ್ನುವ ಲೇಖನದಲ್ಲಿ ತಿಳಿಸಲಾಗಿದೆ.

ಈ ಕೃತಿಯ ೫ನೇ ಅಧ್ಯಾಯವಾದ 'ಸಂದರ್ಶನ' ಭಾಗದಲ್ಲಿ ಜಿ.ವೆಂಕಟಸುಬ್ಬಯ್ಯನವರೊಂದಿಗೆ ಪಾದೇಕಲ್ಲು ವಿಷ್ಣುಭಟ್ಟ ಮತ್ತು ಎ.ವಿ.ನಾವಡ ಮಾಡಿರುವ ಸಂದರ್ಶನದಲ್ಲಿ ಕನ್ನಡ ನಿಘಂಟಿನ ಚರಿತ್ರೆ, ವಿಸ್ತಾರ, ಬೆಳವಣಿಗೆ, ವೈವಿಧ್ಯತೆ ಹಾಗೂ ತಮ್ಮ ಸೇವೆ ಮೊದಲಾದವುಗಳ ವಿಚಾರ ಸಿಗುತ್ತದೆ. ಅನುಬಂಧದಲ್ಲಿ ದೊರಕುವ ಮಾಹಿತಿಗಳು ಪ್ರಸ್ತುತ ಅಧ್ಯಯನಕ್ಕೆ ವಿಸ್ತೃತವಾದ ವಿಚಾರಗಳನ್ನು ನೀಡಿವೆ. ಈ ರೀತಿಯಾಗಿ ಈ ಕೃತಿಯು ನಿಘಂಟು ಕ್ಷೇತ್ರಕ್ಕೆ ಸಂಬಂಧಿಸಿದಂತೆ ಪ್ರಮುಖ ಮಾಹಿತಿಯನ್ನೊದಗಿಸುವ ಆಕರ ಗ್ರಂಥವಾಗಿದೆ.

ಎಸ್.ವಿ.ಶ್ರೀನಿವಾಸರಾವ್‌ರವರು 'ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು' (೨೦೧೧) ಎನ್ನುವ ಕೃತಿಯನ್ನು ಬರೆದಿದ್ದಾರೆ. ೧೯೧೫ರಲ್ಲಿ ಸ್ಥಾಪನೆಯಾದ ಕನ್ನಡ ಸಾಹಿತ್ಯ ಪರಿಷತ್ತು ಪ್ರತಿವರ್ಷವೂ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ನಾಡಿನ ಒಂದು ಪ್ರತಿಷ್ಠಿತ ಸ್ಥಳದಲ್ಲಿ ನಡೆಸಿಕೊಂಡು ಬರುತ್ತಿದೆ. ೧೯೧೫ರಿಂದ ೨೦೧೭ರವರೆಗೆ ಒಟ್ಟು ೮೩ ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳನ್ನು ಆಯೋಜಿಸಿದೆ. ಇದು ಪರಿಷತ್ತಿನ ಗೌರವ ಕಾರ್ಯಗಳಲ್ಲಿ ಒಂದಾಗಿದ್ದು, ಸಮ್ಮೇಳನಗಳು ಕನ್ನಡ ನುಡಿಜಾತ್ರೆಗಳಾಗಿ ಕನ್ನಡಿಗರಲ್ಲಿ ಕನ್ನಡತನದ ಪ್ರಜ್ಞೆಯನ್ನು ಬೆಳೆಸಿವೆ. ಸಮ್ಮೇಳನಗಳ ಸಮಗ್ರ ಬೆಳವಣಿಗೆಯನ್ನು ಪ್ರತಿಬಿಂಬಿಸುವ ಈ ಗ್ರಂಥದಲ್ಲಿ ೨೦೦೯ರವರೆಗೆ ಜರುಗಿದ ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರುಗಳ ಮಾಹಿತಿ ನೀಡಲಾಗಿದ್ದು, ಈ ಮೂಲಕ ಅಧ್ಯಕ್ಷರ ಭಾಷಣದಲ್ಲಿ ಅವರ ಕಾರ್ಯಕೆಲಸಗಳನ್ನು, ಸೂಕ್ಷ್ಮನೋಟಗಳನ್ನು, ಗುರುತಿಸುವುದರ ಜೊತೆಗೆ ನಿಘಂಟು ರಚನಾ ಕಾರ್ಯದ ಬಗೆಗಿನ ಅಧ್ಯಕ್ಷೀಯ ಭಾಷಣಗಳನ್ನು ದಾಖಲಿಸಲಾಗಿದೆ.

ಎಸ್. ಕಾರ್ತಿಕ್‌ರವರು ಬರೆದಿರುವ 'ಪದಾರ್ಥ ಸಂಪದ' (೨೦೧೧) ಕೃತಿಯು ಇಪ್ಪತ್ತೆರಡು ಸಂಶೋಧನಾ ಲೇಖನಗಳನ್ನು ಒಳಗೊಂಡಿದೆ. ಈ ಎಲ್ಲ ಲೇಖನಗಳು ಪ್ರಾಚೀನ ಹಾಗೂ ಆಧುನಿಕ ಕಾಲದ ನಿಘಂಟುಗಳ ವಿವರಣಾತ್ಮಕ ಮಾಹಿತಿಯನ್ನು ಒಳಗೊಂಡಿವೆ. 'ಶಾಸನ ಪದಕೋಶಗಳು – ಒಂದು ಸಮೀಕ್ಷೆ' ಎನ್ನುವ ಲೇಖನವು ಕನ್ನಡ ಪದಸಂಪತ್ತಿನ ಮೂಲ ಬೇರುಗಳು ಶಾಸನಗಳಲ್ಲಿವೆ ಎನ್ನುವುದನ್ನು ತಿಳಿಸಿ ಶಾಸನಗಳಿಗೆ ಸಂಬಂಧಿಸಿದ ಶಾಸನ ಪದಕೋಶಗಳನ್ನು ಸಮೀಕ್ಷೆ ಮಾಡಿದೆ.

ಶ್ರೀ ಕೃಷ್ಣಭಟ್ ಅರ್ತಿಕಜೆರವರು 'ಸಾರ್ಥಕ' ಎನ್ನುವ (ಎಂ. ಮರಿಯಪ್ಪ ಭಟ್ ಸಂಸ್ಮರಣ ಗ್ರಂಥ) (೨೦೧೧) ಎನ್ನುವ ಪುಸ್ತಕವನ್ನು ಸಂಪಾದಿಸಿದ್ದಾರೆ. ಮರಿಯಪ್ಪ ಭಟ್ಟರು ಕರ್ನಾಟಕದ ಪ್ರಸಿದ್ಧ ಭಾಷಾವಿಜ್ಞಾನಿಗಳು. ಈ ಗ್ರಂಥದ 'ಶಬ್ದಕೋಶಗಳು' ಎನ್ನುವ ಮೂರನೇ ಭಾಗದಲ್ಲಿ ನಿಘಂಟಿಗೆ ಸಂಬಂಧಿಸಿದ ಏಳು ಲೇಖನಗಳಿವೆ. 'ಏಕಭಾಷಿಕ ನಿಘಂಟು ರಚನೆ' ಎನ್ನುವ ಮೊದಲನೇ ಲೇಖನವನ್ನು ವಿಲ್ಯಂ ಮಾಡ್ತರವರು ಬರೆದಿದ್ದು, ನಿಘಂಟು ರಚನಾ ವಿಧಾನಗಳಾದ ಕ್ಷೇತ್ರಕಾರ್ಯ, ನಿಘಂಟಿಮಗಳ ಆಯ್ಕೆ, ನಿಘಂಟಿಮಗಳ ರಚನೆ, ನಿಘಂಟಿಮದ ವ್ಯಾಖ್ಯೆ, ನಿಘಂಟಿಮದ ಸಮಾನಾರ್ಥಕ ರೂಪಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಬಿ.ವಿ.ಮಹೀದಾಸ 'ಕನ್ನಡದಲ್ಲಿ ನಿಘಂಟುಗಳು' ಎನ್ನುವ ಲೇಖನದಲ್ಲಿ ಕನ್ನಡ ಭಾಷೆಯಲ್ಲಿರುವ ಅತಿ ಸಂಕ್ಷಿಪ್ತ ಏಕಭಾಷಾ ನಿಘಂಟುಗಳು, ದ್ವಿಭಾಷಾ ನಿಘಂಟುಗಳು, ವಿಸ್ತೃತ– ಕನ್ನಡ–ಕನ್ನಡ ಕೋಶಗಳು ಮತ್ತು ಇತರ ಬೆಳವಣಿಗೆಗಳ ಕುರಿತು ವಿವರಿಸಿದ್ದಾರೆ.

ಪಾದೇಕಲ್ಲು ವಿಷ್ಣುಭಟ್ಟರವರು 'ತುಳುವಿನಲ್ಲಿ ನಿಘಂಟುಕಾರ್ಯ' ಎನ್ನುವ ಲೇಖನದಲ್ಲಿ ದ್ರಾವಿಡ ಭಾಷೆಗಳಲ್ಲಿ ಒಂದಾದ ಲಿಪಿರಹಿತ ಭಾಷೆಯಾದ ತುಳುವಿನಲ್ಲಿ ನಡೆದ ಕೋಶರಚನೆಯ ಕಾರ್ಯವನ್ನು ಕುರಿತು ವಿವರಿಸಿದ್ದಾರೆ. 'ಸಂಸ್ಕೃತ ಕೋಶಶಾಸ್ತ್ರಕ್ಕೆ ಕರ್ನಾಟಕದ ಕೊಡುಗೆ' ಎನ್ನುವ ಲೇಖನವನ್ನು ಸಿ. ಪಾಂಡುರಂಗ ಭಟ್ಟ ಎನ್ನುವ ವಿದ್ವಾಂಸರು ಬರೆದಿದ್ದಾರೆ. ಈ ಲೇಖನದಲ್ಲಿ ಕರ್ನಾಟಕದ ನಿಘಂಟುಕಾರರು ತಮ್ಮ ನಿಘಂಟುಗಳು, ಟೀಕುಗಳ ಮೂಲಕ ಸಂಸ್ಕೃತ ನಿಘಂಟು ಕ್ಷೇತ್ರಕ್ಕೆ ನೀಡಿದ ಕಾಣಿಕೆಯನ್ನು ವಿವರಿಸಲಾಗಿದೆ. ಇತರ ದ್ರಾವಿಡ ಭಾಷೆಗಳಾದ ತಮಿಳು, ತೆಲುಗು, ಮಲಯಾಳಂಗಳಲ್ಲಿ ನಡೆದ ನಿಘಂಟು ರಚನೆಯ ಕಾರ್ಯವನ್ನು ಉಳಿದ ಮೂರು ಲೇಖನಗಳಲ್ಲಿ ವಿವರಿಸಲಾಗಿದೆ.

ಮೈಸೂರಿನ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ಪ್ರಕಟಿಸಿದ ಕೆ.ಎನ್.ಗಂಗಾನಾಯಕ್ ಅವರು ಸಂಪಾದಿಸಿದ 'ಕನ್ನಡದಲ್ಲಿ ಅನ್ಯಭಾಷಾ ಪದ ನಿಷ್ಪತ್ತಿ ಕೋಶ' ಸಂಪುಟ – ೧ (ಅ–ನಾ) ಮತ್ತು ಸಂಪುಟ – ೨ (ನಾ–ಜ್ಞ) (೨೦೧೧) ಈ ಎರಡು ಸಂಪುಟಗಳು ಅನ್ಯಭಾಷಾ ಪದನಿಷ್ಪತ್ತಿ ಕೋಶದ ಮಾಹಿತಿಯನ್ನು ಒಳಗೊಂಡಿದೆ. ಅನ್ಯಭಾಷಾ ಪದನಿಷ್ಪತ್ತಿ ಕೋಶದ ಮಾಹಿತಿಯನ್ನು ಒಳಗೊಂಡಿದೆ. ಅನ್ಯಭಾಷಾ ಸನ್ನಿವೇಶದಲ್ಲಿನ ಭಾಷಾಸ್ವೀಕಾರ, ಪದಹೊಂದಾಣಿಕೆ, ಒಪ್ಪಿತ ಪದಾವಳಿಯ ಸಮರ್ಪಕತೆ, ಸಮನ್ವಯ, ಪದಸಾದೃಶ್ಯ ಸೃಷ್ಟಿ ಇನ್ನಿತರ ಸಹಜ ಭಾಷಿಕ ಪ್ರಕ್ರಿಯೆಗಳನ್ನು ಇವು

ತಿಳಿಸುತ್ತವೆ. ಕನ್ನಡ ಭಾಷಾ ವಿಜ್ಞಾನದ ಪ್ರಮುಖ ಶಾಖೆಯಾಗಿರುವ ನಿಘಂಟು ರಚನಾ ವಿಜ್ಞಾನವು ಶಿಸ್ತುಬದ್ಧವಾಗಿ ಬೆಳೆಯುತ್ತಿರುವ ಈ ಸಂದರ್ಭದಲ್ಲಿ ಕೋಶಗಳ ರಚನೆಯಾಗಬೇಕಾದ ಅನಿವಾರ್ಯತೆಯನ್ನು ತಿಳಿಸುತ್ತವೆ. ಕೋಶ ವರ್ಗೀಕರಣ, ರಚನಾ ತಂತ್ರ ಹಾಗೂ ವಿಧಾನದ ಸವಿವರ ಮಾಹಿತಿಯನ್ನು ನೀಡುತ್ತಾ ಪದಗಳ ವ್ಯುತ್ಪತ್ತಿ, ಬೆಳವಣಿಗೆ, ಪ್ರಾಯೋಗಿಕ ಅಸ್ತಿತ್ವವನ್ನು ಪರಿಗಣಿಸಿಯೇ ಪದಗಳ ಉಲ್ಲೇಖ ನೀಡಿರುವ ಬಗ್ಗೆ ಮಾಹಿತಿ ನೀಡುತ್ತದೆ. ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಸಂವಹನದ ಪರಸ್ಪರ ಸಂಬಂಧವೇ ಭಾಷೆಯ ಪದಭಂಡಾರದ ಉತ್ಪಾದಕತೆಯ ಮೂಲ ಎನ್ನುವ ತಿಳಿವಳಿಕೆ ನೀಡುತ್ತದೆ.

ಈ ಸಂಪುಟಗಳ ಕೋಶ ಸಂಯೋಜನಾ ವಿನ್ಯಾಸ, ಪ್ರಕೃತ ಕೋಶ ನಿರ್ಮಾಣದ ಹಿನ್ನೆಲೆ ಮತ್ತು ಸ್ವರೂಪ, ಕೋಶ ಸಿದ್ಧತಾ ಪರಿಕ್ರಮ ಮತ್ತು ಪರಿಶೀಲನೆ ಕೋಶದಲ್ಲಿನ ಅಕ್ಷರ ವಿನ್ಯಾಸ ಮತ್ತು ಸ್ವರೂಪ ವಿವರ, ಪ್ರಸ್ತುತ ಕೋಶ ತಯಾರಿ ಮತ್ತು ಓದಿನಲ್ಲಿ ಸಂಕ್ಷಿಪ್ತ ಸಂಕೇತ ಮತ್ತು ಲೇಖನ ಚಿಹ್ನೆಗಳ ತಾಂತ್ರಿಕತೆ, ಬರವಣಿಗೆಯ ಉಚ್ಚರಣಾ ವಿರಾಮ ಚಿಹ್ನೆಗಳು, ಬರೆವಣಿಗೆಯ ಚಾಕ್ಷುಷ ಚಿಹ್ನೆಗಳು, ಭಾಷಾ ಸಂಕ್ಷಿಪ್ತ ಹಾಗೂ ಭಾಷೆಗಳ ಸೂಚಿ, ವ್ಯಾಕರಣ ಪರಿಕಲ್ಪನಾ ಸಂಕ್ಷಿಪ್ತ ಹಾಗೂ ಪರಿಕಲ್ಪನೆಗಳ ಸೂಚಿ, ಇತರೆ ಪೂರಕ ಪದ ಸಂಕ್ಷಿಪ್ತಗಳ ಸೂಚಿ, ಸಂಕೇತ/ಚಿಹ್ನೆಗಳ ವಿವರಣಾ ಸೂಚಿ, ಲೇಖನಚಿಹ್ನೆಗಳ ವಿವರಣ ಸೂಚಿ ಈ ರೀತಿಯಾಗಿ ಒಂದು ನಿಘಂಟು ರಚನೆಗೆ ಬೇಕಾದ ಮೂಲ ಮಾಹಿತಿಯನ್ನು ನೀಡುವುದರಿಂದ ಸಂಶೋಧನಾ ಕ್ಷೇತ್ರಕ್ಕೆ ಪೂರಕವಾದ ಮಾಹಿತಿಯನ್ನು ಈ ಗ್ರಂಥವು ಒಳಗೊಂಡಿದೆ.

ಭಾಷಾವಿದ್ವಾಂಸರಲ್ಲಿ ಒಬ್ಬರಾದ ಸಂಗಮೇಶ ಸವದತ್ತಿಮಠ ಅವರು ಸಂಪಾದಿಸಿರುವ ಕೃತಿ 'ಕನ್ನಡ ಭಾಷಾವಿಜ್ಞಾನ ನಡೆದು ಬಂದ ದಾರಿ'(೨೦೧೨). ಕನ್ನಡಭಾಷೆಯ ಅಧ್ಯಯನ ನಡೆದುಬಂದ ದಾರಿಯ ಸ್ಥೂಲ ಪರಿಚಯದೊಂದಿಗೆ ೪೦ಕ್ಕೂ ಹೆಚ್ಚು ಭಾಷಾವಿದ್ವಾಂಸರು ಕನ್ನಡ ಭಾಷಾವಿಜ್ಞಾನ ಕ್ಷೇತ್ರಕ್ಕೆ ನೀಡಿದ ಕಾಣಿಕೆಯನ್ನು ಇಲ್ಲಿ ದಾಖಲಿಸಲಾಗಿದೆ. ಈ ಕೃತಿಯಲ್ಲಿ ಮೂರು ಭಾಗಗಳಿದ್ದು, ಮೊದಲ ಭಾಗದಲ್ಲಿ ಕನ್ನಡ ನಾಡು-ನುಡಿ ಬೆಳವಣಿಗೆಗೆ ಸಂಬಂಧಿಸಿದ ಲೇಖನಗಳಿವೆ. ಎರಡನೇ ಭಾಗದಲ್ಲಿ ಆಧುನಿಕ ಭಾಷಾವಿಜ್ಞಾನಿಗಳು ಕನ್ನಡ ಭಾಷಾಧ್ಯಯನ ಕ್ಷೇತ್ರಕ್ಕೆ ಸಲ್ಲಿಸಿದ ಕಾಣಿಕೆಯ ವಿವರಗಳಿವೆ. ಮೂರನೇ ಭಾಗದಲ್ಲಿ ಕೆಲವು ಹೊಸಪುಸ್ತಕ ಸ್ಥೂಲ ಪರಿಚಯವನ್ನು ನೀಡಲಾಗಿದೆ.

ಕನ್ನಡದ ಪ್ರಾಚೀನ ವಾಙ್ಮಯದ ವಿಚಾರಗಳನ್ನು ಸರಳವಾದ ರೀತಿಯಲ್ಲಿ ಓದುಗರಿಗೆ ತಿಳಿಸುವ ಲೇಖಕರಲ್ಲಿ ಕೆ.ಎಸ್.ಮಧುಸೂಧನ್ ಒಬ್ಬರು. ಪ್ರಜಾವಾಣಿ ಪತ್ರಿಕೆಯ ಸಾಪ್ತಾಹಿಕ ಪುರವಣಿಗಾಗಿ ಬರೆಯುತ್ತಿದ್ದ 'ಹಳತು ಹೊನ್ನು' ಎನ್ನುವ ಅಂಕಣ ಬರಹಗಳನ್ನು ಒಟ್ಟುಗೂಡಿಸಿ ಪ್ರಕಟಿಸಿದ ಕೃತಿಯೇ 'ಹಳತು ಹೊನ್ನು'. ೨೦೧೩ರಲ್ಲಿ ಬೆಂಗಳೂರಿನ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಈ ಪುಸ್ತಕ ವಿವಿಧ ರೀತಿಯ ಶಬ್ದಕೋಶಗಳಿಗೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡಿದೆ.

William Reeve ಅವರ 'A Dictionary, Carnataka and English' (೧೮೩೨) ವಿಲಿಯಂ ರೀವ್ ಅವರ ಕನ್ನಡ – ಇಂಗ್ಲಿಶ್ ನಿಘಂಟು ಎನ್ನುವುದು ಮೊದಲ ಲೇಖನವಾಗಿದ್ದು, ಈ ನಿಘಂಟಿನ ಮಾಹಿತಿ ನೀಡುತ್ತಾ, ವಿಲಿಯಂ ರೀವ್ ಅವರನ್ನು ಆಧುನಿಕ ಕನ್ನಡ ನಿಘಂಟುಗಳ ಜನಕ ಎಂದು ಕರೆದಿದ್ದಾರೆ. ಈ ಕೋಶವು ನಿಘಂಟು ವಿಜ್ಞಾನದ ವಿಧಾನಗಳನ್ನು ಅಳವಡಿಸಿ ರಚಿಸಲಾಗಿರುವ ಕನ್ನಡದ ಮೊದಲ ನಿಘಂಟಾಗಿದ್ದು, ರೀವ್‌ರವರು ಈ ನಿಘಂಟು ರಚನೆಗೆ ಚತುರಾಸ್ಯ ನಿಘಂಟು, ಕಬ್ಬಿಗರ ಕೈಪಿಡಿ, ಶಬ್ದಮಣಿದರ್ಪಣ, ಕರ್ನಾಟಕ ವ್ಯಾಕರಣ, ಶಬ್ದಮಂಜರಿ, ಅಮರಕೋಶ ಮುಂತಾದ ಪ್ರಾಚೀನ ಸಂಸ್ಕೃತ ಹಾಗೂ ಕನ್ನಡ ಕೃತಿಗಳನ್ನು ಬಳಸಿಕೊಂಡಿದ್ದೇನೆಂದು ಸ್ಮರಿಸಿಕೊಳ್ಳುತ್ತಾರೆ. ಒಟ್ಟಾರೆಯಾಗಿ "ಈ ನಿಘಂಟು ಕನ್ನಡ ನಿಘಂಟು ಕ್ಷೇತ್ರಕ್ಕೆ ಅಪಾರವಾದ ಕೊಡುಗೆಯಾಗಿದೆ ಎನ್ನಲು ಅಡ್ಡಿಯೇನಿಲ್ಲ" ಎಂದಿದ್ದಾರೆ.

ಡೇನಿಯಲ್ ಸ್ಯಾಂಡರ್‌ಸನ್ ಅವರ "Dictionary, Canarese and English" (೧೮೫೮) ಲೇಖನವು 'ಹಳತು ಹೊನ್ನು' ಪುಸ್ತಕದ ಎರಡನೇ ಲೇಖನವಾಗಿದ್ದು, ಡೇನಿಯಲ್ ಸ್ಯಾಂಡರ್‌ಸನ್ ಅವರ ನಿಘಂಟಿನ ಪರಿಚಯ ಲೇಖನವಾಗಿದೆ. ರೀವ್‌ನ ನಿಘಂಟಿನ ಪರಿಷ್ಕೃತ ರೂಪ ಇದ್ದಾಗಿದ್ದು, ಡೇನಿಯಲ್ ಸ್ಯಾಂಡರ್‌ಸನ್‌ರವರು ಪ್ರತಿ ಉಲ್ಲೇಖ ಶಬ್ದಕ್ಕೆ ಸಾಮಾನ್ಯವಾಗಿ ನಿಘಂಟಿನಲ್ಲಿ ಬರುವ ೧೦ ವಲಯಗಳನ್ನು ನೀಡಿದ್ದಾರೆ. ಯಾವುದೇ ಭಾಷೆಯ ಸಮಗ್ರ ಅಧ್ಯಯನಕ್ಕೆ ಒಳ್ಳೆಯ ನಿಘಂಟು ಅತ್ಯಾವಶ್ಯಕವಾಗಿದ್ದು, ಆ ಕಾಲದ ಸಂದರ್ಭದಲ್ಲಿ ಹಿರಿದಾದ ಸ್ಥಾನವನ್ನು ಪಡೆದಿದ್ದ ನಿಘಂಟು ಇದಾಗಿದೆ.

ರೆವರೆಂಡ್ ಫ್ರೆಡ್ರಿಕ್ ಜಿಗ್ಲರ್ ಅವರ ಇಂಗ್ಲಿಶ್ ಮತ್ತು ಕನ್ನಡ ಶಾಲಾ ನಿಘಂಟು "An English and Canarese School – Dictionary" (೧೮೭೬). ಈ ಲೇಖನವು ಜಿಗ್ಲರ್‌ನ ಇಂಗ್ಲಿಶ್ ಮತ್ತು ಕನ್ನಡ ಶಾಲಾ ನಿಘಂಟು ಒಂದು ದ್ವಿಭಾಷಿಕ ನಿಘಂಟಾಗಿದ್ದು, ೧೯ನೇ ಶತಮಾನದಲ್ಲಿ ಹೆಸರಿಸಬಹುದಾದ ಇಂಗ್ಲಿಶ್ – ಕನ್ನಡ ನಿಘಂಟುಗಳಲ್ಲಿ ಮಹತ್ವದ್ದಾಗಿದೆ. ಶಾಲಾ ಕಾಲೇಜುಗಳಲ್ಲಿ ಬಹುವಾಗಿ ಉಪಯೋಗದಲ್ಲಿದ್ದ ನಿಘಂಟಾಗಿತ್ತು. ವರ್ಣ, ಪದ, ಅರ್ಥ, ಅರ್ಥದ ಛಾಯೆ, ನಾನಾರ್ಥಗಳಿಗೆ ಸಂಬಂಧಿಸಿದ ವಿವರಗಳನ್ನು ಸೂಕ್ಷ್ಮವಾಗಿ ನೀಡಿರುವ ಜಿಗ್ಲರ್‌ನ ಬಹಳ ಪ್ರಮುಖ ನಿಘಂಟಾಗಿದೆ.

'ಹಳತು ಹೊನ್ನು' ಪುಸ್ತಕದ ನಾಲ್ಕನೇ ಲೇಖನವು ಉಲ್ಲಾಳದ ನರಸಿಂಗರಾವ್ ಅವರ 'ಕಿಸಮ್‌ವಾರ್ ಗ್ಲಾಸರಿ' (೧೮೯೧) ಬಗೆಗೆ ಬರೆದ ಪರಿಚಯ ಲೇಖನವಾಗಿದೆ. ಕಿಸಮವಾರ್ ಈ ಶಬ್ದದ ಮೂಲ 'ಕಿಸಮು' ಎಂದರೆ ಬಗೆ, ಪ್ರಕಾರ, ಭೇದ ಎಂದರ್ಥ. ಈ ಶಬ್ದದ ಮೂಲ 'ಕಿಸ್ಮ್' ಎಂಬ ಅರೇಬಿಕ್ ಶಬ್ದ. 'ಕಿಸಮ್‌ವಾರ್' ಎಂದರೆ ಪ್ರಕಾರಗಳನ್ನು ಅನುಸರಿಸಿ ಮಾಡಿದ ವಿಂಗಡಣೆ ಎಂದರ್ಥ. ವಿವಿಧ ಸಾಮಾಜಿಕ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಬಳಸಬಹುದಾದ ಒಂದು ನಿರ್ದಿಷ್ಟ ಬಳಕೆದಾರರ ದ್ವಿಭಾಷಿಕ ವಿಶಿಷ್ಟ ನಿಘಂಟಾಗಿದ್ದು ಅತ್ಯಂತ ವಿಶಿಷ್ಟವೂ, ವಿರಳವೂ ಅಪರೂಪವಾದ ಬಹುಪಯೋಗಿ ನಿಘಂಟು ಎನ್ನುವ ಕೀರ್ತಿಗೆ ಭಾಜನವಾಗಿದೆ.

ಅಕ್ಷರ, ಪದ ಹಾಗೂ ವಾಕ್ಯಗಳ ನೆಲೆಯಲ್ಲಿ ಭಾಷಾವಿಜ್ಞಾನ, ವ್ಯಾಕರಣ ಮತ್ತು ನಿಘಂಟು – ಈ ಮೂರು ಶಿಸ್ತುಗಳನ್ನು ಗಮನದಲ್ಲಿರಿಸಿಕೊಂಡು ಕನ್ನಡ ಹಾಗೂ ಹಿಂದುಸ್ಥಾನಿ ಭಾಷೆಗಳ ಸೂಕ್ಷ್ಮಗಳನ್ನು ಸಾಮಾನ್ಯ ಜನರಿಗೆ ಸುಲಭವಾಗಿ ಅರ್ಥವಾಗುವಂತೆ ವಿವರಿಸುವ ನಿಘಂಟು ಇದಾಗಿದ್ದು, ವಿವರಣೆಗಳನ್ನು ವ್ಯಾಕರಣ ಹಾಗೂ ನಿಘಂಟುಗಳ ಪ್ರಕ್ರಿಯೆಗಳನ್ನು ಕ್ರಿಯಾತ್ಮಕವಾಗಿ ನಿರೂಪಿಸುವ ಪ್ರಯತ್ನ ಟಿ.ಜಿ.ಮಾಬೆನ್ ಅವರ ಚಿಕ್ಕ ಚೊಕ್ಕ ಕನ್ನಡ ಹಿಂದುಸ್ಥಾನಿ ಭಾಷಾಮಂಜರಿ (೧೯೦೪)ಯಲ್ಲಿದೆ.

ಈ ರೀತಿ ೧೯ನೇ ಶತಮಾನದಲ್ಲಿ ಬಂದ ದ್ವಿಭಾಷಿಕ ನಿಘಂಟುಗಳ ತಲಸ್ಪರ್ಶಿ ಅಧ್ಯಯನ ಮಾಡಿ ಓದುಗರಿಗೆ ಸುಲಭವಾಗಿ ಅರ್ಥವಾಗುವಂತೆ ಬರೆದಿರುವ ಈ ಲೇಖನಗಳಲ್ಲಿ ಕೆ.ಎಸ್.ಮಧುಸೂಧನರವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ರೂಪುಗೊಳ್ಳುವಲ್ಲಿ ಈ ಎಲ್ಲ ನಿಘಂಟುಗಳು ಪ್ರಮುಖವಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಎಸ್. ಕಾರ್ತಿಕ್ ಅವರ 'ಕೆಲವು ಕನ್ನಡ ನಿಘಂಟುಗಳು : ಸಮಸ್ಯೆಗಳು, ಪರಿಹಾರಗಳು' (೨೦೧೪) ಎನ್ನುವ ಕೃತಿಯಲ್ಲಿ ನಿಘಂಟಿಗೆ ಸಂಬಂಧಿಸಿದ ಹದಿಮೂರು ಲೇಖನಗಳಿವೆ. ಇವುಗಳಲ್ಲಿ ಎರಡು ಲೇಖನಗಳು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿಗೆ ಸಂಬಂಧಿಸಿದವುಗಳಾಗಿವೆ. ಮೊದಲ ಲೇಖನದಲ್ಲಿ ಅನಂತಭೋಗೀಶ್ವರ ಶಬ್ದದ ಅರ್ಥ ಮತ್ತು ಪ್ರಯೋಗವನ್ನು ವಿಶ್ಲೇಷಿಸಿದ್ದಾರೆ. ಎರಡನೇ ಲೇಖನದಲ್ಲಿ ನಿಗ್ಗವಣೆ ಮತ್ತು ರಿಗ್ಗವಣೆ ಎಂಬ ಶಬ್ದಗಳ ದಾಖಲಾತಿ, ಅರ್ಥ, ಪ್ರಯೋಗಗಳನ್ನು ನೀಡಿ ಈ ಶಬ್ದ ಬರುವ ಇಡೀ ಪದ್ಯದ ಪರಿಷ್ಕೃತ ಪಾಠವನ್ನು ಸೂಚಿಸಿ ಇದರ ಬಗೆಗೆ ವಿಶ್ಲೇಷಿಸಿದ್ದಾರೆ.

ಮಿಶನರಿಗಳ ನಿಘಂಟು ರಚನೆಯ ನಂತರ ೧೯ ಮತ್ತು ೨೦ನೇ ಶತಮಾನದ ಆರಂಭದ ದಶಕಗಳಲ್ಲಿದ್ದ ದೇಸಿ ವಿದ್ವಾಂಸರು ಸಾಂಪ್ರದಾಯಿಕ ನಿಘಂಟು ರಚನಾ ವಿಧಾನವನ್ನು ಕೈಬಿಟ್ಟು ಶಾಸ್ತ್ರೀಯವಾದ ಅಕಾರಾದಿ ನಿಘಂಟುಗಳನ್ನು ರಚಿಸಿದರು. ಈ ಎಲ್ಲ ನಿಘಂಟುಗಳು 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟು' ರಚನೆಯಾಗುವ ಸಂದರ್ಭದಲ್ಲಿ ಬಳಕೆಯಾಗಿವೆ. ಉದಾಹರಣೆಯಾಗಿ ಗಂಗಾಧರ ಮಡಿವಾಳೇಶ್ವರ ತುರಮುರಿ ಅವರು ಸಿದ್ಧಪಡಿಸಿದ 'ಶಬ್ದಮಂಜರಿ', ಗುರುರಾವ್ ವಿಠಲರಾವ್ ಮೊಹರೆಯವರ 'ಶಬ್ದವ್ಯುತ್ಪತ್ತಿ', ಶಿವರಾಮ ಕಾರಂತರ 'ಸಿರಿಗನ್ನಡ ಅರ್ಥಕೋಶ' ಇತ್ಯಾದಿ. ಈ ಕಾಲದಲ್ಲಿ ಬಂದಂತಹ ನಿಘಂಟುಗಳಲ್ಲಿ ಬಹಳ ಪ್ರಮುಖವಾದುದು ನ್ಯಾಮತಿ ಪಂಡಿತ ಪ್ರಭಣ್ಣನವರ ಕನ್ನಡ–ಕನ್ನಡ ನಿಘಂಟು. ಈ ನಿಘಂಟು ೧೯೨೮ರ ಹೊತ್ತಿಗಾಗಲೇ ರಚನೆಯಾಗಿದ್ದರೂ, ಪ್ರಕಟವಾಗಿರಲಿಲ್ಲ. ಹೊನ್ನಾಳಿಯ ಹಿರೇಕಲ್ಮಠದಿಂದ ೨೦೧೪ರಲ್ಲಿ ಪ್ರಕಟವಾಗಿದೆ.

ಈ ನಿಘಂಟಿಗೆ ಶುಭಸಂದೇಶ ಬರೆದ ಜಿ. ವೆಂಕಟಸುಬ್ಬಯ್ಯನವರು, ನಿಘಂಟು ರಚನೆಯ ಮಹತ್ವ ಮತ್ತು ಶ್ರಮದ ಬಗ್ಗೆ "ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಗೆ ೧೯೨೮ರಲ್ಲಿ ರಚಿತವಾದ ಪಂಡಿತ ಪ್ರಭಣ್ಣನವರ ನಿಘಂಟಿನ ಪ್ರತಿಯೊಂದು ಶಬ್ದವನ್ನು ಉಪಯೋಗಿಸಿಕೊಳ್ಳಲಾಗಿದೆ. ಒಂದು

ಶಬ್ದಕ್ಕೆ ವಿಶಿಷ್ಟವಾದ ಅರ್ಥವನ್ನು ಪ್ರಭಣ್ಣನವರು ನೀಡಿದ್ದಾರೆ. ಅವರ ಹೆಸರು ಹಾಕಿ ಆ ಅರ್ಥವನ್ನು ದಾಖಲಿಸಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ರಚನೆಯ ಸಂದರ್ಭದಲ್ಲಿ ಬಳಸಿಕೊಂಡ ನಿಘಂಟುಗಳಲ್ಲಿ ಪಂಡಿತ ಪ್ರಭಣ್ಣನವರ ನಿಘಂಟು ಪ್ರಮುಖವಾದುದು ಎಂದು ಇದರ ಮಹತ್ವವನ್ನು ಹೇಳಿದ್ದಾರೆ.

ಈ ನಿಘಂಟಿಗೆ ಮುನ್ನುಡಿ ಬರೆದಿರುವ ಭಾಷಾ ವಿದ್ವಾಂಸರಾದ ಕೆ.ವಿ.ನಾರಾಯಣರವರು ಕನ್ನಡದ ಹಳೆಯ ರಚನೆಗಳನ್ನು ಕಲಿಯುತ್ತಿರುವವರಿಗೆ ನೆರವಾಗಬೇಕು ಎನ್ನುವುದು ಪ್ರಭಣ್ಣನವರ ಪದಕೋಶದ ಮೂಲಗುರಿಯಾಗಿದ್ದು, ಪದಕೋಶದ ನಮೂದುಗಳನ್ನು ಕಂಡುಕೊಳ್ಳಲು ಅವರು ನೋಡಿರುವ ಆಕರಗಳು, ಓದಿನ ವಿಸ್ತಾರ, ಆಯ್ಕೆ ಮಾಡಿಕೊಂಡ ನಮೂದುಗಳು, ಈ ರೀತಿ ಪ್ರಭಣ್ಣನವರು ಈ ನಿಘಂಟು ರಚನೆಗೆ ಮಾಡಿರುವ ದಣಿವಿಲ್ಲದ ದುಡಿಮೆಗಾರರು ಎಂದು ಅಭಿಪ್ರಾಯ ಪಡುತ್ತ ನಿಘಂಟು ಬಳಕೆದಾರರಿಗೆ ಇದರ ಮಹತ್ವವನ್ನು ತಿಳಿಸಿದ್ದಾರೆ.

೨೦೧೪ರಲ್ಲಿ ಪ್ರಕಟವಾಗಿರುವ 'ನ್ಯಾಮತಿ ಪಂಡಿತ ಪ್ರಭಣ್ಣನವರ ನಿಘಂಟು' ಕೃತಿಯ ಪ್ರಧಾನ ಸಂಪಾದಕರು ಬಿದರೆಹಳ್ಳಿ ನರಸಿಂಹಮೂರ್ತಿಯವರು. ಸುಮಾರು ಇಪ್ಪತ್ತು ಪುಟಗಳಷ್ಟು ಪ್ರಸ್ತಾವನೆ ಬರೆದಿದ್ದು, ನಿಘಂಟು ಪದದ ಅರ್ಥ, ವ್ಯಾಪ್ತಿ, ನ್ಯಾಮತಿಯ ಚಾರಿತ್ರಿಕ ಹಿನ್ನೆಲೆ ಮತ್ತು ಭೌಗೋಳಿಕ ಪರಿಸರ, ಪಂಡಿತ ಪ್ರಭಣ್ಣನವರ (೧೮೭೦-೧೯೨೭) ಜೀವನ ವಿವರ, ಪ್ರಭಣ್ಣನವರ ನಿಘಂಟಿನ ಮಿತಿ ಮತ್ತು ಮಹತ್ವ, ಈ ನಿಘಂಟಿನ ಹಸ್ತಪ್ರತಿಯ ಹುಡುಕಾಟ, ಕನ್ನಡ ಸಾಹಿತ್ಯ ಪರಿಷತ್ತಿನ ಸಹಕಾರ, ನಿಘಂಟು ಪ್ರಕಟಣೆಗೆ ಮಹಾಸ್ವಾಮಿಗಳ ದೃಢಸಂಕಲ್ಪ, ಪಂಡಿತ ಪ್ರಭಣ್ಣನವರ ಈ ನಿಘಂಟು ಕನ್ನಡ ಭಾಷೆಗೆ, ಕನ್ನಡ ಕಾವ್ಯ ಪ್ರೇಮಿಗಳಿಗೆ ಅಪೂರ್ವ ಕೊಡುಗೆ, ಈ ನಿಘಂಟನ್ನು ಸಂಪಾದಿಸುವಾಗ ಎದುರಿಸಿದ ಸಮಸ್ಯೆ, ಸಂದಿಗ್ಧತೆ, ಅನುಮಾನ ಹಾಗೂ ಸ್ಪಷ್ಟೀಕರಣ, ಈ ನಿಘಂಟು ಪರಿಷ್ಕಾರಗೊಳಿಸುವಲ್ಲಿ ಬಳಸಿಕೊಂಡ ಕೋಶಗಳು ಮತ್ತು ಆಕರ ಗ್ರಂಥಗಳು, ಈ ನಿಘಂಟು ಹೊರಬರುವಲ್ಲಿ ಸಹಕರಿಸಿದವರಿಗೆ ಕೃತಜ್ಞತೆಗಳು ಮೊದಲಾದ ಅಂಶಗಳನ್ನು ವಿಸ್ತೃತವಾಗಿ ವಿವರಿಸಿದ್ದಾರೆ. ನಿಘಂಟು ರಚನೆಗೆ ಪಂಡಿತ ಪ್ರಭಣ್ಣನವರು ಬಳಸಿದ ಮಹಾಕಾವ್ಯ, ಚಂಪೂಕಾವ್ಯ, ಗದ್ಯಕೃತಿ, ಶಾಸನ, ಛಂದಸ್ಸು, ಶಾಸ್ತ್ರಗ್ರಂಥ, ವ್ಯಾಕರಣಗ್ರಂಥ, ನಿಘಂಟುಗಳು, ಪಠ್ಯಪುಸ್ತಕಗಳ ಸಂಕೇತಾಕ್ಷರಗಳ ಸೂಚಿಯನ್ನು ವಿವರಣೆಯಲ್ಲಿ ಕಾವ್ಯ ಶೀರ್ಷಿಕೆ, ಕವಿ, ಕಾಲವನ್ನು ಸೂಚಿಸಲಾಗಿದೆ.

ಸುಮಾರು ೫೪೭ ಪುಟಗಳ ವಿಸ್ತಾರವನ್ನು ಹೊಂದಿರುವ ಈ ನಿಘಂಟು "ಪ್ರಭಣ್ಣನವರ ಪಾಂಡಿತ್ಯದ ಪ್ರತೀಕವಾಗಿದ್ದು, ಅವರ ಪರಿಶ್ರಮದ ಹೆಗ್ಗುರುತಾಗಿದೆ. ಬಹುಶ್ರುತ ವಿದ್ವಾಂಸರಾದ ಪ್ರಭಣ್ಣನವರು ತಮ್ಮ ಅಗಾಧವಾದ ಆಸಕ್ತಿಯ ಮೂಲಕ ಕಾವ್ಯ ಪದಗಳಿಗೆ ವಿಧವಿಧವಾದ ಅರ್ಥಗಳು, ಅರ್ಥಛಾಯೆಗಳು, ಪ್ರಯೋಗಗಳು, ಪ್ರಮಾಣಗಳನ್ನು ದಾಖಲಿಸುವ ಮೂಲಕ ಕನ್ನಡ ನಿಘಂಟು ಕ್ಷೇತ್ರಕ್ಕೆ ಒಂದು ಉಪಯುಕ್ತ ನಿಘಂಟನ್ನು ನೀಡಿದ್ದಾರೆ.[೧೧] ಈ ನಿಘಂಟಿನ ಮೂಲಕ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ರಚನಾ ಕಾರ್ಯದಲ್ಲಿ ಸರಿಯಾದ ರಚನಾಮಾರ್ಗವನ್ನು ತೋರಿಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಸಂಪಾದಕರಾಗಿ ಕಾರ್ಯ ನಿರ್ವಹಿಸಿದವರಲ್ಲಿ ತೀ.ನಂ.ಶ್ರೀ. ಒಬ್ಬರು. ಇವರ 'ಸಮಾಲೋಕನ' (೨೦೧೫) ಗ್ರಂಥದಲ್ಲಿ ಕನ್ನಡ ನಿಘಂಟು ರಚನೆಗೆ ಮಾದರಿಯಾದ ಇಂಗ್ಲಿಶ್‌ನ 'ಆಕ್ಸ್‌ಫರ್ಡ್ ಇಂಗ್ಲಿಶ್ ಡಿಕ್ಷನರಿ' ಎನ್ನುವ ಲೇಖನವನ್ನು ಬರೆದಿದ್ದಾರೆ. ಇದರಲ್ಲಿ ಆಕ್ಸ್‌ಫರ್ಡ್ ಇಂಗ್ಲಿಶ್ ಡಿಕ್ಷನರಿಯ ಬೆಳವಣಿಗೆಯ ಹಂತಗಳು, ರಚನಾ ಕ್ರಮ, ಸ್ವರೂಪ, ಮಹತ್ವ ಮೊದಲಾದ ಅಂಶಗಳನ್ನು ವಿವರಿಸಿದ್ದಾರೆ.

ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ದೇವರಕೊಂಡಾರೆಡ್ಡಿಯವರ ಸಂಪಾದಕತ್ವದಲ್ಲಿ ೨೦೧೫ರಲ್ಲಿ ಪ್ರಕಟಿಸಿದ ಕೃತಿ 'ಶಾಸ್ತ್ರ ಸಾಹಿತ್ಯ' (ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ – ೧೨) ನಿಘಂಟುಗಳ ಕುರಿತಾದ ಮಾಹಿತಿಯನ್ನು ಒಳಗೊಂಡ ಕೃತಿಯಾಗಿದೆ. ಇದರಲ್ಲಿ ಒಟ್ಟು ಇಪ್ಪತ್ತೆರಡು ಲೇಖನಗಳಿದ್ದು, ನಾಲ್ಕರಿಂದ ಒಂಬತ್ತರವರೆಗಿನ ಲೇಖನಗಳು ನಿಘಂಟುವಿಗೆ ಸಂಬಂಧಿಸಿದವುಗಳಾಗಿವೆ. ಕೆ.ಎಸ್. ಮಧುಸೂಧನ ಅವರು ಬರೆದ '೧೮೩೨ರಿಂದ ೧೯೦೦ರವರೆಗಿನ ಕನ್ನಡ ನಿಘಂಟುಗಳು' ಎನ್ನುವ ಲೇಖನವು ಈ ಮೇಲಿನ ಅವಧಿಯಲ್ಲಿ ರಚಿತವಾದ ನಿಘಂಟುಗಳ ಸ್ಥೂಲವಾದ ವಿವರಣೆಯನ್ನು ನೀಡುತ್ತದೆ.

'ಕನ್ನಡ ಅರ್ವಾಚೀನ ನಿಘಂಟುಗಳು' ಎನ್ನುವ ಲೇಖನದಲ್ಲಿ ಸುಂಕಂ ಗೋವರ್ಧನರವರು ಹೊಸಗನ್ನಡ ಸಂದರ್ಭದಲ್ಲಿ ಬಂದ ಶ್ರೀ ಚಾಮುಂಡಾ ಲಘು ನಿಘಂಟು, ನಿಘಂಟುಕಾರರಿಗೆ ಸವಾಲು ಕುಮಾರವ್ಯಾಸ, ಪಂಪನ ನುಡಿಗಣಿ, ಮಹಾಕವಿಗಳ ಹರಿಹರನ ಕೃತಿಗಳ ಪದಕೋಶ, ಗೋವಿಂದ ಪೈ ಕೋಶಗಳು, ದ.ರಾ.ಬೇಂದ್ರೆ ಸಮಗ್ರ ಕಾವ್ಯ ನಿಘಂಟು, ಶಬ್ದಮಾರ್ಗ, ಪಾರಿಭಾಷಿಕ ಶಬ್ದಕೋಶ, ಮಾಧ್ವ ನಿಘಂಟು, ಸಾಂಸ್ಕೃತಿಕ ಪದಕೋಶಗಳು, ಪ್ರಕೋಶಗಳು ಹೀಗೆ ಆಧುನಿಕ ಕಾಲದಲ್ಲಿ ರಚಿತವಾದ ನಿಘಂಟು ವೈವಿಧ್ಯತೆಗಳ ಮಾಹಿತಿಯನ್ನು ವಿವರಿಸಿದ್ದಾರೆ. ಈ ಗ್ರಂಥದ ಆರನೆಯ ಲೇಖನವನ್ನು ಎಸ್.ಎಸ್.ಅಂಗಡಿಯವರು ಬರೆದಿದ್ದು, ಇಲ್ಲಿ ಕನ್ನಡದಲ್ಲಿ ಬಂದ ಲಕ್ಷಣಶಾಸ್ತ್ರ ನಿಘಂಟುಗಳ ಸಮೀಕ್ಷೆಯನ್ನು ಮಾಡಿದ್ದಾರೆ. ನಿಘಂಟುಶಾಸ್ತ್ರದ ಬೆಳವಣಿಗೆಗೆ ಕಾರಣವಾದ ಲಕ್ಷಣಶಾಸ್ತ್ರ ನಿಘಂಟುಗಳ ಬಗೆಗಿನ ಸಂಕ್ಷಿಪ್ತ ಮಾಹಿತಿಯನ್ನು ನೀಡಿದ್ದಾರೆ. ನಿಘಂಟಿಮಗಳ ಸ್ವರೂಪವನ್ನು ಗಮನಿಸಿದಾಗ ಕನ್ನಡ ಭಾಷೆಯಲ್ಲಿ ವೈವಿಧ್ಯಮಯವಾದ ನಿಘಂಟುಗಳು ರಚನೆಯಾಗಿದ್ದು ಕನ್ನಡ ಸಾಹಿತ್ಯ ಸುಮಾರು ಎರಡು ಸಾವಿರ ವರ್ಷಗಳ ದೀರ್ಘ ಇತಿಹಾಸವನ್ನು ಹೊಂದಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಗಮನಿಸಿದಾಗ ಶಾಸನಗಳು, ಚಂಪೂ, ವಚನ, ರಗಳೆ, ಷಟ್ಪದಿ, ಕೀರ್ತನೆ ಮೊದಲಾದ ಸಾಹಿತ್ಯ ಪ್ರಕಾರಗಳಿದ್ದು ಆಯಾ ಕಾಲದ ಸಾಹಿತ್ಯದಲ್ಲಿ ಅಡಕವಾದ ವಿಷಯಗಳನ್ನು ಅರ್ಥ ಮಾಡಿಕೊಳ್ಳಲು ನಿಘಂಟುಗಳು ಸಹಾಯಕವಾಗಿವೆ. ಮುಖ್ಯವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಆಧರಿಸಿ ರಚಿತವಾದ 'ಸಾಹಿತ್ಯಿಕ ನಿಘಂಟುಗಳು' ಎನ್ನುವ ಎಂಟನೆಯ ಲೇಖನವನ್ನು ಎಸ್. ಗಂಗಾಂಬಿಕೆಯವರು ಬರೆದಿದ್ದು, ಇದರಲ್ಲಿ ಜೀವನೋಪಯೋಗಿಯಾದ, ಆನಂದಮಯವಾದ ಸಾಹಿತ್ಯರಾಶಿಯನ್ನು ವಿಭಿನ್ನ ನೆಲೆಗಳಲ್ಲಿ ಅರ್ಥ ಮಾಡಿಕೊಳ್ಳಲು ಸಹಾಯಕವಾಗುವ

ನಿಘಂಟುಗಳ ಪರಿಚಯವನ್ನು ಮಾಡಿದ್ದಾರೆ. ಕಾವ್ಯಪದಮಂಜರಿ, ಹಳಗನ್ನಡ ನಿಘಂಟು, ಹಳಗನ್ನಡ ಪದಸಂಪದ, ಚಂಪೂ ನುಡಿಗನ್ನಡಿ, ಶಿವಾನುಭವ ಶಬ್ದಕೋಶ, ವಚನ ಪರಿಭಾಷಾ ಕೋಶ, ವೀರಶೈವ ಪಾರಿಭಾಷಿಕ ಪದಕೋಶ, ವಚನ ನಿಘಂಟು, ಕಾವ್ಯಾರ್ಥ ಪದಕೋಶ, ವಿಮರ್ಶೆಯ ಪರಿಭಾಷೆ, ಭಾರತೀಯ ಕಾವ್ಯ ಪರಿಭಾಷೆ, ಅಲಂಕಾರ ಪದಕೋಶ, ಕನ್ನಡ ಛಂದೋ ನಿಘಂಟು, ಗ್ರಂಥ ಸಂಪಾದನ ಪರಿಭಾಷಾಕೋಶ, ರಗಳೆಗಳ ನಾಮಕೋಶ ಮೊದಲಾದ ಸಾಹಿತ್ಯಿಕ ಪ್ರಕಾರಗಳ ನಿಘಂಟುಗಳ ಬಗೆಗಿನ ಮಾಹಿತಿಯನ್ನು ನೀಡಿದ್ದಾರೆ.

ಕನ್ನಡ ನಿಘಂಟು ಪರಂಪರೆ ವೈವಿಧ್ಯಮಯವಾಗಿದ್ದು, ಆಧುನಿಕ ಕಾಲದಲ್ಲಿ ಪ್ರಕಟವಾದ 'ವಿಶಿಷ್ಟ ಪದಕೋಶಗಳು' ಎನ್ನುವ ಲೇಖನದಲ್ಲಿ ಸುಂಕಂ ಗೋವರ್ಧನರವರು ವಿವರಿಸಿದ್ದಾರೆ. ಕನ್ನಡ ಸಮಾನಾರ್ಥಕ ಕೋಶ, ಪದಾರ್ಥ ಚಿಂತಾಮಣಿ, ಇಗೋ ಕನ್ನಡ – ಸಾಮಾಜಿಕ ನಿಘಂಟು, ದಿನದಿನ, ಎರವಲು ಪದಕೋಶ, ಪದಸಂಚಯ ಮೊದಲಾದ ವಿಶಿಷ್ಟ ನಿಘಂಟುಗಳ ಕಿರುಮಾಹಿತಿಯನ್ನು ನೀಡಿದ್ದಾರೆ. ನಳಿನಿ ವೆಂಕಟೇಶ್‌ರವರು ಕನ್ನಡದಲ್ಲಿ ಈವರೆಗೆ ಕೈಗೊಂಡ ಶಬ್ದಗಳಿಗೆ ಸಂಬಂಧಿಸಿದ ಸಂಶೋಧನೆಗಳನ್ನು ಕರ್ನಾಟಕದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ವಿಶ್ಲೇಷಿಸಿದ್ದಾರೆ. ಪ್ರಬುದ್ಧ ಕರ್ಣಾಟಕ ಪತ್ರಿಕೆಯಲ್ಲಿ ಬಂದ 'ಕಮ್ಮಟದ ಕಿಡಿಗಳು' ಅಂಕಣದಲ್ಲಿ ಬಂದ ಶಬ್ದಾರ್ಥ ಚರ್ಚೆಯ ಕನ್ನಡ ಪದಸಂಪತ್ತು ಬೆಳೆಯಲು ಕಾರಣವಾಗಿದೆ ಎನ್ನುವ ಅಂಶವನ್ನು ತಿಳಿಸುತ್ತಾರೆ. ಇದಲ್ಲದೆ ಬಿ.ಎಂ.ಶ್ರೀ. ಪ್ರತಿಷ್ಠಾನದ ವತಿಯಿಂದ ಪ್ರಕಟವಾಗುತ್ತಿದ್ದ 'ಕರ್ನಾಟಕ ಲೋಚನ' ಎನ್ನುವ ಪತ್ರಿಕೆಯಲ್ಲಿ ಬಂದಿರುವ ಶಬ್ದಾರ್ಥ ಚಿಂತನೆಗಳ ಮಾಹಿತಿಯನ್ನು ನೀಡಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸುವ 'ಸಾಧನೆ' ಪತ್ರಿಕೆಯಲ್ಲಿ ಬಂದ ಶಬ್ದಚರ್ಚೆಯನ್ನು ನೀಡಿದ್ದಾರೆ. ಪದಾರ್ಥ ಚಿಂತಾಮಣಿ, ಹಂಪಿ, ಕನ್ನಡ ವಿಶ್ವವಿದ್ಯಾಲಯದ 'ದಿನದಿನ' ಅಂಕಣದ ಶಬ್ದಚರ್ಚೆಯನ್ನು ನೀಡಿದ್ದಾರೆ.

ಹೀಗೆ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿಗೆ ಹಾಗೂ ನಿಘಂಟುಶಾಸ್ತ್ರಕ್ಕೆ ಸಂಬಂಧಿಸಿದಂತೆ ಪ್ರಕಟವಾದ ಪುಸ್ತಕಗಳ ಸಮೀಕ್ಷೆಯನ್ನು ಮಾಡಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಹಳಗನ್ನಡ ಸಾಹಿತ್ಯದ ಪದಗಳನ್ನು ಹೊಂದಿದ್ದರೂ ಇಂದು ಹಳಗನ್ನಡ ನಿಘಂಟುಗಳು ರಚನೆಯಾಗುತ್ತವೆ ಕಾರಣವೇನು? ಅನೇಕ ವೃತ್ತಿ ಪದಕೋಶಗಳು, ಇಗೋ ಕನ್ನಡದಂತಹ ನಿಘಂಟುಗಳು ಬರುತ್ತಿವೆ. ಅಲ್ಲದೇ ಕೆಲವು ಪದಗಳಿಗೆ ವಿವರಣಾತ್ಮಕ ಅರ್ಥ ಬರುತ್ತಿವೆ ಏಕೆ? ಎನ್ನುವುದನ್ನು ಗಮನಿಸಿದಾಗ ನಿಘಂಟುಗಳು ಬಳಕೆಯ ಪದಗಳಿಗೆ ಅರ್ಥವನ್ನು ನೀಡುತ್ತವೆ. ವಿಶೇಷ ಸಂದರ್ಭದ ಪದಪ್ರಯೋಗಗಳಿಗೆ ಬೇರೆಯೇ ಆದ ಪದಕೋಶಗಳು ಆವಶ್ಯಕ. ಉದಾ. ಗೋವಿಂದ ಪೈ ಪದಪ್ರಯೋಗ ಕೋಶ, ಮುದ್ದಣ ಪದಪ್ರಯೋಗ ಕೋಶ ಮೊದಲಾದ ನಿಘಂಟುಗಳನ್ನು ಗಮನಿಸಿ ಈ ನಿಘಂಟಿನಲ್ಲಾಗಬೇಕಾದ ಭಿನ್ನತೆಯನ್ನು ಗುರುತಿಸಲಾಗುತ್ತದೆ.

## ಕೊನೆ ಟಿಪ್ಪಣಿಗಳು

1. Berg C.C.-Zgusto, 1971, (Zgusto Ladislav, Manual of Lexicography, The Hague, Mouton and Company-1971), page no.197

೨. ಕನ್ನಡ ನಿಘಂಟು ರಚನಾ ಕಲೆ- ರಮೇಶಚಂದ್ರ ದತ್ತ, ೧೯೯೭, (ಅಪ್ರಕಟಿತ ಪ್ರಬಂಧ), ಪು.೪

೩ ವೆಂಕಟಸುಬ್ಬಯ್ಯ.ಜಿ., ೨೦೦೨, ಕನ್ನಡ ನಿಘಂಟು ಪರಿವಾರ, ಪು.೮

೪ ಮಯಿದಾಸ್ ಬಿ.ವಿ, ೧೯೯೫, ಕನ್ನಡದಲ್ಲಿ ನಿಘಂಟುಗಳು, 'ಸಾರ್ಥಕ', ಎಂ.ಮರಿಯಪ್ಪ ಭಟ್ಟ ಸಂಸ್ಮರಣ ಗ್ರಂಥ, ಪು.೫೧೨

೫ ಸೀತಾರಾಮಯ್ಯ.ಎಂ.ವಿ., ೨೦೧೦, ಶಾಸ್ತ್ರಸಾಹಿತ್ಯ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ-೩ ಪು.೧೩೯

೬ ರಾಜಪುರೋಹಿತ.ಬಿ.ಬಿ, ೨೦೧೦, ದ.ರಾ.ಬೇಂದ್ರೆ ಸಮಗ್ರ ಕಾವ್ಯ ನಿಘಂಟು, ಪು.೨೩

೭ ಅಂಗಡಿ ಎಸ್.ಎಸ್., ೨೦೦೫-೦೬, ಕನ್ನಡ ವ್ಯಾಕರಣ ಪರಿಭಾಷೆ, ಪು.೫೩

೮. ಅಂಗಡಿ ಎಸ್.ಎಸ್., ೨೦೦೩, ಕನ್ನಡ ನಿಘಂಟು ರಚನೆ, ಪು.೨

೯. ಅದೇ, ಪು.೭

೧೦. ಅದೇ, ಪು.೭-೧೦

೧೧. ನರಸಿಂಹಾಚಾರ್ ಡಿ.ಎಲ್. ೧೯೭೧, 'ಕನ್ನಡಕ್ಕೆ ಹೊಸ ನಿಘಂಟು', ಪೀಠಿಕೆಗಳು-ಲೇಖನಗಳು, ಪು.೮೩೧

೧೨. ಬಿದರಹಳ್ಳಿ ನರಸಿಂಹಮೂರ್ತಿ, ೨೦೧೪, ನ್ಯಾಮತಿ ಪಂಡಿತ ಪ್ರಭಣ್ಣನವರ ಕನ್ನಡ-ಕನ್ನಡ ನಿಘಂಟು ಪು.XVII (ಪ್ರಸ್ತಾವನೆ)

* * * *

# ಅಧ್ಯಾಯ ಮೂರು

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಇತಿಹಾಸ ಮತ್ತು ರಚನೆಯ ಹಿನ್ನೆಲೆ

೩.೧. ಕನ್ನಡ ಸಾಹಿತ್ಯ ಪರಿಷತ್ತು ನಡೆದು ಬಂದ ದಾರಿ

೩.೨. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ನಿಘಂಟುಗಳ ಪರಿಚಯ

೩.೩. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಬೆಳವಣಿಗೆಯ ಹಂತಗಳು

೩.೪. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ರಚನೆಯ ಹಿನ್ನೆಲೆ

೩.೪.೧. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಸ್ವರೂಪ

೩.೪.೨. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ವ್ಯಾಪ್ತಿ

೩.೪.೩. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಆಕರಗಳು

ಅಧ್ಯಾಯ ಮೂರು

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಇತಿಹಾಸ ಮತ್ತು ರಚನೆಯ ಹಿನ್ನೆಲೆ

## ೩.೧. ಕನ್ನಡ ಸಾಹಿತ್ಯ ಪರಿಷತ್ತು ನಡೆದು ಬಂದ ದಾರಿ

ಕನ್ನಡಿಗರ ಪಾಲಿಗೆ ೨೦೧೫ನೇ ವರ್ಷ ವಿಶೇಷವಾದುದು. ಕಾರಣ ಕನ್ನಡ ಸಾಹಿತ್ಯ ಪರಿಷತ್ತಿಗೆ ಶತಮಾನೋತ್ಸವದ ವರ್ಷ. ಕನ್ನಡ ಸಾಹಿತ್ಯ ಪರಿಷತ್ತು ೧೯೧೫ನೇ ಮೇ ೫ ರಂದು ಸ್ಥಾಪನೆಯಾಯಿತು. ಇದು ಬೃಹದಾಕಾರವಾಗಿ ಬೆಳೆದಿರುವ ಬಹುದೊಡ್ಡ ಸಾಂಸ್ಕೃತಿಕ ಸಂಸ್ಥೆಯಾಗಿದ್ದು, ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಉದಾರದೃಷ್ಟಿ, ಅಂದಿನ ದಿವಾನರಾದ ಸರ್. ಎಂ.ವಿಶ್ವೇಶ್ವರಯ್ಯನವರ ದೂರದೃಷ್ಟಿ, ಎಚ್.ವಿ.ನಂಜುಡಯ್ಯ, ಕರ್ಪೂರ ಶ್ರೀನಿವಾಸರಾವ್, ಫ.ಗು.ಹಳಕಟ್ಟಿ, ಬಿ.ರಾಮರಾವ್ ಮೊದಲಾದ ಸಾಹಿತಿಗಳ ಸಾಂಸ್ಕೃತಿಕ ದೃಷ್ಟಿಗಳ ಸಂಗಮದ ಫಲವಾಗಿ ಇದು ಉದಯಿಸಿತು. ಪರಿಷತ್ತು ಕನ್ನಡ ಕೃತಿಗಳ ಪ್ರಕಟಣೆ, ಸಂಶೋಧನೆ, ಸಮ್ಮೇಳನಗಳ ಸಂಘಟನೆ, ಗ್ರಂಥಾಲಯದ ಸ್ಥಾಪನೆ, ನಿಘಂಟು ರಚನೆ ಮೊದಲಾದ ಮೌಲ್ಯಯುತವಾದ ಧ್ಯೇಯೋದ್ದೇಶಗಳನ್ನು ಒಳಗೊಂಡಿದ್ದು, ಅವುಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಕಳೆದ ನೂರು ವರ್ಷಗಳಿಂದಲೂ ಬಹುಮುಖ್ಯ ಪಾತ್ರ ವಹಿಸಿದೆ.

ಮೈಸೂರನ್ನು ಆಳಿದ ರಾಜರಲ್ಲಿ ಪ್ರಸಿದ್ಧರಾದವರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ (ಕಾಲ ೧೮೯೦-೧೯೪೦) ಅವರು ಪ್ರಮುಖರು. ಕರ್ನಾಟಕ ಚರಿತ್ರೆಯಲ್ಲಿ ಇವರ ಆಳ್ವಿಕೆಯ ಕಾಲ ಅಪೂರ್ವವಾದುದು. ಇವರ ಕಾಲದಲ್ಲಿ ಸರ್ ಎಂ.ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನಕ್ಕೆ ಮುಖ್ಯ ಅಭಿಯಂತರರಾಗಿ ಆಗಿ ೧೯೦೯ರಲ್ಲಿ ನೇಮಕಗೊಂಡಿದ್ದರು. ಅನಂತರ ೧೯೧೨ರಿಂದ ೧೯೧೮ರವರೆಗೆ ದಿವಾನರಾಗಿ ತಮ್ಮ ದೂರದೃಷ್ಟಿಯಿಂದ ರಚನಾತ್ಮಕ ಹಾಗೂ ಅರ್ಥಪೂರ್ಣ ಯೋಜನೆಗಳನ್ನು ರೂಪಿಸಿ ಮೈಸೂರು ರಾಜ್ಯ ಅಭಿವೃದ್ಧಿಯ ಮಾರ್ಗದಲ್ಲಿ ಸಾಗಲು ಕಾರಣರಾದರು. ಅಂದಿನ ಮೈಸೂರು ಮಹಾರಾಜರ ಆಡಳಿತಕ್ಕೆ ಒಳಪಟ್ಟ ಪ್ರದೇಶಕ್ಕೆ ಭೌಗೋಳಿಕ ಮಿತಿ ಇದ್ದರೂ ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ ವರ್ಧನೆಯ ಪ್ರಗತಿಗೆ ಆ ಮಿತಿಯನ್ನು ಮೀರಿ, ರಾಜರು ಅಪಾರ ನೆರವನ್ನು ನೀಡಿದರು. ಕ್ರಿ.ಶ. ೧೮೯೦ರಲ್ಲಿ ಧಾರವಾಡದಲ್ಲಿ ಸ್ಥಾಪನೆಯಾದ 'ವಿದ್ಯಾವರ್ಧಕ ಸಂಘ' ಹಾಗೂ ಅದಕ್ಕೂ ಮುನ್ನ ಮೈಸೂರಿನಲ್ಲಿ ಸ್ಥಾಪನೆಯಾಗಿದ್ದ 'ಕರ್ನಾಟಕ ಭಾಷೋಜ್ಜೀವಿನಿ

ಸಭಾ'ಕ್ಕೂ ಮೈಸೂರು ಅರಸರು ನೆರವು ನೀಡಿದ್ದರು. "ವಿಶ್ವೇಶ್ವರಯ್ಯನವರು ಮೈಸೂರು ರಾಜ್ಯದ ಸಮಗ್ರ ಅಭಿವೃದ್ಧಿಗಾಗಿ ೧೯೧೧ರಲ್ಲಿ ಮೈಸೂರು ಸಂಪದಭಿವೃದ್ಧಿ ಸಮಾಜ (The Mysore Economic Conference) ಎನ್ನುವ ಸಂಸ್ಥೆಯನ್ನು ಸ್ಥಾಪಿಸಲು ಮಹಾರಾಜರಿಗೆ ಸಲಹೆ ನೀಡಿದ್ದರು. ಇವರ ಸಲಹೆಯಂತೆ ಮಹಾರಾಜರು ಆ ಸಂಸ್ಥೆ ರೂಪುಗೊಳ್ಳಲು ಅನುಮತಿ ನೀಡಿದರು. ಆ ಸಂಸ್ಥೆಯ ಅಂಗವಾಗಿ ಮೂರು ಸಮಿತಿಗಳು ಸ್ಥಾಪನೆಯಾದವು.

೧. ಕಾರ್ಖಾನೆಗಳ ಕೈಗಾರಿಕಾ ಸಮಿತಿ

೨. ವಿದ್ಯಾ ಸಮಿತಿ

೩. ಭೂವ್ಯವಸಾಯ ಸಮಿತಿ

ವಿದ್ಯಾ ಸಮಿತಿಗೆ ರಾಜ ಪ್ರವೀಣ ಎಚ್.ವಿ.ನಂಜುಂಡಯ್ಯನವರು ಅಧ್ಯಕ್ಷರಾಗಿ, ವಿ.ಸುಬ್ರಹ್ಮಣ್ಯ ಅಯ್ಯರ್ ಅವರು ಕಾರ್ಯದರ್ಶಿಗಳಾಗಿ ನೇಮಕವಾದರು. ವಿದ್ಯಾ ಸಮಿತಿಯು ಮೈಸೂರಿನಲ್ಲಿ ಒಂದು ವಿಶ್ವವಿದ್ಯಾಲಯ ಸ್ಥಾಪಿಸಬೇಕು ಮತ್ತು ಕನ್ನಡ ಅಕಾಡೆಮಿಯೊಂದನ್ನು ಅಸ್ತಿತ್ವಕ್ಕೆ ತರಬೇಕು ಎಂಬ ಎರಡು ವಿಷಯಗಳನ್ನು ಪ್ರಸ್ತಾಪಿಸಿತು".[೧] ಕನ್ನಡ ಅಕಾಡೆಮಿ ಅರ್ಥಾತ್ ಇಂದಿನ ಕನ್ನಡ ಸಾಹಿತ್ಯ ಪರಿಷತ್ತು ರಚನೆಗೆ ಸಂಬಂಧಿಸಿದಂತೆ ನಾಡಿನ ವಿದ್ವಜ್ಜನರ ಅಭಿಪ್ರಾಯಗಳನ್ನು ತಿಳಿದುಕೊಳ್ಳಬೇಕೆಂದು ವಿದ್ಯಾ ಸಮಿತಿಯು ಕೆಲವು ವಿಷಯಗಳನ್ನು ಸಂಕಲ್ಪಿಸಿ ಹಲವು ಉಪನ್ಯಾಸಗಳನ್ನು ಏರ್ಪಡಿಸಿತು. ೧೯೧೨-೧೩ರಲ್ಲಿ ಬಿ.ಎಂ.ಶ್ರೀಕಂಠಯ್ಯನವರ ಉಪನ್ಯಾಸವನ್ನು ಮೈಸೂರಿನಲ್ಲಿ ಏರ್ಪಡಿಸಲಾಯಿತು. ಆಗ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ದಸರಾ ಅಧಿವೇಶನಕ್ಕೆ ಬಂದಿದ್ದರು. ಎಂ.ವೆಂಕಟಕೃಷ್ಣಯ್ಯ, ಅಂಬಳೆ ಅಣ್ಣಯ್ಯ ಪಂಡಿತರು, ಕರ್ಪೂರ ಶ್ರೀನಿವಾಸರಾವ್, ಕೆ.ಕೃಷ್ಣಯ್ಯಂಗಾರ್ ಮೊದಲಾದ ಗಣ್ಯ ವ್ಯಕ್ತಿಗಳು ಬಂದಿದ್ದರು. ಮೈಸೂರಿನ ಗಾರ್ಡನ್ ಪಾರ್ಕ್‌ನಲ್ಲಿರುವ ಜಿಲ್ಲಾಧಿಕಾರಿ ಕಟ್ಟಡದಲ್ಲಿ ಸಭೆ ಸೇರಿ ಬೆಳಗ್ಗೆ ೯ರಿಂದ ೧೧ರವರೆಗೆ ಬಿ.ಎಂ.ಶ್ರೀಕಂಠಯ್ಯನವರು ಉಪನ್ಯಾಸ ನೀಡಿದ್ದು ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಬೀಜಾಂಕುರವಾಯಿತು. ಅನಂತರ ೧೯೧೪ರಲ್ಲಿ ನಡೆದ 'ಮೈಸೂರ್ ಎಕಾನಾಮಿಕ್ ಕಾನ್ಫರೆನ್ಸ್' ಸಭೆಯಲ್ಲಿ ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಒಂದು ಸಂಸ್ಥೆ ಸ್ಥಾಪನೆಯಾಗಬೇಕು ಎನ್ನುವ ವಿಷಯ ಶಾಮರಾವ್‌ರವರಿಂದ ಮಂಡಿತವಾಗಿ ಅದು ಸರ್ವಾನುಮತದಿಂದ ಸ್ವೀಕೃತವಾಯಿತು. ಆ ಕುರಿತು ಅಕ್ಟೋಬರ್ ೩೧, ೧೯೧೪ರಲ್ಲಿ ಸಂಪದಭ್ಯುದಯ ಸಮಾಜದ ವಿದ್ಯಾವಿಷಯಕ ಮಂಡಳಿಯವರು, ರಾವ್‌ಬಹದ್ದೂರ್ ಎಂ.ಶಾಮರಾವ್, ಕರ್ಪೂರ ಶ್ರೀನಿವಾಸರಾವ್, ಪಿ.ಎಸ್.ಅಚ್ಯುತ್‌ರಾವ್‌ರವರು ಹೀಗೆ ಮೂರು ಜನ ವಿದ್ವಾಂಸರ ಒಂದು ಉಪಸಮಿತಿಯನ್ನು ರಚಿಸಿದರು.

ಈ ಉಪಸಮಿತಿಯು ೧೯೧೫ರ ಜನವರಿ ೭, ಮಾರ್ಚ್ ೨ ಮತ್ತು ಮಾರ್ಚ್ ೨೨ರಂದು ಮೂರು ಸಲ ಸಭೆ ಸೇರಿ ಸುದೀರ್ಘವಾಗಿ ಚರ್ಚಿಸಿದರು. ಈ ಸಭೆಯ ತೀರ್ಮಾನದಂತೆ ಮೇ ೩ರಿಂದ ೬ರವರೆಗೆ ನಾಲ್ಕು ದಿವಸಗಳ ಸಮ್ಮೇಳನವನ್ನು ಏರ್ಪಡಿಸುವುದು, ಅದಕ್ಕಾಗಿ ಕರ್ನಾಟಕದ

ಎಲ್ಲ ಭಾಗಗಳಿಂದ ಪ್ರತಿನಿಧಿಗಳನ್ನು ಆಹ್ವಾನಿಸುವುದು, ಐದು ವಿಷಯಗಳ ಬಗ್ಗೆ ಲೇಖನಗಳನ್ನು ತರಿಸುವುದು, ಅವುಗಳನ್ನು ಸಮ್ಮೇಳನದಲ್ಲಿ ಮಂಡಿಸಿ ಚರ್ಚಿಸುವುದು ಎಂದು ನಿರ್ಣಯ ಕೈಗೊಂಡರು.

ಬೆಂಗಳೂರಿನ ಸರ್ಕಾರಿ ಹೈಸ್ಕೂಲ್‌ನಲ್ಲಿ ವಿಶಾಲವಾದ ಹಜಾರದಲ್ಲಿ ಮೇ ೩ರಂದು ಸಮ್ಮೇಳನ ಮಧ್ಯಾಹ್ನ ೩ ಗಂಟೆಗೆ ಪ್ರಾರಂಭವಾಯಿತು. ಧಾರವಾಡ, ವಿಜಾಪುರ, ಬೆಳಗಾವಿ, ಕಾರವಾರ, ಬೊಂಬಾಯಿ ನಗರ, ಬೊಂಬಾಯಿ ಅಧಿಪತ್ಯದ ದೇಸಿ ಸಂಸ್ಥಾನಗಳು, ಮದರಾಸು ನಗರ, ಬಳ್ಳಾರಿ, ದಕ್ಷಿಣ ಕನ್ನಡ, ಮೈಸೂರು ಸಂಸ್ಥಾನದ ಅನೇಕ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದ್ದರು. ಮೊದಲಿಗೆ ಎಚ್.ವಿ.ನಂಜುಂಡಯ್ಯನವರು ಇಂಗ್ಲಿಶ್‌ನಲ್ಲಿ ಅಧ್ಯಕ್ಷೀಯ ಭಾಷಣವನ್ನು ಮಾಡಿದರೂ ಅವರ ಭಾಷಣದ ಸಾರಾಂಶ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಇತ್ಯಾದಿ ಆಗಿತ್ತು ಎನ್ನುವುದನ್ನು ಈ ಕೆಳಗಿನ ಅಂಶಗಳಿಂದ ನೋಡಬಹುದಾಗಿದೆ.

"ಈ ಸಂಸ್ಥಾನದಲ್ಲಿ ಕನ್ನಡವೇ ಪ್ರಮುಖವಾದ ಭಾಷೆಯಾಗಿದೆ. ಕನ್ನಡ ಭಾಷೆಯು ಮೈಸೂರು ಸಂಸ್ಥಾನಕ್ಕೆ ಮಾತ್ರವೇ ಸೇರಿರುವುದಿಲ್ಲ. ಕನ್ನಡವನ್ನು ಮಾತನಾಡುವುದರಲ್ಲಿ ಅರ್ಧ ಪಾಲಿಗಿಂತಲೂ ಹೆಚ್ಚು ಮಂದಿ ಸಂಸ್ಥಾನದ ಸುತ್ತಮುತ್ತಲೂ ಇರುವ ಬ್ರಿಟಿಶ್ ಇಂಡಿಯಾದಲ್ಲಿಯೂ, ಹೈದ್ರಾಬಾದ್ ಸಂಸ್ಥಾನದಲ್ಲಿಯೂ ವಾಸಿಸುತ್ತಿರುವರು. ಭಾಷಾಭಿವೃದ್ಧಿ, ಗ್ರಂಥ ರಚನೆ ಇವುಗಳ ವಿಷಯದಲ್ಲಿ ಕನ್ನಡಿಗರೆಲ್ಲರನ್ನು ಒಟ್ಟುಗೂಡಿಸಿದರೆ ವಿಶೇಷ ಪ್ರಯೋಜನವುಂಟು. ಈ ಉದ್ದೇಶದಿಂದಲೇ ಕನ್ನಡ ಭಾಷಾಭಿವೃದ್ಧಿಯಲ್ಲಿ ಆಸಕ್ತರಾಗಿಯೂ, ಸಮರ್ಥರಾಗಿಯೂ, ಕಾರ್ಯಭಾರ ಹೊರಿಸಲು ತಕ್ಕವರಾಗಿಯೂ ಇರುವ ಜನಗಳು ಸೇರಿ ಅನೋನ್ಯ ಸಹಾಯದಿಂದ ಒಟ್ಟುಗೂಡಿ ಕೆಲಸ ಮಾಡತಕ್ಕ ಒಂದು ಸಭೆಯನ್ನು ಸರ್ಕಾರದ ಸಂಬಂಧವಿಲ್ಲದೆ ನಿರ್ಮಿಸಬೇಕೆಂದು ಈ ಸಮ್ಮೇಳನವನ್ನು ಏರ್ಪಾಡು ಮಾಡಲಾಗಿದೆ".[೨]

ಹೀಗೆ ಅಧ್ಯಕ್ಷೀಯ ಭಾಷಣದ ನಂತರ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ನಾಲ್ಕು ಜನರಿಂದ ಪ್ರಬಂಧ ಮಂಡನೆಯಾಯಿತು. ಅನಂತರ ಮುಂದಿನ ದಿನಗಳ ಕಾರ್ಯಕ್ರಮಗಳನ್ನು ಹೊರತುಪಡಿಸಿ ವಿಷಯ ನಿರ್ಧರಿಸಲು ವಿಷಯ ನಿರ್ಧಾರಕ ಮಂಡಳಿ ರಚಿಸಲಾಯಿತು. ಅದರಲ್ಲಿ ಬೇರೆ ಬೇರೆ ಪ್ರಾಂತ್ಯದ ಒಟ್ಟು ಇಪ್ಪತ್ತು ಜನ ಸದಸ್ಯರಿದ್ದರು. ಎರಡನೇ ದಿನದ ಕಾರ್ಯಕ್ರಮಗಳು ಅಂದರೆ ೪.೫.೧೯೧೫ರಂದು ರಾಜಸಭಾಭೂಷಣ ಕೆ.ಪಿ.ಪುಟ್ಟಣ್ಣಶೆಟ್ಟಿಯವರ ಅಧ್ಯಕ್ಷತೆಯಲ್ಲಿ ನಡೆದವು. ಅದರಲ್ಲಿ ಈ ಕೆಳಗಿನ ಮೂರು ಅಂಶಗಳು ತೀರ್ಮಾನಗೊಂಡವು

೧. ಕರ್ಣಾಟಕ ಭಾಷಾ ಸಂಸ್ಕರಣಕ್ಕಾಗಿಯೂ, ಕರ್ಣಾಟಕ ಗ್ರಂಥಾವಳಿ ಅಭಿವೃದ್ಧಿಗಾಗಿಯೂ ಬೆಂಗಳೂರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರಿನೊಡನೆ ಪ್ರಧಾನ ಸಭೆಯೊಂದು ಸ್ಥಾಪಿತವಾಗಬೇಕು.

೨. ಬೊಂಬಾಯಿ, ಮದರಾಸು, ಹೈದ್ರಾಬಾದು ಮತ್ತು ಕೊಡಗು ಪ್ರಾಂತ್ಯಗಳಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಶಾಖೆಗಳಿರಬೇಕು.

೩. ಈ ಪರಿಷತ್ತಿನ ಉದ್ದೇಶಗಳನ್ನೇ ಇಟ್ಟುಕೊಂಡು ಕೆಲಸ ಮಾಡುವ ಇತರ ಸಂಘಗಳನ್ನು ತನ್ನ ಜೊತೆಗೆ ಸೇರಿಸಿಕೊಳ್ಳುವುದಕ್ಕೆ ಕರ್ಣಾಟಕ ಸಾಹಿತ್ಯ ಪರಿಷತ್ತಿಗೆ ಅಧಿಕಾರ ಇರಬೇಕು.

ಪರಿಷತ್ತಿನ ರಚನಾ ಕ್ರಮ ಮತ್ತು ನಿಯಮಾವಳಿಗಳನ್ನು ತಯಾರು ಮಾಡುವುದಕ್ಕಾಗಿ ನೇಮಿಸಲ್ಪಟ್ಟಿದ್ದ ಕರ್ಪೂರ ಶ್ರೀನಿವಾಸರಾವ್, ಪಿ.ಎಸ್.ಅಚ್ಯುತರಾಯ, ಪುಟ್ಟಣ್ಣಶೆಟ್ಟಿಯವರು, ಬಾಪು ಸುಬ್ಬರಾಯರು, ಆರ್.ರಘುನಾಥರಾಯರು, ಟಿ.ಲಕ್ಷ್ಮಿನರಸಿಂಹರಾಯರು, ಡಿ.ವಿ.ಗುಂಡಪ್ಪನವರನ್ನು ಒಳಗೊಂಡ ಉಪಸಮಿತಿಯವರು ನಿಯಮಗಳ ಕರಡು ಪ್ರತಿಯನ್ನು ಒಪ್ಪಿಸಿದರು.

ಸಮ್ಮೇಳನದ ಮೂರನೇ ದಿನ ಅಂದರೆ ೫.೫.೧೯೧೫ ಕನ್ನಡ ನಾಡಿನ ಇತಿಹಾಸದಲ್ಲಿ ಮರೆಯಲಾಗದ ದಿನ. ಈ ದಿನದ ಅಧ್ಯಕ್ಷತೆಯನ್ನು ಕರ್ಪೂರ ಶ್ರೀನಿವಾಸರಾವ್ ವಹಿಸಿದ್ದರು. ಈ ದಿನದಂದು ಪರಿಷತ್ತಿನ ರಚನಾ ಕ್ರಮವು, ನಿಬಂಧನೆಗಳು ಚರ್ಚಿತವಾಗಿ ಒಪ್ಪಿಗೆ ಪಡೆದವು. ನಾಲ್ಕನೆಯ ದಿನ ಕಾರ್ಯಕಾರಿ ಮಂಡಳಿ ಚುನಾವಣೆ ನಡೆಯುತ್ತದೆ. ಆಯ್ಕೆಯಾದ ಕಾರ್ಯಕಾರಿ ಮಂಡಳಿಯ ಹೆಸರುಗಳನ್ನು ಪ್ರಕಟಿಸಲಾಯಿತು. ಬೇರೆ ಬೇರೆ ಭಾಗದ ಒಟ್ಟು ೩೦ ಜನ ಸಮಿತಿಯಲ್ಲಿ ಸದಸ್ಯರಾದರು. ಹೀಗೆ ನಾಲ್ಕು ದಿನ ಸಮ್ಮೇಳನ ನಡೆಸುವುದರೊಂದಿಗೆ ೧೯೧೫, ಮೇ ೫ರಂದು ಕನ್ನಡ ಸಾಹಿತ್ಯ ಪರಿಷತ್ತು ಅಸ್ತಿತ್ವಕ್ಕೆ ಬರುತ್ತದೆ. ಅಂದು ಸಣ್ಣ ಸಂಸ್ಥೆಯಾಗಿ ಬೆಳೆದ ಕನ್ನಡ ಸಾಹಿತ್ಯ ಪರಿಷತ್ತು ಇಂದು ಸಮಸ್ತ ಕನ್ನಡಿಗರ ಬೃಹತ್ ಸಂಸ್ಥೆಯಾಗಿ ೧೦೦ ವರ್ಷಗಳನ್ನು ಪೂರೈಸಿ ಕನ್ನಡ ನುಡಿ ಸೇವೆಯಲ್ಲಿ ಕಾರ್ಯನಿರತವಾಗಿದೆ.

ಶತಮಾನೋತ್ಸವದ ಸಂಭ್ರಮದಲ್ಲಿರುವ, ಕನ್ನಡಿಗರ ಧ್ವನಿಯಾಗಿ, ಕರ್ನಾಟಕದ ಸಾರ್ವಭೌಮ ಸಂಸ್ಥೆಯಾಗಿ ಗುರುತಿಸಿಕೊಂಡಿರುವ ಕನ್ನಡ ಸಾಹಿತ್ಯ ಪರಿಷತ್ತಿಗೆ ೨೦೧೬ರವರೆಗೆ ವಿವಿಧ ವ್ಯಕ್ತಿತ್ವದ ಬೇರೆ ಬೇರೆ ದೃಷ್ಟಿ-ಧೋರಣೆಗಳನ್ನು ಹೊಂದಿದ ೨೪ ಜನ ಅಧ್ಯಕ್ಷರು ಹಾಗೂ ನಾಲ್ಕು ಜನ ಸರ್ಕಾರ ನೇಮಿಸಿದ ಅಧಿಕಾರಿಗಳು ಈ ಸಂಸ್ಥೆಯನ್ನು ಕಟ್ಟಿ ಬೆಳೆಸಿದ್ದಾರೆ. ೨೦೧೬, ಮಾರ್ಚ್ ೪ರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ೨೫ನೇ ಅಧ್ಯಕ್ಷರಾಗಿ ಮನು ಬಳಿಗಾರ್ ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ನಾಡಿನ ೮೦ ಜನ ವಿದ್ವಾಂಸರ ಅಧ್ಯಕ್ಷತೆಯಲ್ಲಿ ೮೩ ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳು ಯಶಸ್ವಿಯಾಗಿ ನಡೆದಿವೆ. ಕನ್ನಡ ಸಾಹಿತ್ಯ ಪರಿಷತ್ತು ನಿರಂತರವಾಗಿ ಆಯೋಜಿಸುವ ಸಾಹಿತ್ಯ ಸಮ್ಮೇಳನಗಳು ಕನ್ನಡಿಗರ ಜಾತ್ರೆಯಾಗಿ, ಜನರಲ್ಲಿ ನಾಡು, ನುಡಿಯ ಬಗ್ಗೆ ಜಾಗೃತಿ ಮೂಡಿಸುವಲ್ಲಿ ಯಶಸ್ವಿಯಾಗಿವೆ. ಈ ಸಮ್ಮೇಳನಗಳಲ್ಲಿ ಚರ್ಚಿವಾದ ವಿಷಯಗಳು, ಕೈಗೊಂಡ ನಿರ್ಣಯಗಳು, ಕಾರ್ಯರೂಪಕ್ಕೆ ತಂದ ಯೋಜನೆಗಳು ಸಮಗ್ರ ಕರ್ನಾಟಕದ ನಾಡು, ನುಡಿ, ಗಡಿ, ಸಾಹಿತ್ಯ, ಸಂಸ್ಕೃತಿಯ ಬೆಳವಣಿಗೆಗೆ ಸಹಕಾರಿಯಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪನೆಯಾದಾಗಿನಿಂದ ಇಲ್ಲಿಯವರೆಗೆ ಕನ್ನಡ ನಾಡು-ನುಡಿಯ ಸಂರಕ್ಷಣೆ, ಸಾಹಿತ್ಯ ಸಮ್ಮೇಳನಗಳ ಸಂಘಟನೆ, ಪುಸ್ತಕ ಪ್ರಕಟಣೆ, ನಾಡಿನ ಸಾಹಿತಿಗಳಿಗೆ, ಸಾಧಕರಿಗೆ ಗೌರವಾರ್ಪಣೆ, ಯುವಪ್ರತಿಭೆಗಳ ಪೋಷಣೆ, ಜಿಲ್ಲೆ, ತಾಲ್ಲೂಕು, ಹೋಬಳಿ ಘಟಕಗಳ

ಸ್ಥಾಪನೆ ಮೊದಲಾದ ಕನ್ನಡಪರ ಕಾರ್ಯಗಳನ್ನು ಮಾಡುತ್ತಾ ಬಂದಿದ್ದು ಅದರ ಕಾರ್ಯಸ್ವರೂಪವನ್ನು ಚಾರಿತ್ರಿಕ ದೃಷ್ಟಿಯಿಂದ ಕಾಲಾನುಕ್ರಮದ ಹಿನ್ನೆಲೆಯಲ್ಲಿ ವೀರಣ್ಣ ರಾಜೂರ (೨೦೧೪) ಅವರು ಪರಿಷತ್ತಿನ ಸಾಧನೆಗಳನ್ನು "೧) ೧೯೧೫ರಿಂದ ೧೯೪೭ರವರೆಗಿನ ಸ್ವಾತಂತ್ರ್ಯಪೂರ್ವ ಅವಧಿ ೨) ೧೯೪೭ರಿಂದ ೧೯೫೭ರವರೆಗಿನ ಸ್ವಾತಂತ್ರ್ಯೋತ್ತರ ಅವಧಿ ೩) ೧೯೫೬ರಿಂದ ಇಲ್ಲಿಯವರೆಗೆ ಕರ್ನಾಟಕ ಏಕೀಕರಣ ನಂತರದ ಅವಧಿ"[೩] ಎಂದು ಮೂರು ರೀತಿಯಾಗಿ ವರ್ಗೀಕರಿಸಿದ್ದಾರೆ.

### ೧. ೧೯೧೫ರಿಂದ ೧೯೪೭ರವರೆಗಿನ ಸ್ವಾತಂತ್ರ್ಯಪೂರ್ವ ಅವಧಿ

ಕನ್ನಡ ಸಾಹಿತ್ಯ ಪರಿಷತ್ತಿನ ಈ ಕಾಲಾವಧಿಯ ಕಾರ್ಯಚಟುವಟಿಕೆಗಳನ್ನು ಗಮನಿಸಿದಾಗ ಕನ್ನಡಿಗರನ್ನು ಒಗ್ಗೂಡಿಸುವುದು, ವಿವಿಧ ವಸ್ತು ಆಧರಿಸಿ ಸ್ವತಂತ್ರ ಕೃತಿ ರಚಿಸುವುದು, ಪಾರಿಭಾಷಿಕ ಪದಕೋಶ ಸಿದ್ಧಪಡಿಸುವುದು, ಕೃತಿಕಾರ-ಸಹೃದಯರ ನಡುವೆ ಸಂವಾದ ನಡೆಸಲು ನಿಯತಕಾಲಿಕಗಳನ್ನು ಪ್ರಕಟಿಸುವುದು, ಪ್ರಾಚೀನ ಕಾವ್ಯಗಳನ್ನು ಶೋಧಿಸಿ, ಪರಿಷ್ಕರಿಸಿ ಪ್ರಕಟಿಸುವುದು ಹೀಗೆ ಮೊದಲಾದ ಸಾಹಿತ್ಯಿಕ ವಿಷಯಗಳಿಗೆ ಒತ್ತು ಕೊಡಲಾಯಿತು. ಈ ಕಾರ್ಯಗಳ ಜೊತೆಗೆ ಶಾಲೆಗಳಲ್ಲಿ ಶಿಕ್ಷಣ ಪದ್ಧತಿ ಪ್ರಚಾರಕ್ಕೆ ಬರಬೇಕು. ಅದಕ್ಕೆ ತಕ್ಕ ಪಠ್ಯಗಳನ್ನು ತಜ್ಞರಿಂದ ಬರೆಯಿಸಬೇಕು, ಕನ್ನಡ ಶಾಲೆಗಳಿಲ್ಲದ ಕನ್ನಡ ಪ್ರದೇಶಗಳಲ್ಲಿ ಕನ್ನಡ ಶಾಲೆ ಆರಂಭಿಸಬೇಕು, ಅಂಚೆ ಇಲಾಖೆ, ರೈಲ್ವೆ ಇಲಾಖೆ, ಸರ್ಕಾರಿ ಕೋರ್ಟ್ ಕಚೇರಿಗಳಲ್ಲಿ ಕನ್ನಡ ಬಳಸುವಂತೆ ಒತ್ತಾಯಿಸಬೇಕು. ನಮ್ಮ ಎಲ್ಲ ವ್ಯವಹಾರಗಳು ಕನ್ನಡದಲ್ಲಿಯೇ ನಡೆಯಬೇಕು, ಹರಿದು ಹಂಚಿಹೋದ ಕರ್ನಾಟಕವನ್ನು ಒಂದು ಮಾಡಬೇಕು ಎನ್ನುವ ನಿರ್ಣಯಗಳ ಮೂಲಕ ಕನ್ನಡ ಬೆಳವಣಿಗೆಯ ಕಾರ್ಯಗಳನ್ನು ಮಾಡಿತು.

### ೨. ೧೯೪೭ರಿಂದ ೧೯೫೭ರವರೆಗಿನ ಸ್ವಾತಂತ್ರ್ಯೋತ್ತರ ಅವಧಿ

ಈ ಅವಧಿಯಲ್ಲಿ ಪರಿಷತ್ತು ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಮುಖ್ಯ ಪಾತ್ರ ವಹಿಸಿತು. ಅಖಂಡ ಕರ್ನಾಟಕ ಪರಿಕಲ್ಪನೆ ರೂಪುಗೊಳ್ಳಲು ಸಾಕಷ್ಟು ಕಾರ್ಯಗಳನ್ನು ನಿರ್ವಹಿಸಿತು. ಆಡಳಿತ ಭಾಷಾ ಚಳವಳಿ ಇಂಗ್ಲಿಶ್-ಹಿಂದಿ ವಿರೋಧ ಚಳವಳಿ, ಕರ್ನಾಟಕ ನಾಮಕರಣ ಚಳವಳಿ, ಬೆಂಗಳೂರು ದೂರದರ್ಶನ ಉರ್ದು ವಾರ್ತೆ ನಿಷೇಧ ಚಳವಳಿ, ನದಿ ನೀರಿನ ಬಳಕೆ ಚಳವಳಿ, ಗೋಕಾಕ್ ಚಳವಳಿ, ನಾಗರಿಕ ಸೇವಾ ಪರೀಕ್ಷೆಗಳಲ್ಲಿ ಕನ್ನಡ ಚಳವಳಿ, ಸಾಕ್ಷರತಾ ಆಂದೋಲನ, ಮಹಾಜನ ವರದಿ ಜಾರಿ, ಶಾಸನ ಸಭೆಯಲ್ಲಿ ಪರಿಷತ್ತಿನ ಪ್ರತಿನಿಧಿ-ಬರೆಹಗಾರರಿಗೆ ಅವಕಾಶ ಹೀಗೆ ಕಾಲಕಾಲಕ್ಕೆ ಅನೇಕ ಚಳವಳಿಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಸಮಸ್ತ ಕನ್ನಡಿಗರ ಧ್ವನಿಯಾಗಿ ಕಾರ್ಯ ಮಾಡುತ್ತಾ ಬಂದಿದೆ. ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತೋರಿದ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ-ಎಲ್ಲ ಧೋರಣೆಗಳ ಸಾಹಿತ್ಯ, ಮಕ್ಕಳ ಸಾಹಿತ್ಯ, ಕಾನೂನು ಸಾಹಿತ್ಯ, ವಿಜ್ಞಾನಿ ಸಾಹಿತ್ಯ ಇತ್ಯಾದಿ ಎಲ್ಲ ಸಾಹಿತ್ಯ ಶಾಖೆಗಳಿಗೆ ಪ್ರಾತಿನಿಧ್ಯ, ಉದಯೋನ್ಮುಖ ಲೇಖಕರಿಗೆ ಪ್ರೋತ್ಸಾಹ, ನಾಟಕ, ಗಮಕ, ಸಂಶೋಧನೆ, ಕನ್ನಡ ಬೆರಳಚ್ಚು ತರಬೇತಿ, ಕಾವ-ಜಾಣ-ರತ್ನ-ಗಮಕ ಪರೀಕ್ಷೆಗಳನ್ನು ನಡೆಸುವುದು ಇದೇ ಮೊದಲಾದ ಚಟುವಟಿಕೆಗಳ ಮೂಲಕ

ಸಾಹಿತ್ಯ ಪರಿಷತ್ತು ಭಾಷಿಕ–ಸಾಹಿತ್ಯಿಕ–ಸಾಮಾಜಿಕ–ಶೈಕ್ಷಣಿಕ–ಸಾಂಸ್ಕೃತಿಕ ಹೀಗೆ ಕನ್ನಡದ ಎಲ್ಲ ನೆಲೆಗಳ ಕಾರ್ಯಗಳಿಗೆ ತನ್ನನ್ನು ಅಣಿಗೊಳಿಸಿಕೊಳ್ಳುತ್ತ ಬಂದಿದೆ.

**೩. ೧೯೫೬ರಿಂದ ಇಲ್ಲಿಯವರೆಗೆ ಕರ್ನಾಟಕ ಏಕೀಕರಣ ನಂತರದ ಅವಧಿ**

೧. ಕನ್ನಡಿಗರಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರೇರೇಪಿಸಿ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಳ್ಳುವಂತೆ ಪ್ರಚೋದಿಸಿದ್ದು.

೨. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಉತ್ಕಟವಾಗಿ ತೊಡಗಿಕೊಂಡು ಅದು ಸಾಕಾರಗೊಳ್ಳುವಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದು.

೩. ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡಲು ಒತ್ತಾಯಿಸಿದ್ದು.

೪. ರಾಜ್ಯಮಟ್ಟದಲ್ಲಿ ಕನ್ನಡ ಆಡಳಿತ ಭಾಷೆಯಾಗುವಂತೆ ಹೋರಾಟ ನಡೆಸಿದ್ದು.

೫. ಕನ್ನಡ ಸಾಹಿತ್ಯ–ಸಂಸ್ಕೃತಿಗಳಿಗೆ ಸಂಬಂಧಿಸಿದ ಕಾವ–ಜಾಣ–ರತ್ನ ಪರೀಕ್ಷೆ, ಗಮಕ ಪ್ರವೇಶ ಮತ್ತು ಪ್ರೌಢ ಪರೀಕ್ಷೆಗಳನ್ನು, ಜಾನಪದ ಹಾಗೂ ಶಾಸನಶಾಸ್ತ್ರ ಪರೀಕ್ಷೆಗಳನ್ನು ವ್ಯವಸ್ಥೆಗೊಳಿಸಿ ನಡೆಸಿದ್ದು.

೬. ಕನ್ನಡ ಬೆರಳಚ್ಚು ತರಗತಿಗಳನ್ನು ನಡೆಸಿ ಆಡಳಿತಗಾರರಿಗೆ ಪರಿಣಿತ ಕೆಲಸಗಾರರನ್ನು ದೊರಕಿಸಿಕೊಟ್ಟದ್ದು. ಆ ಮೂಲಕ ಕನ್ನಡ ಆಡಳಿತ ಭಾಷೆಯಾಗಲು ರಚನಾತ್ಮಕ ರೀತಿಯಲ್ಲಿ ನೆರವು ನೀಡಿದ್ದು.

೭. ಮಹಾಜನ ವರದಿ ಜಾರಿಗೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಮೇಲೆ ಒತ್ತಡ ಹೇರಿದ್ದು.

೮. ರಾಜ್ಯದ ನೆಲ–ಜಲಗಳ, ಕನ್ನಡ ನುಡಿಯ ಪ್ರಶ್ನೆ ಬಂದಾಗಲೆಲ್ಲ ರಾಜ್ಯದ ಸಮಷ್ಟಿ ಪರವಾಗಿ ನಿಂತು ಹೋರಾಡಿದ್ದು. ರಾಜ್ಯಕ್ಕೆ ಹಿತವಾಗುವಂಥ ನಿರ್ಧಾರ ಕೈಗೊಳ್ಳುವಂತೆ ಸರ್ಕಾರಗಳನ್ನು ಒತ್ತಾಯಿಸಿದ್ದು.

೯. ವಿಶಾಲ ವ್ಯಾಪ್ತಿಯ ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ೮೩ ಬಾರಿ ನಡೆಸಿ ಕನ್ನಡಿಗರಲ್ಲಿ ನಾಡು–ನುಡಿ–ಸಂಸ್ಕೃತಿ–ಪ್ರೀತಿ–ಅಭಿಮಾನಗಳನ್ನು ವೃದ್ಧಿಸಿದ್ದು.

೧೦. ಗ್ರಂಥ ಪ್ರಕಟಣೆ, ವಿಚಾರ ಸಂಕಿರಣ, ವಿಶೇಷ ಉಪನ್ಯಾಸ, ಸಮ್ಮೇಳನಗಳ ಮೂಲಕ ನೂರಾರು ಬರೆಹಗಾರರು ಬೆಳೆಯುವಂತೆ ಮಾಡಿದ್ದು.

೧೧. ಸಾವಿರಾರು ಗ್ರಂಥಗಳನ್ನು ಪ್ರಕಟಿಸಿದ್ದು (ಸಂಶೋಧನೆ, ಜಾನಪದ, ಪ್ರಾಚೀನ ಕಾವ್ಯ, ಆಧುನಿಕ ಕಾವ್ಯ–ಕತೆ–ಕಾದಂಬರಿ ಮಕ್ಕಳ ಸಾಹಿತ್ಯ ಇತ್ಯಾದಿ) ಆ ಮೂಲಕ ಉದಯೋನ್ಮುಖ ಲೇಖಕರನ್ನು ಪ್ರೋತ್ಸಾಹಿಸಿದ್ದು, ಜ್ಞಾನ ಪ್ರಸಾರ ಕಾರ್ಯ ಮಾಡಿದ್ದು.

೧೨. ಬೃಹತ್ ಕನ್ನಡ-ಕನ್ನಡ ನಿಘಂಟು ಯೋಜನೆಯನ್ನು ಯಶಸ್ವಿಯಾಗಿ ಪೂರೈಸಿದ್ದು.

೧೩. ಕನ್ನಡಕ್ಕೆ ಮೌಲಿಕ ಕೊಡುಗೆ ನೀಡಿದ ಸಾಹಿತಿಗಳಿಗೆ ಗೌರವ ಫೆಲೋಶಿಪ್ ನೀಡಿ ಗೌರವಿಸಿದ್ದು.

೧೪. ವಿವಿಧ ಉತ್ತಮ ಕೃತಿಗಳಿಗೆ ದತ್ತಿನಿಧಿ ಬಹುಮಾನಗಳನ್ನು ಸ್ಥಾಪಿಸಿ ಗ್ರಂಥಕರ್ತರನ್ನು ಪುರಸ್ಕರಿಸಿದ್ದು.

೧೫. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿ ಬೇರುಮಟ್ಟದ ಪ್ರತಿಭೆಗಳಿಗೆ ಪ್ರೋತ್ಸಾಹ ಕಲ್ಪಿಸಿದುದು.

೧೬. ಕರ್ನಾಟಕದ ಒಳಗೆ ಮತ್ತು ಹೊರಗೆ ತಾನೊಂದು ಕನ್ನಡ ಸಂಸ್ಕೃತಿಯ, ಕನ್ನಡ ಜನರ ಅಧಿಕೃತ ರಾಯಭಾರಿ ಎಂಬ ಭಾವನೆಯನ್ನು ಎಲ್ಲರಲ್ಲೂ ಉಂಟುಮಾಡಿದ್ದು.

ಇಂಥ ಹಲವಾರು ಪ್ರಮುಖ ಹಾಗೂ ಗಮನಾರ್ಹ ಸಾಧನೆಗಳ ಮೂಲಕ ಪರಿಷತ್ತು ಕರ್ನಾಟಕ ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ ಬದುಕಿಗೆ ನೀಡಿದ ಅಂತಃಸತ್ವ ಖಂಡಿತವಾಗಿಯೂ ಮೆಚ್ಚುಗೆಗೆ ಅರ್ಹವಾದುದು.

**೩.೨. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ನಿಘಂಟುಗಳ ಪರಿಚಯ**

ಕನ್ನಡ ಸಾಹಿತ್ಯ ಪರಿಷತ್ತಿನ ಮೂಲ ಸಂವಿಧಾನದಲ್ಲಿ ಕೋಶರಚನೆಯೂ ಒಂದಾಗಿದ್ದು, ಸಂಶೋಧನೆ, ಭಾಷಾಭ್ಯಾಸಿಗಳಿಗೆ ನೆರವಾಗುವ, ಸಾಮಾನ್ಯರಿಗೆ, ವಿದ್ವಾಂಸರಿಗೆ ಉಪಯುಕ್ತವಾಗುವ ಹತ್ತಾರು ನಿಘಂಟುಗಳನ್ನು ಪರಿಷತ್ತು ಪ್ರಕಟಿಸಿದೆ. ಯಾವ ಸಂಸ್ಥೆಯೂ ಕನ್ನಡ ನಾಡಿನಲ್ಲಿ ಇಷ್ಟೊಂದು ಕೋಶಗಳನ್ನು ಕನ್ನಡದಲ್ಲಿ ಪ್ರಕಟಿಸಿಲ್ಲ. ಕನ್ನಡ ನಿಘಂಟಿನ ಎಂಟು ಸಂಪುಟಗಳು ಪರಿಷತ್ತಿಗೆ ಗೌರವವನ್ನು ತಂದುಕೊಟ್ಟಿವೆ.

ನಿಘಂಟುಗಳ ರಚನೆ ಮತ್ತು ಪರಿಷ್ಕರಣದ ಕನ್ನಡ ಸಾಹಿತ್ಯ ಪರಿಷತ್ತು ಏಕಭಾಷಾ, ದ್ವಿಭಾಷಾ ನಿಘಂಟುಗಳನ್ನು ಮತ್ತು ಪಾರಿಭಾಷಿಕ ನಿಘಂಟುಗಳು ಪ್ರಕಟಿಸಿತು. ಅವುಗಳ ವಿವರವನ್ನು ಈ ಕೆಳಕಂಡಂತೆ ನೀಡಲಾಗಿದೆ.

**೧. ಕನ್ನಡ ನಿಘಂಟು (೧೯೪೧-೧೯೯೫) ೮ ಸಂಪುಟಗಳು**

ಕನ್ನಡ ಸಾಹಿತ್ಯ ಪರಿಷತ್ತಿನ ಮಹತ್ವದ ಕಾರ್ಯಗಳಲ್ಲಿ ಕನ್ನಡ ನಿಘಂಟಿನ ಸಂಪುಟಗಳ ಪ್ರಕಟಣೆಯೂ ಒಂದು. ಪ್ರಸ್ತುತ ಅಧ್ಯಯನ ಈ ನಿಘಂಟನ್ನೇ ಕುರಿತು ಇರುವುದರಿಂದ ಮುಂದಿನ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

೨. ಸಂಕ್ಷಿಪ್ತ ಕನ್ನಡ ನಿಘಂಟು

ಕನ್ನಡ ಸಾಹಿತ್ಯ ಪರಿಷತ್ತು ಬೃಹತ್ ಕನ್ನಡ ನಿಘಂಟನ್ನು ಎಂಟು ಸಂಪುಟಗಳಲ್ಲಿ ಸಿದ್ಧಪಡಿಸಿದಾಗ ಸಾಮಾನ್ಯ ಸಾಹಿತ್ಯಾಸಕ್ತ ಜನರು ವಿದ್ವಾಂಸರ ಬಳಕೆಯ ದೃಷ್ಟಿಯಿಂದ ಸಮಗ್ರ ಕನ್ನಡ ಭಾಷೆಯನ್ನು ಗಮನದಲ್ಲಿಟ್ಟುಕೊಂಡು ರಕ್ಷಿಸಿದ ೯ ಸಾವಿರಕ್ಕೂ ಮಿಗಿಲಾದ ಪುಟಗಳುಳ್ಳ ಬೃಹತ್ ನಿಘಂಟನ್ನು ಕೊಳ್ಳುವುದು, ಬಳಸುವುದೂ ಸುಲಭವಿರಲಿಲ್ಲ. ಜನಸಾಮಾನ್ಯರಿಗೆ ಬಳಸಲು ಎಂ.ಮರಿಯಪ್ಪ ಭಟ್ಟ ಅವರ ಅಧ್ಯಕ್ಷತೆಯಲ್ಲಿ ಒಂದು ಸಂಪಾದಕ ಸಮಿತಿ ರಚಿತವಾಯಿತು.

ಸಾಮಾನ್ಯ ಓದುಗರು, ಅಧ್ಯಾಪಕ ಹಾಗೂ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಅವರ ದಿನನಿತ್ಯದ ಉಪಯೋಗಕ್ಕಾಗಿ ಒಂದು ಸಂಕ್ಷಿಪ್ತ ನಿಘಂಟನ್ನು ಸಿದ್ಧಪಡಿಸಬೇಕೆಂದು ತೀರ್ಮಾನಿಸಿ ೧೯೭೫ರಲ್ಲಿ ಈ ಸಮಿತಿ ೯೬೪ ಪುಟಗಳ ಗ್ರಂಥವನ್ನು ಪ್ರಕಟಿಸಿತು. ಬೃಹತ್ ಗಾತ್ರದ ನಿಘಂಟು ಬಳಸಲು ಆಗದವರಿಗೆ ಅನುಕೂಲವಾದ ಈ ನಿಘಂಟು ಉಪಯುಕ್ತವಾದುದಾಗಿದೆ.

೩. ಕನ್ನಡ ರತ್ನಕೋಶ ೧೯೭೭

ಕನ್ನಡ ನಿಘಂಟು ಪ್ರಮಾಣಭೂತ ಆಕರ ನಿಘಂಟಾಗಿದ್ದು ಬೃಹತ್ ಆಗಿದ್ದು ಸಾಮಾನ್ಯರು ಬಳಸಲು ಸಾಧ್ಯವಾಗುತ್ತಿರಲಿಲ್ಲ. ಅದರಲ್ಲೂ ಪ್ರೌಢಶಾಲೆಯ ವಿದ್ಯಾರ್ಥಿಗಳ ಮತ್ತು ಆ ಮಟ್ಟದ ಎಲ್ಲ ಅಭ್ಯಾಸಿಗಳ ಅಗತ್ಯವನ್ನು ಗಮನದಲ್ಲಿಟ್ಟುಕೊಂಡು, ಇಂಗ್ಲಿಶ್‌ನಲ್ಲಿ ಜನಪ್ರಿಯವಾಗಿರುವ ಜೆಮ್ ನಿಘಂಟಿನ ಮಾದರಿಯಲ್ಲಿ ಸಣ್ಣ ನಿಘಂಟೊಂದನ್ನು ಪ್ರಕಟಿಸಿತು. ಹಲವಾರು ಮುದ್ರಣಗಳನ್ನು ಕಂಡಿರುವ ಇದರಲ್ಲಿ ಕೇಂದ್ರ, ರಾಜ್ಯ ಸರ್ಕಾರಗಳ ಮತ್ತು ಪರಿಷತ್ತಿಗೆ ಸಂಬಂಧಿಸಿದಂತೆ ಕೆಲವೊಂದು ಉಪಯುಕ್ತ ಮಾಹಿತಿಗಳು ಕೊಟ್ಟಿರುವುದು ನಿಘಂಟಿನ ವಿಶೇಷತೆಯಾಗಿದೆ.

೪. ಜೈನಭಾರತ ರತ್ನಕೋಶ (೧೯೮೧)

ಜೈನ ಮತದ ವಿಶೇಷ ಪದಗಳನ್ನೊಳಗೊಂಡ 'ಜೈನಭಾರತ ರತ್ನಕೋಶ' ಎನ್ನುವ ನಿಘಂಟನ್ನು ೧೯೮೧ರಲ್ಲಿ ಪರಿಷತ್ತು ಪ್ರಕಟಿಸಿತು. ತ.ಸು.ಶಾಮರಾವ್ ಮತ್ತು ಪ.ನಾಗರಾಜಯ್ಯನವರ ಸಂಪಾದಕತ್ವದಲ್ಲಿ ಬಂದ ಈ ನಿಘಂಟು ಉಪಯುಕ್ತ ನಿಘಂಟಾಗಿದ್ದು, ಕನ್ನಡದಲ್ಲಿ ಧಾರ್ಮಿಕ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳಲು, ಜೈನ ಧರ್ಮದ ಪರಿಭಾಷೆಯನ್ನು ತಿಳಿಯಲು ಉಪಯುಕ್ತವಾಗಿದೆ.

೫. ಕೊಡವ ಕನ್ನಡ ನಿಘಂಟು (೧೯೮೩) (ಕೊಡವ ತಕ್ಕ್ ನಿಘಂಟ್)

ದ್ರಾವಿಡ ಭಾಷೆಯ ಉಪಭಾಷೆಗಳಲ್ಲಿ ಕೊಡವ ಭಾಷೆಯೂ ಒಂದು. ಕೊಡವ ಸಂಸ್ಕೃತಿ ವಿಶಿಷ್ಟವಾಗಿದ್ದು, ಕೊಡವ ಭಾಷೆಗೂ ಕನ್ನಡಕ್ಕೂ ನಿಕಟ ಸಂಬಂಧವಿದೆ. ಈ ಹಿನ್ನೆಲೆಯಲ್ಲಿ ೧೯೮೫ರಲ್ಲಿ ಪರಿಷತ್ತು ಕೊಡವ ಕನ್ನಡ ನಿಘಂಟನ್ನು ಪ್ರಕಟಿಸಿತು. ಲಿಪಿ ಇಲ್ಲದ ಕೊಡವ ಭಾಷೆಯ ೩೫೦೦ ಪದಗಳಿಗೆ ಕನ್ನಡದ ಅರ್ಥವನ್ನು ಹಾಗೂ ೫೨೦ ಕೊಡವ ಕುಟುಂಬದ ಹೆಸರುಗಳನ್ನು ಇಲ್ಲಿ ದಾಖಲಿಸಿದೆ. ಕೊಡಗು ಭಾಷಾ ತಜ್ಞರಾದ ಐ.ಯಂ.ಮುತ್ತಣ್ಣನವರು ರಚಿಸಿರುವ ಈ ನಿಘಂಟು ಉಪಭಾಷೆಗಳ ಕನ್ನಡ ನಿಘಂಟುಗಳ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿದೆ.

೬. ಕನ್ನಡ ಜಾನಪದ ವಿಶ್ವಕೋಶ ಸಂಪುಟ ೧ ಮತ್ತು ೨

ಚಂದ್ರಶೇಖರ ಕಂಬಾರರವರು ೧೯೮೫ರಲ್ಲಿ ಸಂಪಾದಿಸಿದ ಕನ್ನಡ ಜಾನಪದ ವಿಶ್ವಕೋಶದ ೨ ಸಂಪುಟಗಳು ಮಹತ್ವದವು. ಜಾನಪದ ಸಾಹಿತ್ಯ ಸಂಸ್ಕೃತಿಯ ವಿಷಯಗಳನ್ನೊಳಗೊಂಡ ಈ ವಿಶ್ವಕೋಶ ಸಂಪುಟಗಳು ಕನ್ನಡ ಸಂಸ್ಕೃತಿಯ ಹಿನ್ನೆಲೆಯಲ್ಲಿ ರಚನೆಯಾಗಿದ್ದು, ಪರಿಷತ್ತಿನ ಪ್ರಕಟಣೆಗಳಲ್ಲಿ ವಿಶೇಷವಾದುವುಗಳಾಗಿವೆ.

೭. ಅವಳಿ ಪಡೆನುಡಿ ಕೋಶ (೧೯೯೮)

ಸಾ.ಶಿ.ಮರುಳಯ್ಯ, ಉಮಾದೇವಿ ಮತ್ತು ಬಿ.ಆರ್.ಬಸವರಾಜು ಇವರು ಸಂಪಾದಿಸಿರುವ 'ಅವಳಿ ಪಡೆನುಡಿ ಕೋಶ'ವೊಂದನ್ನು ೧೯೯೮ರಲ್ಲಿ ಪರಿಷತ್ತು ಪ್ರಕಟಿಸಿದೆ. ಸುಮಾರು ೬೦೦ಕ್ಕೂ ಹೆಚ್ಚು ಪುಟಗಳ ವಿಸ್ತಾರವನ್ನು ಹೊಂದಿರುವ ಈ ನಿಘಂಟಿನಲ್ಲಿರುವ ಪಡೆನುಡಿಗಳಿಗೆ ಅರ್ಥ ಮತ್ತು ಉದಾಹರಣೆಗಳನ್ನು ನೀಡಲಾಗಿದೆ. ವಿದ್ಯಾರ್ಥಿಗಳಿಗೆ, ಅಭ್ಯಾಸಿಗಳಿಗೆ ಉಪಯುಕ್ತ ನಿಘಂಟಾಗಿದೆ.

೮. ಱಟ ನಿಘಂಟು (೨೦೦೦)

ಹಳಗನ್ನಡದಲ್ಲಿ ಉಲ್ಲೇಖವಾದ ಎರಡು ವಿಶೇಷ ಅಕ್ಷರಗಳು 'ಱ' 'ೞ'. ಹಳಗನ್ನಡದ ಱೞ ಸಹಿತ ಶಬ್ದಗಳಿಗೂ ರ ಳ ಸಹಿತವಾದ ಶಬ್ದಗಳಿಗೂ ಅರ್ಥಗಳಲ್ಲಿ ವ್ಯತ್ಯಾಸಗಳಿವೆ. ಇಂಥ ಪದಗಳನ್ನು ಅರ್ಥ ಮಾಡಿಕೊಳ್ಳಲು ಒಂದು ಕೋಶ ಅವಶ್ಯಕತೆಯನ್ನು ಮನಗಂಡ ಪರಿಷತ್ತು ಱೞ ನಿಘಂಟನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿ ಪ್ರಕಟಿಸಿದ್ದು, ಶಾಸ್ತ್ರೀಯವಾದ ರೀತಿಯಲ್ಲಿ ಱೞ ಶಬ್ದಗಳನ್ನು ಒಂದೆಡೆ ಕಲೆಹಾಕಿ ಅರ್ಥವಿವರಣೆಯನ್ನು ನೀಡಲಾಗಿದೆ. ಸುಮಾರು ಕ್ರಿ.ಶ. ೧೩೦೦ವರೆಗಿನ ಪ್ರಯೋಗಗಳಲ್ಲಿರುವ ೞ ಕಾರವನ್ನು, ಸುಮಾರು ೧೭೦೦ವರೆಗಿನ ಪ್ರಯೋಗಗಳಲ್ಲಿ ಱ ಕಾರವನ್ನು ಉಳಿಸಿಕೊಂಡ ಉಲ್ಲೇಖಗಳು ಮತ್ತು ಪ್ರಯೋಗಗಳನ್ನು ಕೊಟ್ಟು ಜ್ಞಾತಿ ಶಬ್ದಗಳನ್ನು ನಿಷ್ಪತ್ತಿ ಭಾಗದಲ್ಲಿ ಸೂಚಿಸಲಾಗಿದ್ದು, ಅಭ್ಯಾಸಿಗಳಿಗೆ ಬಹುಮುಖ್ಯ ಆಕರ ನಿಘಂಟಾಗಿದೆ.

೯. ಕನ್ನಡ-ಕನ್ನಡ-ಇಂಗ್ಲಿಶ್ ನಿಘಂಟು (೨೦೦೨)

'ಕನ್ನಡ-ಕನ್ನಡ-ಇಂಗ್ಲಿಶ್' ಎನ್ನುವ ದ್ವಿಭಾಷಾ ನಿಘಂಟನ್ನು ೨೦೦೨ರಲ್ಲಿ ಪರಿಷತ್ತು ಪ್ರಕಟಿಸಿದೆ. ಕನ್ನಡ ಪದಗಳ ಇಂಗ್ಲಿಶ್ ಲಿಪ್ಯಂತರ ಮತ್ತು ಕನ್ನಡದ ಅರ್ಥದ ಜೊತೆಗೆ ಇಂಗ್ಲಿಶ್‌ನಲ್ಲಿ ಅರ್ಥವನ್ನು ಈ ನಿಘಂಟಿನಲ್ಲಿ ಕೊಟ್ಟಿರುವುದರಿಂದಲೂ ಕನ್ನಡೇತರರು, ಭಾರತದ ಹಾಗೂ ವಿಶ್ವದ ವಿದ್ವಾಂಸರೆಲ್ಲ ಬಳಸಬಹುದಾಗಿದೆ.

೧೦. ಸಂಕ್ಷಿಪ್ತ ಕನ್ನಡ-ಇಂಗ್ಲಿಶ್ ನಿಘಂಟು (೨೦೦೩)

'ಸಂಕ್ಷಿಪ್ತ ಕನ್ನಡ-ಇಂಗ್ಲಿಶ್ ನಿಘಂಟು' ಎನ್ನುವ ದ್ವಿಭಾಷಾ ನಿಘಂಟನ್ನು ೨೦೦೩ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿತು. ಶಾಲಾ-ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳು, ಬೋಧಿಸುತ್ತಿರುವ

ಅಧ್ಯಾಪಕರು, ಕನ್ನಡ-ಇಂಗ್ಲಿಶ್ ಭಾಷೆಗಳಲ್ಲಿ ವ್ಯವಹರಿಸುವವರು, ಸಾಹಿತಿಗಳು ಅನುವಾದಕರಿಗೆ ಉಪಯುಕ್ತವಾಗುವಂತೆ ಇದನ್ನು ರಚಿಸಲಾಗಿದೆ. ಕನ್ನಡ ಪದ, ಅದರ ಇಂಗ್ಲಿಶ್ ಲಿಪ್ಯಂತರ, ಕನ್ನಡ ಅರ್ಥ, ಅದರ ಇಂಗ್ಲಿಶ್ ಅನುವಾದ ಕೊಟ್ಟಿರುವ ಈ ನಿಘಂಟಿನಲ್ಲಿ ಆಂಗ್ಲ ಸಮಾನಾರ್ಥಕ ಪದಗಳು ಇಲ್ಲದ ಕಡೆ ಸುಲಭವಾಗಿ ಅರ್ಥವಾಗುವಂತೆ ಇಂಗ್ಲಿಶ್‌ನಲ್ಲಿ ವಿವರಣೆ ಕೊಡಲಾಗಿದೆ. ೧೬೪೧ ಪುಟಗಳ ವಿಸ್ತಾರವನ್ನು ಹೊಂದಿದೆ.

೧೧. ಹಳಗನ್ನಡ ಪದಸಂಪದ (೨೦೦೭)

'ಹಳಗನ್ನಡ ಪದಸಂಪದ' ಎನ್ನುವ ನಿಘಂಟು ಸಂಪಾದಿಸಿದವರು ಪಿ.ವಿ.ನಾರಾಯಣ. ೨೦೦೭ರಲ್ಲಿ ಪ್ರಕಟವಾಗಿರುವ ಇದನ್ನು ಚಂಪೂ ಕೃತಿಗಳನ್ನೇ ಆಧರಿಸಿ ಸಿದ್ಧಪಡಿಸಲಾಗಿದೆ. ಈ ನಿಘಂಟಿನಲ್ಲಿ ಮೂವತ್ತೈದು ಸಾವಿರ ಉಲ್ಲೇಖಗಳಿವೆ. ೫೪೪ ಪುಟಗಳ ಈ ಕೋಶದಲ್ಲಿ ಅರ್ಥ ಸಂದಿಗ್ಧತೆಯ ಶಬ್ದಗಳನ್ನು ಅನುಬಂಧದಲ್ಲಿ ನೀಡಿರುವುದರಿಂದ ಬಳಸುವವರಿಗೆ ಉಪಯುಕ್ತವಾಗಿದೆ.

೧೨. ಕುಂಬಾರಿಕೆ ವೃತ್ತಿ ಪದಕೋಶ (೨೦೦೭)

'ಕುಂಬಾರಿಕೆ ವೃತ್ತಿ ಪದಕೋಶ' ಎನ್ನುವ ಪಾರಿಭಾಷಿಕ ಪದಕೋಶವನ್ನು ರಚಿಸಿದವರು ಬಸವರಾಜ ಕುಂಚೂರು. ೨೦೦೭ರಲ್ಲಿ ಪ್ರಕಟವಾದ ಈ ಕೋಶ ೧೭೮ ಪುಟಗಳ ವಿಸ್ತಾರವನ್ನು ಹೊಂದಿದೆ. ಕುಂಬಾರಿಕೆಗೆ ಸಂಬಂಧಿಸಿದಂತೆ ಚಿತ್ರವಿವರಣೆ ಸಮೇತ ಪದಗಳನ್ನು ವಿವರಿಸಲಾಗಿದೆ. ಕೇವಲ ಪದಗಳ ಅರ್ಥವನ್ನಷ್ಟೇ ಕೊಡದೆ ವಿವರಣೆಯನ್ನು ನೀಡಿರುವುದು, ಇತರೆ ಭಾಷೆಗಳಲ್ಲಿ (ತುಳು, ತೆಲುಗು, ಮರಾಠಿ) ಇರುವ ಕುಂಬಾರಿಕೆಗೆ ಸಂಬಂಧಿಸಿದ ಪದಗಳನ್ನು ಕೊಟ್ಟಿರುವುದು ಇದರ ವೈಶಿಷ್ಟ್ಯವಾಗಿದೆ.

೧೩. ವರ್ಗೀಕೃತ ಪದಕೋಶ (೧೯೯೪)

೧೯೯೪ರಲ್ಲಿ ಪ್ರಕಟವಾದ 'ವರ್ಗೀಕೃತ ಪದಕೋಶದ ಸಂಪಾದಕರು ಮ.ಪಾರ್ವತಮ್ಮ, ನಿ.ಉಮಾಕಾಂತ ಮತ್ತು ನಿ.ರಾಜಶೇಖರ. ಈ ಕೋಶದಲ್ಲಿ ಸುಮಾರು ೧೫೦೦೦ ಪದಗಳಿವೆ. ಇವೆಲ್ಲ ಕನ್ನಡ ಸಾಹಿತ್ಯದಲ್ಲಿರುವ ಸಾಮಾನ್ಯ ಪದಗಳಾಗಿವೆ. ಇವುಗಳಲ್ಲಿ ನಾಮಪದಗಳು, ಕ್ರಿಯಾಪದಗಳು, ವಿರುದ್ಧಾರ್ಥಕ ಪದಗಳು ಇವೆ. ಅಷ್ಟೇ ಅಲ್ಲದೆ ಸಮಾನಾರ್ಥ, ಸಮೀಪಾರ್ಥ, ವಿರುದ್ಧಾರ್ಥ ಮತ್ತು ಸವರ್ಗ ಪದಗಳಿವೆ. ಭೌತಶಾಸ್ತ್ರ, ಅಂಗಾಂಗಳು, ಭಾಷೆ-ಸಾಹಿತ್ಯ, ಪತ್ರಿಕೋದ್ಯಮ, ರಾಜ್ಯಾಡಳಿತ, ಪ್ರವಾಸ, ಧರ್ಮ, ಆರೋಗ್ಯ, ಆಹಾರ, ಕಾಲ, ಸಂಖ್ಯೆ, ಪ್ರಾಣಿ, ಸಸ್ಯ ಮೊದಲಾದ ೩೧ ವರ್ಗಗಳಲ್ಲಿ ಪದಗಳನ್ನು ವರ್ಗೀಕರಿಸಿ ಗುಂಪು ಮಾಡಿ ಪದಗಳನ್ನು ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

೧೪. ದ್ರಾವಿಡ ಭಾಷಾ ಜ್ಞಾತಿ ಪದಕೋಶ (೨೦೧೫)

ಮಾತೃಭಾಷೆಯ ಜೊತೆಗೆ ಕನ್ನಡದಲ್ಲಿ ತಿಳಿವಳಿಕೆ ಇರುವ ತಜ್ಞರಾದ ಹಂಪ ನಾಗರಾಜಯ್ಯ (ಕನ್ನಡ) ಎಂ.ಟಿ.ರತಿ(ಕೊಡಗು), ಸೆಲ್ವಕುಮಾರಿ(ತಮಿಳು), ಮೋಹನ ಕುಂಟಾರ್(ಮಲಯಾಳ),

ಜಿ.ಎಸ್.ಮೋಹನ್(ತೆಲುಗು), ಎ.ವಿ.ನಾವಡ (ತುಳು), ಪದ್ಮನಾಭ ಕೇಕುಣ್ಣಾಯ (ಹವ್ಯಕ), ಕೃಷ್ಣಪರಮೇಶ್ವರ ಭಟ್ಟ ಅವರ ಸಂಪಾದಕತ್ವದಲ್ಲಿ ೨೦೧೫ರಲ್ಲಿ ಪ್ರಕಟವಾಗಿರುವ ನಿಘಂಟು 'ದ್ರಾವಿಡ ಭಾಷಾ ಜ್ಞಾತಿ ಪದಕೋಶ'. ದ್ರಾವಿಡ ಭಾಷೆಯ ಪದಗಳ ಜ್ಞಾತಿಪದಗಳ ದಾಖಲಾತಿ, ಆಯಾ ಭಾಷೆಗಳ ಪದಗಳ ಉಚ್ಚಾರದ ರೀತಿಯನ್ನು ನೀಡಿರುವ ನಿಘಂಟು ಸುಮಾರು ನಾಲ್ಕು ಸಾವಿರ ಪದಗಳ ಅರ್ಥ ವಿವರಣೆಯನ್ನು ನೀಡಿದ್ದು, ಇತ್ತೀಚೆಗೆ ಪ್ರಕಟವಾದ ನಿಘಂಟುಗಳಲ್ಲಿ ವೈಶಿಷ್ಟ್ಯಪೂರ್ಣವಾದುದು.

ಹೀಗೆ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಪದ ಪರಂಪರೆಯನ್ನು ದಾಖಲಿಸುವ ನಿಟ್ಟಿನಲ್ಲಿ ಹಲವಾರು ನಿಘಂಟುಗಳನ್ನು ಪ್ರಕಟಿಸಿದೆ. ಈ ನಿಘಂಟು ಕೆಲಸ ಪರಿಷತ್ತಿಗೆ ಗೌರವವನ್ನು ತಂದುಕೊಟ್ಟಿದೆ. ಭಾಷೆಯ ಬೆಳವಣಿಗೆಯಲ್ಲಿ ಈ ನಿಘಂಟುಗಳು ತಮ್ಮದೇ ಆದ ಕಾಣಿಕೆಯನ್ನು ನೀಡಿವೆ.

### ೩.೩. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಬೆಳವಣಿಗೆಯ ಹಂತಗಳು

ನಿಘಂಟು ರಚನೆಗೆ ಕನ್ನಡ ಸಾಹಿತ್ಯ ಪರಿಷತ್ತು ಆದ್ಯತೆಯನ್ನು ಕೊಟ್ಟಿದ್ದು, ೧೯೧೫ರಲ್ಲಿ ಪರಿಷತ್ತಿನ ನಿಬಂಧನೆಗಳನ್ನು ಮೊದಲಿಗೆ ರಚಿಸಿದಾಗ ಅದರ ಧ್ಯೇಯೋದ್ದೇಶಗಳಲ್ಲಿ 'ಕನ್ನಡ ನಿಘಂಟುಗಳನ್ನು ಬರೆಸುವುದು ಅಥವಾ ಬರೆಯುವವರಿಗೆ ಸಹಾಯ ಮಾಡುವುದು' ಹಾಗೂ 'ನವೀನಶಾಸ್ತ್ರಗಳಿಗೆ ಸಂಬಂಧಪಟ್ಟ ಕನ್ನಡ ಗ್ರಂಥಗಳಲ್ಲಿ ಪ್ರಯೋಗಿಸಲು ಯೋಗ್ಯವಾದ ಪಾರಿಭಾಷಿಕ ಶಬ್ದಗಳ ಕೋಶಗಳನ್ನು ಪ್ರಕಟಿಸುವ ಎನ್ನುವ ಉದ್ದೇಶಗಳನ್ನು ಹೊಂದಿತ್ತು. ಇದು ಕನ್ನಡ ನಿಘಂಟು ರಚನೆಗೆ ಮೊದಲ ಕಾರಣವೆನ್ನಬಹುದು. ಆದಾದ ನಂತರ ೧೯೧೯ ಜುಲೈ ೨೭ರಂದು ರಾ.ರಘುನಾಥರಾವ್ ಅವರು "ಕನ್ನಡದಲ್ಲಿ ಮೂರು ಬಗೆಯ ನಿಘಂಟುಗಳಿರಬೇಕು. ಅವು ಯಾವುವೆಂದರೆ ಕನ್ನಡ-ಕನ್ನಡ ನಿಘಂಟು, ಕನ್ನಡ-ಇಂಗ್ಲಿಶ್ ನಿಘಂಟು ಮತ್ತು ಇಂಗ್ಲಿಶ್-ಕನ್ನಡ ನಿಘಂಟು. ಈ ಮೂರರಲ್ಲಿ ಎರಡನೆಯದನ್ನು ಮೊದಲು ಮಾಡಿಕೊಳ್ಳುವುದು ಉತ್ತಮ. ಇದು ಶಾಸ್ತ್ರೀಯ ಮಾರ್ಗದಲ್ಲಿ ರಚಿತವಾದರೆ ಉಳಿದೆರಡು ನಿಘಂಟುಗಳ ರಚನೆಗೆ ಬಹಳ ಸಹಾಯವಾಗುವುದು" ಎಂದು 'ಕರ್ನಾಟಕ ನಿಘಂಟುಗಳ ಸಂಸ್ಕರಣ' ಎನ್ನುವ ಉಪನ್ಯಾಸದಲ್ಲಿ ತಿಳಿಸಿದರು. ಈ ಉಪನ್ಯಾಸವು ಕನ್ನಡ ನಿಘಂಟು ರಚನೆಗೆ ಪ್ರೇರಣೆಯನ್ನು ನೀಡಿತು. ಆದಾದ ನಂತರ ೧೯೪೧ನೇ ಡಿಸೆಂಬರ್‌ನಲ್ಲಿ ಹೈದ್ರಾಬಾದ್‌ನಲ್ಲಿ ಸೇರಿದ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕ ಅಧಿವೇಶನದಲ್ಲಿ ರಂ.ಶ್ರೀ. ಮುಗಳಿ ಅವರು ಕನ್ನಡ ಕೋಶದ ರಚನೆಯ ಬಗ್ಗೆ ಒಂದು ನಿರ್ಣಯವನ್ನು ಮಂಡಿಸಿದರು. ಈ ನಿರ್ಣಯದಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಎ.ಆರ್.ಕೃಷ್ಣಶಾಸ್ತ್ರಿಯವರು ಅಧ್ಯಕ್ಷರಾಗಿದ್ದ ಈ ಸಮಿತಿಯಲ್ಲಿ ತೀ.ನಂ.ಶ್ರೀ. ಅವರು ಕಾರ್ಯದರ್ಶಿಗಳಾಗಿ ಡಿ.ಎಲ್.ನರಸಿಂಹಾಚಾರ್ ಹಾಗೂ ಕ.ವೆಂ.ರಾಘವಾಚಾರ್ಯ ಸದಸ್ಯರಾಗಿದ್ದರು. ೧೮-೧೨-೧೯೪೩ರಲ್ಲಿ ಮೊದಲ ಬಾರಿ ಸೇರಿದ ಸಂಪಾದಕ ಸಮಿತಿಯು ನಿಘಂಟು ರಚನಾ ಸ್ವರೂಪವನ್ನು

ನಿರ್ಧರಿಸಿ ಕನ್ನಡ ನಿಘಂಟಿನ 'ಎಂಟು ಪುಟಗಳ ಕರಡು ಪ್ರತಿ'ಯನ್ನು ಸಿದ್ಧಪಡಿಸಿತು. ಶಬ್ದಸಂಗ್ರಹಕ್ಕಾಗಿ ಪರಿಷತ್ತಿನಲ್ಲಿ ನಿಘಂಟು ಕಛೇರಿ ೨೭-೦೧-೧೯೪೪ರಂದು ಪ್ರಾರಂಭವಾಯಿತು.

ನಿಘಂಟು ರಚನೆಗೆ ಅತ್ಯವಶ್ಯವಾದ ಶಬ್ದ ಸಂಗ್ರಹ ಕಾರ್ಯದಲ್ಲಿ ನಾಡಿನ ಹಲವಾರು ವಿದ್ವಾಂಸರು ಪಾಲ್ಗೊಂಡರು. ೧೯೫೧ರ ವೇಳೆಗೆ ೯೦೩ ಗ್ರಂಥಗಳಿಂದ ಪ್ರಯೋಗಗಳನ್ನು ಸಂಗ್ರಹಿಸಿ, ಪಟ್ಟಿಕೆಗಳಲ್ಲಿ ಬರೆದಿಡಲಾಗಿತ್ತು. ಕನ್ನಡ ನಿಘಂಟಿನ ಮೊದಲ ಸಂಪುಟ ೧೯೭೦ರಲ್ಲಿ ಹೊರಬಂತು, ಕೊನೆಯ ಅಂದರೆ ಎಂಟನೆಯ ಸಂಪುಟ ೧೯೯೫ರಲ್ಲಿ ಪ್ರಕಟವಾಗುವುದರೊಂದಿಗೆ ಸುಮಾರು ಐವತ್ತು ವರ್ಷಗಳ ಸುದೀರ್ಘ ಯೋಜನೆ ಮುಕ್ತಾಯವಾಯಿತು. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟಿನ ಕೋಷ್ಟಕ ಈ ಕೆಳಕಂಡಂತಿದೆ.

| ಕ್ರಸಂ. | ಅಕ್ಷರಗಳು | ಪ್ರಕಟವಾದ ವರ್ಷ | ನಿಘಂಟು ಸಂಪಾದಕ ಮಂಡಳಿ ಅಧ್ಯಕ್ಷರು | ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು/ಆಡಳಿತಾಧಿಕಾರಿಗಳು |
|---|---|---|---|---|
| ೧ | ಅ-ಔ | ೧೯೭೦ | ಡಿ.ಎಲ್.ನರಸಿಂಹಾಚಾರ್ | ಜಿ.ನಾರಾಯಣ |
| ೨ | ಕ-ಗಾಡಿಕೆ | ೧೯೭೬ | ಎಂ.ಮರಿಯಪ್ಪ ಭಟ್ಟ | ಜಿ.ನಾರಾಯಣ |
| ೩ | ಗಾಢಿಸು -ತಿಮಿರ್ | ೧೯೭೭ | ಎಂ.ಮರಿಯಪ್ಪ ಭಟ್ಟ | ಜಿ.ನಾರಾಯಣ |
| ೪ | ತಿಮಿರ್ತ್ರ -ನಾಭಿ | ೧೯೭೯ | ಜಿ.ವೆಂಕಟಸುಬ್ಬಯ್ಯ | ಹಂಪ ನಾಗರಾಜಯ್ಯ |
| ೫ | ನಾಭಿಕಮಲ -ಪಳ್ಳನೆ | ೧೯೮೭ | ಜಿ.ವೆಂಕಟಸುಬ್ಬಯ್ಯ | ಅ.ರಾ.ಚಂದ್ರಹಾಸ ಗುಪ್ತ(ಆ.ಅ) |
| ೬ | ಪಾಲುಗ್ಗಮಣ -ಬಿಲ್ಲ | ೧೯೯೦ | ಜಿ.ವೆಂಕಟಸುಬ್ಬಯ್ಯ | ಜಿ.ಎಸ್.ಸಿದ್ಧಲಿಂಗಯ್ಯ |
| ೭ | ಬಿಲ್ಲ್ರ- ಲೌಹಿತ್ಯ | ೧೯೯೩ | ಎನ್.ಬಸವಾರಾಧ್ಯ | ಗೊ.ರು.ಚೆನ್ನಬಸಪ್ಪ |
| ೮ | ವ-ೞಾಂತ | ೧೯೯೫ | ಎನ್.ಬಸವಾರಾಧ್ಯ | ಸಾ.ಶಿ.ಮರಳಯ್ಯ |

## ೩.೪. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ರಚನೆಯ ಹಿನ್ನೆಲೆ

ಕನ್ನಡ ಭಾಷೆಯ ಇತಿಹಾಸದಲ್ಲಿ ಕಿಟೆಲ್ ನಿಘಂಟಿನ ಕೊಡುಗೆ ಒಂದು ಅದ್ಭುತವಾದ ಸಾಧನೆಯಾದರೂ ಅದು ಅಂದಿನ ಕಾಲಘಟ್ಟಕ್ಕಾಗಲೀ ಅಥವಾ ಮುಂದಿನ ಕಾಲಘಟ್ಟಕ್ಕಾಗಲೀ

ಅಗತ್ಯವಾಗಿದ್ದ ನಿಘಂಟಿನ ಎಲ್ಲಾ ಆವಶ್ಯಕತೆಗಳನ್ನು ಪೂರೈಸಿತು ಎಂದು ಹೇಳುವ ಹಾಗಿಲ್ಲ. ಇಂತಹ ಕೊರತೆ ಎಲ್ಲಾ ಭಾಷೆಗಳಲ್ಲಿಯೂ ಮತ್ತು ಎಲ್ಲಾ ಕಾಲಗಳಲ್ಲಿಯೂ ಇದ್ದರೆ ಮಾತ್ರ ನಿಘಂಟು ಕ್ಷೇತ್ರವೂ ಭಾಷೆಯ ಅಗತ್ಯಗಳನ್ನನುರಿಸಿ ಬೆಳೆದುಕೊಂಡು ಹೋಗಲು ದಾರಿಯಾಗುತ್ತದೆ. ಕಿಟೆಲ್ ನಿಘಂಟಿನ ಈ ಕೊರತೆ ಕನ್ನಡ ಸಾಹಿತ್ಯ ಪರಿಷತ್ತಿನ ಬೃಹತ್ ಸಂಪುಟಗಳ ರಚನೆಗೆ ಪ್ರೇರಣೆಯಾಯಿತು. ವೈಜ್ಞಾನಿಕ ನಿಯಮಗಳ ಹಿನ್ನೆಲೆಯಲ್ಲಿ ರಚನೆಯಾದ ಕಿಟೆಲ್ ಕೋಶವು ಕನ್ನಡ ನಿಘಂಟಿಗೆ ಮಾರ್ಗದರ್ಶಿಯಾಯಿತು.

ಕನ್ನಡ ನಿಘಂಟು ಬೆಳವಣಿಗೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಮುಖ್ಯವಾದುದು. ಇದು ಬೃಹತ್ತು ಮತ್ತು ಮಹತ್ತುಗಳೆರಡರಲ್ಲೂ ಅಪೂರ್ವವಾದುದು. ಈ ನಿಘಂಟು ಇಪ್ಪತ್ತನೇ ಶತಮಾನದ ಕನ್ನಡ ನಿಘಂಟು ಕ್ಷೇತ್ರದ ಅತ್ಯುನ್ನತ ಸಾಧನೆಗೆ ಉತ್ತಮ ತಳಹದಿಯನ್ನು ಒದಗಿಸಿತು.

**೩.೪.೧. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ರಚನೆಯ ಸ್ವರೂಪ**

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಯೋಜನೆಯು ಸುಮಾರು ೫೦ ವರ್ಷಗಳ ದೀರ್ಘ ಅವಧಿಯದಾಗಿದ್ದು, ಎಂಟು ಸಂಪುಟಗಳಲ್ಲಿ ಕನ್ನಡ ಪದವಿಸ್ತಾರವನ್ನು ಹೊಂದಿದೆ.

ನಿಘಂಟಿನ ಸ್ವರೂಪ ಎಂದರೆ ನಿಜವಾದ ರೂಪ, ಸ್ವಂತ ಆಕೃತಿ ಎಂದರ್ಥ. ಸಂಕ್ಷಿಪ್ತವಾಗಿ ಅರ್ಥ ಹೇಳುವುದು; ಪರ್ಯಾಯ ಪದಗಳನ್ನು ನೀಡುವುದು ನಿಘಂಟಿನ ಸಾಮಾನ್ಯ ಸ್ವರೂಪ. ಆದರೆ ವಿಶೇಷ ಉದ್ದೇಶದಿಂದ ಬಂದ ಕನ್ನಡ ನಿಘಂಟಿನ ಸ್ವರೂಪ ಉಳಿದ ನಿಘಂಟುಗಳಿಗಿಂತ ಭಿನ್ನವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಆಂತರಿಕ ಸ್ವರೂಪವನ್ನು ಗಮನಿಸಿದಾಗ ಪದಗಳಿಗೆ ಸಮಗ್ರ ಮಾಹಿತಿಯನ್ನು ನೀಡಿರುವುದರಿಂದ, ಅರ್ಥಸಾಧ್ಯತೆಗಳನ್ನು ಕೊಟ್ಟಿರುವುದರಿಂದ ಈ ನಿಘಂಟು ಮಹತ್ವದ್ದಾಗಿದೆ. ಇದರಿಂದ ನಿಘಂಟಿನಲ್ಲಿರುವ ಶಬ್ದಗಳ ಅರ್ಥ ಮತ್ತು ಮಿತಿಯನ್ನು, ಅದರ ಬಳಕೆಯನ್ನು ನಿರ್ಧರಿಸುವಲ್ಲಿ ಸಹಾಯವಾಗುತ್ತದೆ. ವ್ಯಾಪ್ತಿಯ ಮಾಹಿತಿಯ ಮೂಲವನ್ನು ಹುಡುಕುವುದಕ್ಕೆ ಇದು ಸಹಾಯಕವಾಗಿದೆ.

* ಒಂದು ನಿಘಂಟು ಯಾವಾಗಲೂ ಸಂಕ್ಷಿಪ್ತ ವಿವರಣೆಯನ್ನು ಹೊಂದಿದ್ದು, ಉತ್ತಮ ಅರ್ಥಗಳಿಂದ ಕೂಡಿರಬೇಕು ಎನ್ನುವ ಕಾರಣಕ್ಕೆ ಕನ್ನಡ ನಿಘಂಟಿನ ಸ್ವರೂಪ ಕೊನೆಯವರೆಗೂ ಒಂದೇ ಬಗೆಯದಾಗಿದ್ದು, ಆಕ್ಸ್‌ಫರ್ಡ್ ಮಾದರಿಯ ಫಾರಂನ್ನು ಎ.ಆರ್.ಕೃಷ್ಣಶಾಸ್ತ್ರಿಗಳು ಮಾಡಿದ್ದರು. ಇದರ ಆಧಾರದ ಮೇಲೆ ಹಲವು ವಿದ್ವಾಂಸರು ಸೇರಿ ರಚಿಸಿದ ಸಾಂಸ್ಥಿಕ ಪ್ರಯತ್ನವಾಗಿದೆ.

* ನಿಘಂಟಿನ ಪರಿವಿಡಿ ಹಾಗೂ ಸರಿಯಾದ ಅಡಿಟಿಪ್ಪಣಿಗಳು, ಓದುಗನಿಗೆ ನಿಘಂಟನ್ನು ಸುಲಭವಾಗಿ ಉಪಯೋಗಿಸುವುದಕ್ಕೆ ಸಹಾಯ ಮಾಡುತ್ತವೆ. ಈ ನಿಘಂಟಿನಲ್ಲಿ ಈ ಎಲ್ಲ ಅಂಶಗಳನ್ನು ಸ್ಪಷ್ಟವಾಗಿ ದಾಖಲಿಸಲಾಗಿದೆ.

* ಪದ, ವಿವರಣೆಯ ಪ್ರಸ್ತುತತೆಯ ಪರಿಣಾಮಕಾರಿತ್ವದಿಂದ ನಿಘಂಟಿನ ಮೌಲ್ಯ ಹೆಚ್ಚುತ್ತದೆ. ನಮೂದುಗಳ ಸಂಖ್ಯೆ, ಪ್ರಯೋಗಗಳ ಉಲ್ಲೇಖ, ಜ್ಞಾತಿಪದಗಳು ಮೊದಲಾದ ಅಂಶಗಳು ನಿಘಂಟಿನ ಬೆಲೆ ಹೆಚ್ಚಲು ಕಾರಣವಾದ ಅಂಶಗಳಾಗಿವೆ. ದಾಖಲಾದ ಎಲ್ಲಾ ಪದಗಳ ವ್ಯಾಖ್ಯಾನ, ವ್ಯಾಖ್ಯಾನದ ಪದ್ಧತಿ, ಸಮಾನಾರ್ಥಕ ಪದಗಳ ಹೇಳಿಕೆ, ಹೊಸ ಪದಗಳ ಸೇರ್ಪಡೆ ಮತ್ತು ಅರ್ಥ ಪದಗಳ ಬಳಕೆ ಮತ್ತು ಭೌಗೋಳಿಕ ಕ್ಷೇತ್ರ, ಸಮಾನಾರ್ಥಕ ಪದಗಳ ಸಂಖ್ಯೆ, ಪ್ರತಿ ಪದರ ವ್ಯುತ್ಪತ್ತಿಯ ಸೇರ್ಪಡೆಯ ಮಾಹಿತಿ, ಉಚ್ಚಾರಣೆಯ ವ್ಯತ್ಯಾಸಗಳು ಮೊದಲಾದ ಅಂಶಗಳನ್ನು ಒಳಗೊಂಡಿದೆ. ಇದು ಎನ್‌ಸೈಕ್ಲೋಪಿಡಿಕ್ ಮಾದರಿಯದು. ಪದದ ವಿವರಣೆಗೆ ಕವಿಗಳ, ಕಾವ್ಯಗಳ ಉಲ್ಲೇಖಗಳನ್ನು ಕಾಲಾನುಕ್ರಮದಲ್ಲಿ ನೀಡಲಾಗಿದೆ. ಇದರಿಂದ ಶಬ್ದಗಳ ಅರ್ಥವು ಖಚಿತವಾಗಿ ತಿಳಿಯುತ್ತದೆ. ಈ ನಿಘಂಟಿನಲ್ಲಿ ಒಂದು ಪದದ ವಿಭಿನ್ನ ಅರ್ಥಗಳು, ಅರ್ಥದ ನೆಲೆಗಳು, ಅರ್ಥಛಾಯೆಗಳು, ಕವಿವಾಕ್ಯದಿಂದಾಯ್ದ ಪ್ರಯೋಗಗಳು ಮೊದಲಾದವುಗಳ ವಿವರಣೆಗಳಿಂದ ಕೂಡಿದೆ. ಈ ಮೇಲಿನ ಎಲ್ಲ ಅಂಶಗಳನ್ನು ಕನ್ನಡ ನಿಘಂಟು ಹೊಂದಿರುವುದರಿಂದ ಉತ್ತಮವಾದ ನಿಘಂಟಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕನ್ನಡ ಭಾಷೆಯಲ್ಲಿಯ ನಿಘಂಟಿಮಗಳಿಗೆ ಅರ್ಥವಿವರಣೆಯನ್ನು ನೀಡುವುದರಿಂದ ಇದೊಂದು ಏಕಭಾಷಿಕ ನಿಘಂಟಾಗಿದೆ. ಇದರಲ್ಲಿ ಕನ್ನಡ ಭಾಷೆಯ ಶಬ್ದಗಳು, ಅವುಗಳ ಪರ್ಯಾಯ ರೂಪಗಳು, ಅರ್ಥವಿವರಣೆ, ವ್ಯುತ್ಪತ್ತಿ ಹಾಗೂ ವ್ಯಾಕರಣಾಂಶಗಳ ವಿವರಣಾತ್ಮಕ ಮಾಹಿತಿಯನ್ನು ನೀಡಲಾಗಿದೆ. ಅಲ್ಲದೇ ಈ ನಿಘಂಟು ಪದ ಮತ್ತು ಪದರೂಪಗಳ ಅರ್ಥದಲ್ಲಿ ಆದ ಬದಲಾವಣೆಗಳನ್ನು ಕಾಲಾನುಕ್ರಮವಾಗಿ ತೋರಿಸುತ್ತದೆ. ಅಂದರೆ ಪದದ ಅರ್ಥ ಮತ್ತು ಅರ್ಥದ ಬದಲಾವಣೆ ಇವುಗಳ ಕಡೆಗೆ ಗಮನ ಕೊಟ್ಟು ಕನ್ನಡ ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಅರಿತುಕೊಳ್ಳಲು ಕನ್ನಡ ನಿಘಂಟಿನ ಎಂಟು ಸಂಪುಟಗಳು ಉತ್ತಮ ಆಕರಗಳಾಗಿವೆ.

ಪ್ರಸ್ತುತ ಅಧ್ಯಯನ ವಿಷಯವಾದ ಕನ್ನಡ ನಿಘಂಟಿನ ಉದ್ದೇಶವೇನೆಂದರೆ ಈಗ ಬಳಕೆಯಲ್ಲಿರುವ ಮತ್ತು ಕಳೆದ ಸಾವಿರ ವರ್ಷದಲ್ಲಿ ಎಂದಾದರೂ ಬಳಕೆಯಲ್ಲಿತ್ತೆಂದು ತಿಳಿದುಬಂದಿರುವ ಕನ್ನಡ ಶಬ್ದಗಳ ಅರ್ಥ, ಮೂಲ, ಚರಿತ್ರೆಗಳನ್ನು ಪರ್ಯಾಪ್ತವಾಗುವಂತೆ ನಿರೂಪಿಸುವುದು.

ಈ ಹಿನ್ನೆಲೆಯಲ್ಲಿ ಕನ್ನಡ ನಿಘಂಟಿನ ಪರಿವಿಡಿ ಭಾಗದಲ್ಲಿರುವ ವಿಚಾರಗಳನ್ನು ಸಂಗ್ರಹಿಸಿ ಈ ಕೆಳಕಂಡ ಕೆಲವು ವಿಷಯಗಳನ್ನು ವಿವರಿಸಲಾಗಿದೆ.

ಪ್ರತಿಯೊಂದು ಶಬ್ದದ ವಿಷಯದಲ್ಲೂ ಅದು ಎಂದು, ಹೇಗೆ, ಯಾವ ರೂಪದಲ್ಲಿ ಯಾವ ಅರ್ಥದೊಂದಿಗೆ ಶಬ್ದವಾಯಿತು. ಅಲ್ಲಿಂದೀಚೆಗೆ ರೂಪದಲ್ಲೂ, ಅರ್ಥದಲ್ಲೂ ಅದು ಯಾವ ಬೆಳವಣಿಗೆಗಳನ್ನು ಪಡೆದಿದೆ. ಅದರ ಪ್ರಯೋಗಗಳಲ್ಲಿ ಯಾವುವು ಕಾಲಕ್ರಮದಲ್ಲಿ ಲೋಪವಾಗಿವೆ.

ಯಾವುವು ಇನ್ನೂ ಇವೆ, ಈಚೆಗೆ ಯಾವ ಹೊಸ ಪ್ರಯೋಗಗಳು ಯಾವ ವಿಧಾನಗಳಲ್ಲಿ ಬಂದಿವೆ ಎನ್ನುವುದನ್ನು ತೋರಿಸಲಾಗಿದೆ.

ಈ ಅಂಶಗಳಿಗೆಲ್ಲ ಉದಾಹರಣೆಯಾಗಿ, ನಮಗೆ ಗೊತ್ತಾಗಿರುವ ಮಟ್ಟಿಗೆ ಶಬ್ದ ಮೊಟ್ಟಮೊದಲು ಕಾಣಿಸಿಕೊಂಡಂದಿನಿಂದ ಪ್ರಾರಂಭಿಸಿ ಕೊನೆಯ ಸಲಕ್ಕೆ ಅಥವಾ ಇಂದಿನವರೆಗೆ ಮುಟ್ಟುವಂತೆ ಪ್ರಯೋಗ ಪರಂಪರೆಯನ್ನು ಕೊಡುವುದು. ಹೀಗೆ ಶಬ್ದ ತನ್ನ ಚರಿತ್ರೆಯನ್ನೂ, ಅರ್ಥವನ್ನೂ ತಾನೇ ಪ್ರದರ್ಶಿಸುವಂತೆ ಮಾಡಲಾಗಿದೆ.

ಪ್ರತಿಯೊಂದು ಶಬ್ದದ ರೂಪನಿಷ್ಪತ್ತಿಯನ್ನು ಕೇವಲ ಐತಿಹಾಸಿಕಾಂಶದ ಆಧಾರದ ಮೇಲೆಯೇ ಆಧುನಿಕ-ಭಾಷಾಶಾಸ್ತ್ರದ ಪದ್ಧತಿಗಳನ್ನು ಸಿದ್ಧಾಂತಗಳನ್ನು ಅನುಸರಿಸಿಯೇ ಪ್ರತಿಪಾದಿಸಲಾಗಿದೆ. ಇಲ್ಲಿ ಬಳಸಿರುವ ಪ್ರಯೋಗ ಸಂಪತ್ತು ವೈವಿಧ್ಯಮಯವಾಗಿದ್ದು, ಕನ್ನಡ ನುಡಿ ಸಂಪತ್ತಿನ ಸಾಕ್ಷಿಯಾಗಿರುವ ಪ್ರಯೋಗಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಈ ನಿಘಂಟಿನ ರಚನೆಗಾಗಿ ಕನ್ನಡ ಸಾಹಿತ್ಯವನ್ನು ಆಮೂಲಾಗ್ರವಾಗಿ ಗಮನಿಸಿ ನಂತರ ಪ್ರತಿ ಶಬ್ದಕ್ಕೂ ಅವಶ್ಯಕವಾದ ಪ್ರಯೋಗಗಳನ್ನು ನೀಡಲಾಗಿದೆ.

ಪರಿಷತ್ತಿಗೆ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ವಿದ್ವಾಂಸರು ಕಳುಹಿಸಿದ ಹಾಗೂ ನಿಘಂಟು ಕಛೇರಿಯಲ್ಲಿ ದಾಖಲಿಸಿದ ಪ್ರಯೋಗಗಳನ್ನು ಓದಿ, ವಿಂಗಡಿಸಿ, ವಿಭಜಿಸಿ, ಕ್ರಮವಾಗಿ ಜೋಡಿಸಿ ಅನವಶ್ಯಕವಾದವುಗಳನ್ನು ತೆಗೆದುಹಾಕಿ, ಬೇಕಾದವನ್ನು ಹೊಸದಾಗಿ ಸೇರಿಸಿ ಅದರಿಂದ ಶಬ್ದದ ಚರಿತ್ರೆಯನ್ನು ಪಡೆಯುವ ಕೆಲಸದ ಹೊರೆ ಹೆಚ್ಚಿತು. ಈ ಎಲ್ಲ ಹಂತಗಳನ್ನು ದಾಟಿ ಸರಿಯಾದ, ಸಮಗ್ರವಾದ ಭಾಷಾಜ್ಞಾನಕ್ಕೆ ಆಕರವಾದ ನಿಘಂಟನ್ನು ರಚಿಸಲು ಸುಮಾರು ಐವತ್ತು ವರ್ಷ ಬೇಕಾಯಿತು.

ಕನ್ನಡ ನಿಘಂಟಿನಲ್ಲಿ ಒಂದು ಪದದ ಅರ್ಥ ಕೊಡುವಾಗ ಐತಿಹಾಸಿಕವಾಗಿ ಅದರ ಅರ್ಥ ಕಾಲಕಾಲಕ್ಕೆ ಹೇಗೆ ಬದಲಾಯಿಸುತ್ತಾ ಹೋಯಿತೋ ಅದೇ ಕ್ರಮದಲ್ಲಿ ವ್ಯಾಖ್ಯೆಗಳನ್ನು ಜೋಡಿಸಿರುವುದರಿಂದ ಪದಗಳ ಅರ್ಥಭೇದಗಳನ್ನು ಹಾಗೂ ಛಾಯಾಭೇದಗಳನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಪದಗಳ ವ್ಯಾಖ್ಯೆ ಪ್ರಯೋಗಗಳಿಗೆ ಅಧಿಕೃತ ಮೂಲಗಳಿಂದ ನಿದರ್ಶನಗಳನ್ನು ಉಲ್ಲೇಖಿಸಿರುವುದರಿಂದ ಪದಗಳ ಅರ್ಥ ಹಾಗೂ ಪ್ರಯೋಗಗಳನ್ನು ಸರಿಯಾಗಿ ಗುರುತಿಸಬಹುದು.

ಕನ್ನಡ ನಿಘಂಟು ಭಾಷಾಶಾಸ್ತ್ರ ನಿಯಮಗಳಿಗೆ ಅನುಸಾರವಾಗಿ ರಚನೆಯಾಗಿದೆ. ಕನ್ನಡ ಜನತೆಯ ಇಂದಿನ ಆವಶ್ಯಕತೆಗಳಿಗೆ ತಕ್ಕಂತೆ, ವಿದ್ವತ್ತನ್ನು ಪ್ರತಿಬಿಂಬಿಸುವಂತೆ ಸಿದ್ಧವಾಗಿರುವ ಈ ನಿಘಂಟು ಕನ್ನಡಿಗರಿಗೆ ಅತ್ಯಂತ ಉಪಯುಕ್ತವಾದುದಾಗಿದೆ. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಪ್ರತಿನಿಧಿಯಾದ ಈ ನಿಘಂಟು ಇಷ್ಟು ದೊಡ್ಡ ಪ್ರಮಾಣದಲ್ಲಿ ಈ ವಿಧದಲ್ಲಿ ರಚಿತವಾಗಿರುವುದು ಇದೇ ಮೊದಲು. ನಿಘಂಟು ಕೇವಲ ನೀರಸವಾದ ಗಂಟಲ್ಲ ಎಂಬುದನ್ನು ತೋರಿಸಲು ಈ ನಿಘಂಟಿನಲ್ಲಿ ಕೊಟ್ಟಿರುವ ರಸವತ್ತಾದ ಪ್ರಯೋಗಗಳೇ ಸಾಕ್ಷಿಯಾಗಿವೆ.

ಆ ಕಾಲದಲ್ಲಿ ಶಾಸ್ತ್ರೀಯವಾದ ನಿಘಂಟನ್ನು ಕಿಟೆಲರು ಕೊಟ್ಟರೂ ಕನ್ನಡದ ಲಭ್ಯವಿರುವ ಎಲ್ಲ ಲಿಖಿತ ಗ್ರಂಥ ಭಂಡಾರದಿಂದ ಪದಗಳನ್ನು ಆಯ್ದು ಸಮಗ್ರ ನಿಘಂಟಿನ ಕೊರತೆ ನಿವಾರಿಸಬೇಕೆಂದು ಆಧುನಿಕ ವಿದ್ವಾಂಸರಿಗೆ ಅನಿಸಿತ್ತು.

ಈ ನಿಘಂಟು ಸುಮಾರು ೧೦,೦೦೦ ಪುಟಗಳವರೆಗೆ ಸುಮಾರು ೨ ಲಕ್ಷ ಪದಗಳನ್ನು ಒಳಗೊಂಡಿದೆ. ಈ ಬೃಹನ್ನಿಘಂಟು ಭಾಷೆ ಮತ್ತು ಸಾಹಿತ್ಯಾಸಕ್ತರ ಪಾಲಿಗೆ ಬಹುಮುಖ್ಯ ಪರಾಮರ್ಶನ ಗ್ರಂಥವಾಗಿದೆ.

**೩.೪.೨ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ವ್ಯಾಪ್ತಿ**

ನಿಘಂಟಿನ ವ್ಯಾಪ್ತಿಯು ಅದರ ವಿಸ್ತಾರ, ಶಬ್ದಗಳ ಅರ್ಥ ಮತ್ತು ಮಿತಿಯನ್ನು, ಅದರ ಬಳಕೆಯನ್ನು ನಿರ್ಧರಿಸುವಲ್ಲಿ ಸಹಾಯಕವಾಗುತ್ತದೆ. ವ್ಯಾಪ್ತಿಯಿಂದ ಮಾಹಿತಿಯ ಮೂಲವನ್ನು ಹುಡುಕುವುದಕ್ಕೆ ಅನುಕೂಲವಾಗುತ್ತದೆ. ಇದರಿಂದ ಬಳಕೆದಾರರಿಗೆ ತಾವು ಉಪಯೋಗಿಸುವ ನಿಘಂಟು ಯಾವ ಪ್ರಕಾರದ್ದು, ಯಾವ ಮಾಹಿತಿಯನ್ನು, ಎಷ್ಟು ಮಾಹಿತಿಯನ್ನು ಒಳಗೊಂಡಿದೆ ಎನ್ನುವುದು ತಿಳಿಯುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ವಿಶಾಲ ವ್ಯಾಪ್ತಿಯನ್ನು ಹೊಂದಿದ್ದು, ಬಳಕೆಯ ಸೂಚಿ ಸೇರಿದಂತೆ ಸುಮಾರು ಹತ್ತು ಸಾವಿರ ಪುಟಗಳ ವಿಸ್ತಾರವನ್ನು ಹೊಂದಿದೆ. ಅಲ್ಲದೇ ಪ್ರಾಚೀನ ಕಾಲದ ಕನ್ನಡದಿಂದ ಆಧುನಿಕ ಕಾಲದ ಹೊಸಗನ್ನಡದವರೆಗೆ ಹರಡಿರುವ ಶಬ್ದಸಂಪತ್ತನ್ನು ಒಳಗೊಂಡಿದೆ.

೧೯೪೧ರಲ್ಲಿ ಪ್ರಾರಂಭವಾದ ಈ ನಿಘಂಟಿನ ಕಾರ್ಯ ಭಾಗಭಾಗವಾಗಿ ಹೊರಬಂದು ೧೯೯೫ರಲ್ಲಿ ಎಂಟು ಸಂಪುಟಗಳಾಗಿ ಮುಕ್ತಾಯಗೊಂಡಿತು. ಈ ನಿಘಂಟಿನ ಪೀಠಿಕೆಯೇ ಸುಮಾರು ಇಪ್ಪತ್ತು ಪುಟಗಳ ವ್ಯಾಪ್ತಿಯನ್ನು ಹೊಂದಿದೆ. ಮೂಲ ನಿಘಂಟಿನ ವ್ಯಾಪ್ತಿ ಎಷ್ಟೆಂಬುದನ್ನು ತಿಳಿಯಲು, ಕನ್ನಡ ವರ್ಣಮಾಲೆಯ ಪ್ರತಿಯೊಂದು ಅಕ್ಷರವೂ ಇಲ್ಲಿ ಎಷ್ಟು ಪುಟಗಳ ವ್ಯಾಪ್ತಿ ಹೊಂದಿದೆ ಎನ್ನುವುದನ್ನು ನೋಡಬಹುದು.

ಈ ಕೆಳಗಿನ ಕೋಷ್ಟಕವನ್ನು ನೋಡಿದಾಗ ಅದರ ವ್ಯಾಪ್ತಿಯ ಅರಿವಾಗುತ್ತದೆ. ಈ ನಿಘಂಟಿನ ಸಂಪುಟಗಳ ವಿವರಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

ಕನ್ನಡ ನಿಘಂಟಿನ ಮೊದಲ ಸಂಪುಟವು ೧೯೭೦ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡ ಮಾಲೆಯ 'ಅ' ಅಕ್ಷರದಿಂದ 'ಔ' ಅಕ್ಷರದವರೆಗಿನ ಪದಗಳನ್ನು ದಾಖಲಿಸಿಲಾಗಿದೆ. ೧೩೭೦ ಪುಟಗಳ ವಿಸ್ತಾರವನ್ನು ಹೊಂದಿದೆ. ಮೊದಲ ಸಂಪುಟವನ್ನು ಕನ್ನಡ ಸಾಹಿತ್ಯ ಪರಿಷತ್ತಿನ

ಬಿ.ಎಂ.ಶ್ರೀಕಂಠಯ್ಯ ಅಚ್ಚುಕೂಟದಲ್ಲಿ ಮುದ್ರಿಸಲಾಯಿತು. ಇದರಲ್ಲಿ ದಾಖಲಾದ ಅಕ್ಷರಕ್ರಮ ಮತ್ತು ಅವು ಒಳಗೊಂಡ ಪುಟ ಸಂಖ್ಯೆಯನ್ನು ಈ ಕೆಳಗಿನಂತೆ ತೋರಿಸಲಾಗಿದೆ.

| ಕ್ರಸಂ. | ಅಕ್ಷರಗಳು | ಪುಟ ಸಂಖ್ಯೆ | ಮೊದಲ ಮತ್ತು ಕೊನೆಯ ಪದಗಳು | ಪುಟಗಳ ವಿಸ್ತಾರ |
|---|---|---|---|---|
| ೧. | ಅ | ೧-೫೫೫ | ಅ೧-ಅಬ್ವ್ರಿ | ೫೫೫ |
| ೨. | ಆ | ೫೫೬-೭೨೧ | ಆ೧-ಆಟ್ವಾರ್ | ೧೬೬ |
| ೩. | ಇ | ೭೨೨-೮೨೫ | ಇ೧-ಇಟ್ಬೊಮ್ಬು | ೧೦೪ |
| ೪. | ಈ | ೮೨೬-೮೪೧ | ಈ೧-ಈಟ್ತಲೆ | ೧೬ |
| ೫. | ಉ | ೮೪೨-೧೦೧೧ | ಉ೧-ಉಟ್ಬು | ೧೭೦ |
| ೬. | ಊ | ೧೦೧೨-೧೦೨೯ | ಊ೧-ಊಟುಗಗುವರ | ೧೮ |
| ೭. | ಋ | ೧೦೩೦-೧೦೩೫ | ಋ-ಋಷ್ಯಶೃಂಗ | ೬ |
| ೮. | ೠ | ೧೦೩೬ | ೠಕಾರ | ೧ |
| ೯. | ಌ | ೧೦೩೬ | ಌ ಕಾರ | ೧ |
| ೧೦. | ೡ | ೧೦೩೬ | ೡ ಕಾರ | ೧ |
| ೧೧. | ಎ | ೧೦೩೭-೧೧೩೯ | ಎ೧-ಎಟ್ಬು | ೧೦೩ |
| ೧೨. | ಏ | ೧೧೪೦-೧೧೭೩ | ಏ೧-ಏಟ್ಬೊಡೆವಾಳಿಸು | ೧೩೪ |
| ೧೩. | ಐ | ೧೧೭೪-೧೧೮೦ | ಐ೧-ಐಹಿಕಸೌಖ್ಯ | ೭ |
| ೧೪. | ಒ | ೧೧೮೧-೧೨೯೧ | ಒ೧-ಒಟ್ವೆ | ೧೧೧ |
| ೧೫. | ಓ | ೧೨೯೨-೧೩೧೬ | ಓ೧-ಓಟ್ | ೨೫ |
| ೧೬. | ಔ | ೧೩೧೭-೧೩೨೦ | ಔ೧-ಔಳಿ | ೪ |
| ೧೭. | ಂ | ೧೩೨೧ | ಅನುಸ್ವಾರ | ೧ |
| ೧೮. | ಃ | ೧೩೨೧ | ವಿಸರ್ಗ | ೧ |
| ೧೯. | ೱ | ೧೩೨೧ | ಜಿಹ್ವಾಮೂಲೀಯ | ೧ |
| ೨೦. | ೦ೲ | ೧೩೨೧ | ಉಪಾಧ್ಮಾನೀಯ | ೧ |

| | | | | |
|---|---|---|---|---|
| ೯. | ಟ | ೩೧೪೧-೩೧೬೦ | ಟ-ಟ್ರೈನು | ೨೦ |
| ೧೦. | ಠ | ೩೧೬೧-೩೧೬೬ | ಠ-ಠೌಳಿಗಾರ | ೬ |
| ೧೧. | ಡ | ೩೧೬೬-೩೧೯೯ | ಡ-ಡ್ರೈವರು | ೩೪ |
| ೧೨. | ಢ | ೩೧೯೯-೩೨೦೨ | ಢ-ಢೋಲು | ೪ |
| ೧೩. | ಣ | ೩೨೦೩ | ಣ-ಣಾಂತ | ೧ |
| ೧೪. | ತ | ೩೨೦೩-೩೪೮೨ | ತ್ರ-ತಿಮಿರ್ರ | ೨೮೦ |

ಕನ್ನಡ ನಿಘಂಟಿನ ನಾಲ್ಕನೇ ಸಂಪುಟವು ೧೯೭೯ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡ ಮಾಲೆಯ 'ತ' ಅಕ್ಷರದಿಂದ 'ನ' ಅಕ್ಷರದವರೆಗಿನ ಪದಗಳನ್ನು ದಾಖಲಿಸಿಲಾಗಿದೆ. ೧೦೧೮ ಪುಟಗಳ ವಿಸ್ತಾರವನ್ನು ಹೊಂದಿದೆ. ಈ ಸಂಪುಟವನ್ನು ಬೆಂಗಳೂರಿನ ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸಲಾಯಿತು. ಇದರಲ್ಲಿ ದಾಖಲಾದ ಅಕ್ಷರಕ್ರಮ ಮತ್ತು ಅವು ಒಳಗೊಂಡ ಪುಟ ಸಂಖ್ಯೆಯನ್ನು ಈ ಕೆಳಗಿನಂತೆ ತೋರಿಸಲಾಗಿದೆ.

| ಕ್ರಸಂ. | ಅಕ್ಷರಗಳು | ಪುಟ ಸಂಖ್ಯೆ | ಮೊದಲ ಮತ್ತು ಕೊನೆಯ ಪದಗಳು | ಪುಟಗಳ ವಿಸ್ತಾರ |
|---|---|---|---|---|
| ೧. | ತ | ೩೪೮೨-೩೭೫೨ | ತಿಮಿರ್ತ- ತ್ಸರು | ೨೭೧ |
| ೨. | ಥ | ೩೭೫೨-೩೭೫೫ | ಥ-ಥೋರಕುಚ | ೪ |
| ೩. | ದ | ೩೭೫೬-೪೧೬೮ | ದ-ದ್ವ್ಯಾಹಿಕಜ್ವರ | ೪೧೩ |
| ೪. | ಧ | ೪೧೬೮-೪೨೭೧ | ಧ-ಧ್ವಾನಿತ | ೧೦೪ |
| ೫. | ನ | ೪೨೭೨-೪೪೯೦ | ನ-ನಾಭಿ | ೨೧೯ |

ಕನ್ನಡ ನಿಘಂಟಿನ ಐದನೇ ಸಂಪುಟವು ೧೯೮೮ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡ ಮಾಲೆಯ 'ನ' ಅಕ್ಷರದಿಂದ 'ಪ' ಅಕ್ಷರದವರೆಗಿನ ಪದಗಳನ್ನು ದಾಖಲಿಸಿಲಾಗಿದೆ. ೯೮೦ ಪುಟಗಳ ವಿಸ್ತಾರವಿದೆ. ಈ ಸಂಪುಟವನ್ನು ಬೆಂಗಳೂರಿನ ಶ್ರೀ ಭಗವಾನ್ ಇಂಡಸ್ಟ್ರೀಸ್‌ನಲ್ಲಿ ಮುದ್ರಿಸಲಾಯಿತು. ಇದರಲ್ಲಿ ದಾಖಲಾದ ಅಕ್ಷರಕ್ರಮ ಮತ್ತು ಅವು ಒಳಗೊಂಡ ಪುಟ ಸಂಖ್ಯೆಯನ್ನು ಈ ಕೆಳಗಿನಂತೆ ತೋರಿಸಲಾಗಿದೆ.

| ಕ್ರಸಂ. | ಅಕ್ಷರಗಳು | ಪುಟ ಸಂಖ್ಯೆ | ವಿಶೇಷತೆ | ಪುಟಗಳ ವಿಸ್ತಾರ |
|---|---|---|---|---|
| ೧. | ನ | ೪೪೯೧-೫೦೧೮ | ನಾಭಿಕಮಲ-ನ್ರಿಪತಿ | ೫೨೭ |
| ೨. | ಪ | ೫೦೧೯-೫೪೭೨ | ಪ೧- ಪಟ್ಟಿಬಿನೆ | ೪೫೩ |

ಕನ್ನಡ ನಿಘಂಟಿನ ಆರನೇ ಸಂಪುಟವು ೧೯೯೦ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡ ಮಾಲೆಯ 'ಪ' ಅಕ್ಷರದಿಂದ 'ಬ' ಅಕ್ಷರದವರೆಗಿನ ಪದಗಳನ್ನು ದಾಖಲಿಸಿಲಾಗಿದೆ. ೧೦೦೭ ಪುಟಗಳ ಹರಹನ್ನು ಹೊಂದಿರುವ ಈ ಸಂಪುಟವನ್ನು ಬೆಂಗಳೂರಿನ ಶ್ರೀ ಭಗವಾನ್ ಇಂಡಸ್ಟ್ರೀಸ್‌ನಲ್ಲಿ ಮುದ್ರಿಸಲಾಯಿತು. ಇದರಲ್ಲಿ ದಾಖಲಾದ ಅಕ್ಷರಕ್ರಮ ಮತ್ತು ಅವು ಒಳಗೊಂಡ ಪುಟ ಸಂಖ್ಯೆ ಹೀಗಿವೆ.

| ಕ್ರಸಂ. | ಅಕ್ಷರಗಳು | ಪುಟ ಸಂಖ್ಯೆ | ಮೊದಲ ಮತ್ತು ಕೊನೆಯ ಪದಗಳು | ಪುಟಗಳ ವಿಸ್ತಾರ |
|---|---|---|---|---|
| ೧. | ಪ | ೫೪೭೩-೬೧೪೦ | ಪಾಉಗ್ಗಮಣ - ಪ್ಲೋಷ | ೬೬೮ |
| ೨. | ಫ | ೬೧೪೨-೬೧೬೨ | ಫ - ಫ್ರೋಕ್ತು | ೨೧ |
| ೩. | ಬ | ೬೧೬೨-೬೪೮೦ | ಬ - ಬಿಲ್ಲ | ೩೧೯ |

ಕನ್ನಡ ನಿಘಂಟಿನ ಏಳನೇ ಸಂಪುಟವು ೧೯೯೩ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡ ಮಾಲೆಯ 'ಬ' ಅಕ್ಷರದಿಂದ 'ಲ' ಅಕ್ಷರದವರೆಗಿನ ಪದಗಳನ್ನು ದಾಖಲಿಸಿಲಾಗಿದೆ. ೧೨೬೬ ಪುಟಗಳ ವಿಸ್ತಾರವನ್ನು ಹೊಂದಿದೆ. ಈ ಸಂಪುಟವನ್ನು ಬೆಂಗಳೂರಿನ ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸಲಾಯಿತು. ಇದರಲ್ಲಿ ದಾಖಲಾದ ಅಕ್ಷರಕ್ರಮ ಮತ್ತು ಅವು ಒಳಗೊಂಡ ಪುಟ ಸಂಖ್ಯೆಯನ್ನು ಈ ಕೆಳಗಿನಂತೆ ತೋರಿಸಲಾಗಿದೆ.

| ಕ್ರಸಂ. | ಅಕ್ಷರಗಳು | ಪುಟ ಸಂಖ್ಯೆ | ಮೊದಲ ಮತ್ತು ಕೊನೆಯ ಪದಗಳು | ಪುಟಗಳ ವಿಸ್ತಾರ |
|---|---|---|---|---|
| ೧. | ಬ | ೬೪೮೧-೬೬೮೩ | ಬಿಲ್ಲ್ರ -ಬ್ರೌಸು | ೨೦೩ |
| ೨. | ಭ | ೬೬೮೪-೬೮೦೪ | ಭ-ಭ್ರೂಸಂಜ್ಞೆ | ೧೨೧ |
| ೩. | ಮ | ೬೮೦೫-೭೫೦೦ | ಮ-ಮ್ಲೇಚ್ಛರಾಜ | ೬೯೬ |

| | | | | |
|---|---|---|---|---|
| ೪. | ಯ | ೭೫೦೧-೭೫೩೮ | ಯ-ಯೌರಾಜ್ಯಾಭಿಷೇಕ | ೩೮ |
| ೫. | ರ | ೭೫೩೯-೭೬೬೩ | ರ-ರ್‍ಯಾಗಟೆ | ೧೨೫ |
| ೬. | ಲ | ೭೬೬೩-೭೭೪೭ | ಲ-ಲೌಹಿತ್ಯ | ೮೫ |

ಕನ್ನಡ ನಿಘಂಟಿನ ಎಂಟನೇ ಸಂಪುಟವು ೧೯೯೫ರಲ್ಲಿ ಪ್ರಕಟವಾಯಿತು. ಇದರಲ್ಲಿ ಕನ್ನಡ ಮಾಲೆಯ 'ವ' ಅಕ್ಷರದಿಂದ 'ೞ' ಅಕ್ಷರದವರೆಗಿನ ಪದಗಳನ್ನು ದಾಖಲಿಸಿಲಾಗಿದೆ. ೧೨೭೩ ಪುಟಗಳ ವಿಸ್ತಾರವನ್ನು ಹೊಂದಿದೆ. ಈ ಸಂಪುಟವನ್ನು ಬೆಂಗಳೂರಿನ ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸಲಾಯಿತು. ಇದರಲ್ಲಿ ದಾಖಲಾದ ಅಕ್ಷರಕ್ರಮ ಮತ್ತು ಅವು ಒಳಗೊಂಡ ಪುಟ ಸಂಖ್ಯೆಯನ್ನು ಈ ಕೆಳಗಿನಂತೆ ತೋರಿಸಲಾಗಿದೆ.

| ಕ್ರಸಂ. | ಅಕ್ಷರಗಳು | ಪುಟ ಸಂಖ್ಯೆ | ಮೊದಲ ಮತ್ತು ಕೊನೆಯ ಪದಗಳು | ಪುಟಗಳ ವಿಸ್ತಾರ |
|---|---|---|---|---|
| ೧. | ವ | ೭೭೪೮-೮೦೬೧ | ವ-ವ್ರೈಹೇಯ | ೩೧೪ |
| ೨. | ಶ | ೮೦೬೨-೮೧೮೨ | ಶ-ಶ್ವೇತಾರ್ಜುನವೃಕ್ಷ | ೧೨೧ |
| ೩. | ಷ | ೮೧೮೨-೮೧೯೨ | ಷ-ಷ್ಠೀವನ | ೧೧ |
| ೪. | ಸ | ೮೧೯೩-೮೭೯೨ | ಸ-ಸ್ವೋಪಜ್ಞತೆ | ೫೭೦ |
| ೫. | ಹ | ೮೭೯೩-೯೦೧೪ | ಹ-ಹ್ಲಾದಿನಿ | ೨೫೨ |
| ೬. | ಳ | ೯೦೧೫ | ಳ-ಳತಾನೀಕ | ೧ |
| ೭. | ಱ | ೯೦೧೫-೯೦೨೦ | ಱ-ಱೌಂಕು | ೬ |
| ೮. | ೞ | ೯೦೨೧ | ೞ-ೞೂಂತ | ೧ |

ಹೀಗೆ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಶಬ್ದ, ಅರ್ಥ, ಪ್ರಯೋಗ, ಮಹತ್ವ ಮೊದಲಾದ ವಿಚಾರಗಳಿಂದ ಬಹುವ್ಯಾಪ್ತಿಯನ್ನು ಹೊಂದಿದ್ದು ಕನ್ನಡ ಭಾಷೆಯ ಸಮಸ್ತ ತಿಳಿವಿನ ಮೂಲ ಆಕರವಾಗಿದೆ.

### ೩.೪.೩. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಆಕರಗಳು

ಒಂದು ಭಾಷೆ ದೀರ್ಘಕಾಲ ಒಂದೇ ರೀತಿ ಇರಲು ಸಾಧ್ಯವಿಲ್ಲ. ಈ ಮಾತು ಕನ್ನಡ ಭಾಷೆಗೂ ಅನ್ವಯಿಸುತ್ತದೆ. ಎರಡು ಸಾವಿರ ವರ್ಷಗಳ ದೀರ್ಘ ಅವಧಿಯಲ್ಲಿ ಭಾಷೆ ಯಾವ ಯಾವ ಸ್ಥಿತ್ಯಂತರಗಳನ್ನು ಹೊಂದಿತು, ಭಾಷಾ ರೂಪಗಳು ಕಾಲದಿಂದ ಕಾಲಕ್ಕೆ ಅರ್ಥ ವೈಶಾಲ್ಯವನ್ನು, ಅರ್ಥ ಸಂಕುಚಿತತೆಯನ್ನು ಹೇಗೆ ಪಡೆದವು ಎಂಬುದನ್ನು ತಿಳಿಯಲು ಉಪಲಬ್ಧ ಶಾಸನಗಳು ಹಾಗೂ ಗ್ರಂಥಸ್ಥ ಕೃತಿಗಳೇ ಆಧಾರ. ಭಾಷೆಯನ್ನು ಕಾಲಾನುಕ್ರಮದಲ್ಲಿ ಮೂರು ಭಾಗಗಳಾಗಿ ಅಂದರೆ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂದು ಪ್ರತ್ಯೇಕಿಸಿ ಹಳಗನ್ನಡ ಸಾಹಿತ್ಯದಲ್ಲಿ ಜೈನರು, ನಡುಗನ್ನಡ ಸಾಹಿತ್ಯದಲ್ಲಿ ಶೈವರು ಅಥವಾ ಲಿಂಗಾಯತ, ಹೊಸಗನ್ನಡ ಸಾಹಿತ್ಯದಲ್ಲಿ ವೈಷ್ಣವರು ವಿಶೇಷವಾಗಿ ಕಾವ್ಯ ರಚಿಸಿದ್ದನ್ನು ಉಲ್ಲೇಖಿಸಿದ್ದಾರೆ.

ಸುಮಾರು ಹತ್ತನೇ ಶತಮಾನದಿಂದ ಹನ್ನೆರಡನೇ ಶತಮಾನದ ಮಧ್ಯದವರೆಗಿನ ಶೈಲಿ ಚಂಪೂವಾಗಿದ್ದು, ಹಳಗನ್ನಡದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದ ರೇಫ, ಶಕಟರೇಫ, ರಳ ಕುಳ ಕ್ಷಳ ಧ್ವನಿಗಳ ಬಗೆಗೆ ಅವಲೋಕಿಸಿ, ಅವುಗಳಿಂದ ಸಂಯೋಜಿತವಾದ ಶಬ್ದಗಳನ್ನು ಕೋಶದಲ್ಲಿ ಬಳಸಿದ್ದಾರೆ. ನಡುಗನ್ನಡ  ಕಾವ್ಯಗಳನ್ನು, ಹೊಸಗನ್ನಡ ಗದ್ಯ ಕೃತಿಗಳನ್ನು ಕೋಶರಚನೆಗೆ ಬಳಸಿದ್ದಾರೆ. ಪ್ರತಿನಿತ್ಯದ ಸಂಭಾಷಣೆ, ನ್ಯಾಯಾಲಯ ಹಾಗೂ ವ್ಯಾಪಾರ ಉದ್ಯೋಗಗಳಿಗೆ ಮಾಧ್ಯಮವಾದ ವಿಶಿಷ್ಟ ರೀತಿಯ ಹೊಸಗನ್ನಡ ಭಾಷೆಗೆ ಪ್ರಾತಿನಿಧಿಕವಾಗಿ ಆ ಕಾಲದ ಗದ್ಯಕೃತಿಗಳು ಹಾಗೂ ಶಾಲೆಯ ಪಠ್ಯಪುಸ್ತಕಗಳಲ್ಲಿ ಪ್ರಯೋಗಗೊಂಡಿರುವ ಪದಗಳನ್ನು ಉಲ್ಲೇಖಿಸಿದ್ದಾರೆ.

ಈ ನಿಘಂಟಿನ ರಚನೆಗಾಗಿ ಕನ್ನಡ ಸಾಹಿತ್ಯವನ್ನು ಆಮೂಲಾಗ್ರವಾಗಿ ಗಮನಿಸಿ ಶಬ್ದಗಳನ್ನು, ಅವಶ್ಯಕವಾದ ಪ್ರಯೋಗಗಳನ್ನು ಉದ್ಧರಿಸಲಾಗಿದೆ. ವೈವಿಧ್ಯಮಯವಾದ ಪದಸಂಪತ್ತನ್ನು ಹೊಂದಿರುವ ನಿಘಂಟು ವಿವಿಧ ಆಕರಗಳನ್ನು ಒಳಗೊಂಡಿದೆ. ಸುಮಾರು ಎರಡು ಸಾವಿರಕ್ಕಿಂತ ಅಧಿಕ ಆಕರ ಕೃತಿಗಳನ್ನು ಈ ನಿಘಂಟಿಗೆ ಬಳಸಿಕೊಳ್ಳಲಾಗಿದೆ. ಅಲ್ಲದೇ ಸುಮಾರು ೧೦೦೦೦ಕ್ಕೂ ಹೆಚ್ಚು ಶಾಸನಗಳನ್ನು ಬಳಸಿಕೊಳ್ಳಲಾಗಿದೆ. ಇವುಗಳನ್ನು ಈ ಕೆಳಕಂಡಂತೆ ವಿಂಗಡಿಸಲಾಗಿದೆ.

**ಶಾಸನಗಳು**

ಶಾಸನಗಳು ಐತಿಹಾಸಿಕ ಪರಂಪರೆಯ ರಚನೆಗೆ ದಾಖಲೆಗಳಾಗಿರುವಂತೆ ಭಾಷೆಯ ಅಧ್ಯಯನಕ್ಕೆ ಅತ್ಯಂತ ಉಪಯುಕ್ತ ಸಾಮಗ್ರಿಯಾಗಿವೆ. ಆರಂಭದಿಂದ ಮೊದಲ್ಗೊಂಡು ಹೊಸಗನ್ನಡ ಕಾಲದವರೆಗೂ ಬೆಳೆದುಕೊಂಡು ಬಂದಿರುವ ಭಾಷಾ ಪರಂಪರೆಯು ಹಲವಾರು ಆವಸ್ಥಾಂತರಗಳ ಅರಿವಿಗೆ ಇವು ಸಹಾಯಕವಾಗಿದೆ. ಅದೇ ರೀತಿ ಕನ್ನಡ ನಿಘಂಟಿನ ರಚನೆಗೆ ಶಾಸನಗಳು ಮೂಲ ಆಕರಗಳಾಗಿವೆ. ಶಾಸನಗಳಲ್ಲಿ ವ್ಯಕ್ತವಾಗಿರುವ ಆ ಕಾಲದ ಚಾರಿತ್ರಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವೈಲಕ್ಷಣಗಳಂತೆ ಭಾಷಿಕ ವೈಲಕ್ಷಣಗಳು ಪ್ರಮುಖವಾಗಿದ್ದು, ಶಾಸನಗಳಲ್ಲಿ ಆಯಾ ಕಾಲದ ಭಾಷಿಕ ವಿವರಗಳು ದೊರೆಯುತ್ತವೆ.

ಶಾಸನಗಳಲ್ಲಿ ಹಲವಾರು ರೀತಿಯ ಪದಗಳು ಕಂಡು ಬಂದಿದ್ದು, ನಮ್ಮ ಸಂಸ್ಕೃತಿಗೆ ಮಹತ್ವದ ಕೊಡುಗೆಯನ್ನು ನೀಡಿವೆ. ನಾಣ್ಯಗಳು, ಬಿರುದುಗಳು, ವಿದ್ಯಾಭ್ಯಾಸ, ಆಡಳಿತ, ಸಮಾಜ, ಮನೋರಂಜನೆ, ಕಲೆಗಳು, ಆಟಗಳು, ಪಾನೀಯ, ಪೂಜೆಗಳು, ವೃತ್ತಿ, ಅಳತೆ, ತೂಕ, ಯುದ್ಧ, ಹಣಕಾಸು ವ್ಯವಹಾರ, ಕುಟುಂಬ ವ್ಯವಸ್ಥೆ, ಆಭರಣ, ಹಬ್ಬಗಳು, ವ್ರತಗಳು, ತೆರಿಗೆಗಳು, ವಿವಾಹ ಮೊದಲಾದ ವಿಷಯಕ್ಕೆ ಸಂಬಂಧಿಸಿದ ವಿಶಿಷ್ಟ ಪದಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಇವುಗಳನ್ನು ಕನ್ನಡ ನಿಘಂಟಿನಲ್ಲಿ ದಾಖಲಿಸಲಾಗಿದೆ.

ಕನ್ನಡದ ಅತ್ಯಂತ ಪ್ರಾಚೀನ ಶಾಸನವಾದ ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದಿಂದ ಹಿಡಿದು ಕ್ರಿ.ಶ.೧೨೫೦ರ ಒಳಗೆ ರಚಿತವಾದ ಶಾಸನಗಳನ್ನು ಈ ನಿಘಂಟಿಗೆ ಶಬ್ದ ಸಂಗ್ರಹಿಸುವಲ್ಲಿ ಬಳಸಿಕೊಳ್ಳಲಾಗಿದೆ. ಶಾಸನ ಸಾಮಗ್ರಿಗೆ ಆಕರವಾದ ಕೃತಿಗಳನ್ನು ಇಲ್ಲಿ ದಾಖಲಿಸಲಾಗಿದೆ.

| | |
|---|---|
| The Indian Antiquary – I-LXII - | |
| Epigraphia Indica I – XXVI - | |
| Epigraphia Carnatica, I-XVI - | ಲೂಯಿ ರೈಸ್ ಮತ್ತು ಇತರರು |
| The Ethnographical Survey of Mysore – | ಹೆಚ್.ವಿ. ನಂಜುಂಡಯ್ಯ |
| Karnatak Inscriptions, I-IV – | (ಸಂ)(i-iii)ಆರ್.ಎಸ್. ಪಂಚಮುಖಿ |
| | (ಸಂ) (iv) ಎ.ಎಂ. ಅಣ್ಣಿಗೇರಿ |
| Kannada Inscriptions of Andhra Pradesh – | (ಸಂ) ಶ್ರೀನಿವಾಸಾಚಾರ್, |
| | ಪಿ.ಬಿ. ದೇಸಾಯಿ) |
| The Kannada Inscriptions of Koppal - | |
| Inscriptions in Northern Karnataka and | |
| The Kolhapur State - | |
| Mysore Archaelogical Reports (1908 – 1946) | |
| Mysore Gazatteer I-V - | ಸಿ. ಹಯವದನರಾವ್ |
| Mysore Gazatteer (Vol. I-II) - | ಬಿ. ಲೂಯಿಸ್ ರೈಸ್ |
| South Indian Inscriptions - (Vol. I-XX) | |
| Annual Report of the Archeological Department | |
| of H.E.H. the Nizam's Dominions - | (ಸಂ॥ ಪಿ. ಶ್ರೀನಿವಾಸಾಚಾರ್) |

A Corpus of Inscriptions in Telangana Districts

of H.E.H. the Nizam's Dominions VII, XII, XIII – (ಸಂ॥ ಪಿ. ಶ್ರೀನಿವಾಸಾಚಾರ್)

Inscriptions from Nanded Districts – ಸಂ॥ ಜ.ಸಿ. ಶೆಲ್ವ, ಶ್ರೀನಿವಾಸ ರಿತ್ತಿ

ಮೇಲಿನ ಶಾಸನಗಳಲ್ಲಿ ಉಲ್ಲೇಖವಾಗಿರುವ ಉದಾಹರಣೆಗಳನ್ನು ನೀಡಲಾಗಿದೆ.

೧. ಅಷ್ಟಗುಣ (ನಾ) ೧. ಎಂಟು ಮಡಿ ಹೆಚ್ಚಾಗಿರುವುದು (ಸೌಇ. IX-, ೪೭೧-೪೪; ೧೪೮೨) [೧-೪೭೭]

೨. ಕುಳಿಶಾಗರ (ನಾ) ೧. ವಜ್ರದಿಂದ ನಿರ್ಮಿತವಾದ ಮನೆ (ಎಕ. V.ಚನ್ನರಾ. ೧೪೮-೧೧, ೧೦೯೪) [೨-೧೯೯೧]

೩. ಗೊಪೆಯ (ನಾ).? : (ಎಕ. XIV. ಕೃಷ್ಣರಾ. ೨೮-೪೧:?) [೩-೨೬೧೦]

೪. ಚುಂಗಲ (ನಾ). ಒಂದು ಬಗೆಯ ಆಯುಧ (ಮುಬರಾ. XI. ೮೯-?:?) [೩-೨೮೬೦]

೫. ಜೋಗವಡ್ಡಿಗೆ, ಜೋಗವದ್ದಿಗೆ (ನಾ). (?) (ಸೌಇ. XX. ೨೦೨-೯೭ ; ೧೧೨೪) [೩-೩೧೦೯]

೬. ನಿಧಾನ (ನಾ). ೧. ಹುದುಗಿಟ್ಟ ಧನ, –ದ್ರವ್ಯ; (ಎಕ. XI. ಚಿತ್ರದು. ೪೯-೧೯; ೯೪೭) [೫-೪೬೧೦]

೭. ಪೆಬ್ಬೀಳ್ (ನಾ). ಒಂದು ಊರಿನ ಹೆಸರು : (ಎಇ. XVI. ತುಮಕೂ. ೯೬-೨. ಸು. 780) [೬-೫೮೦೯]

೮. ಮಹಾನಾಡು (ನಾ). ಪುರಸಭೆ; ಪೌರಸಂಸ್ಥೆ : (ಸೌಇ. IX-i, ೩೯೦-೬ ; ಸು. ೧೧೯೫) [೭-೬೯೯೬]

೯. ಸಂಕ್ರಾಂತಿ ಧವಳ = ಒಂದು ಬಿರುದು ; (ಎಇ. XIII. ೩೨೦-೩; 1125) [೮-೮೨೦೧]

ಶಾಸನಗಳು ಹಲವು ಭಾಷಾ ವೈಶಿಷ್ಟ್ಯಗಳನ್ನು ಹೊಂದಿವೆ. ಈ ನಿಘಂಟಿನಲ್ಲಿ ಬಳಸಿದ ಶಾಸನಗಳಲ್ಲಿರುವ ಪದಗಳು ಕ್ರಿಯಾಪದ, ನಾಮಪದ, ಸರ್ವನಾಮ, ಅವ್ಯಯ, ಗುಣವಾಚಕ ಮೊದಲಾದ ವ್ಯಾಕರಣ ವರ್ಗಕ್ಕೆ ಸೇರುತ್ತವೆ.

ಈ ನಿಘಂಟಿನಲ್ಲಿರುವ ಪದಗಳಿಂದ ಶಾಸನಗಳ ಭಾಷಾ ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ. ಭಾಷಿಕ ಅಧ್ಯಯನಕ್ಕೆ ಶಾಸನಗಳು ಆಕರ ಸಾಮಗ್ರಿಯಾಗಿರುವುದನ್ನು ಈ ನಿಘಂಟಿನಲ್ಲಿ ದಾಖಲಾದ ಪದಸಂಪತ್ತಿನಿಂದ ತಿಳಿಯಬಹುದು. ಈ ಶಾಸನ ಪದಗಳಿಂದ ಪ್ರಾಚೀನ ಸ್ಥಳನಾಮಗಳನ್ನು ಹಾಗೂ ವ್ಯಕ್ತಿನಾಮಗಳನ್ನು ಗುರುತಿಸಲು ಸಾಧ್ಯ. ರಾಜರ ಬಿರುದಾವಳಿಗಳಮ್ನು ವಿಶೇಷವಾಗಿ ದಾಖಲಿಸಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

**ಪೂರ್ವದ ಹಳಗನ್ನಡ ಸಾಹಿತ್ಯ ಕೃತಿಗಳು**

ಪ್ರಾರಂಭದಿಂದ ಕ್ರಿ.ಶ. ೯ನೇ ಶತಮಾನದವರೆಗೆ ಕಾಲವನ್ನು ಪೂರ್ವದ ಹಳಗನ್ನಡ ಎಂದು ಗುರುತಿಸಲಾಗಿದ್ದು, ಈ ಅವಧಿಯಲ್ಲಿ ರಚಿತವಾದ ಸಾಹಿತ್ಯ ಕೃತಿಗಳನ್ನು ಈ ನಿಘಂಟಿನ ಪದರಚನೆಗೆ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಮೇಲಿನ ಪೂರ್ವದ ಹಳಗನ್ನಡ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಪದಗಳನ್ನು ಉದಾಹರಣೆಯಾಗಿ ನೀಡಲಾಗಿದೆ.

೧. ಉರುಪಾರ (ನಾ). ದೂರದ ತೀರ : (ಕವಿರಾ. ೩-೨೩೦) [೧-೯೮೧)

೨. ಅಷ್ಟಚಾಪೋತ್ಸೇಧ (ನಾ) ಎಂಟು ಬಿಲ್ಲುಗಳ ಪ್ರಮಾಣದಷ್ಟು ಎತ್ತರ (ಮಲ್ಲಿಪು.೧೪-೧೮೭) [೧-೪೭೭]

೩. ಕೂರ್ಪ, ಕೂಪ (ನಾ). ಪ್ರೀತಿಸುವವನು, ಪ್ರಿಯ; ಕಾದಲ; ನೇಹಿಗ. (ವಡ್ಡಾರಾ. ೧೭೬/೨೨) [೨-೨೦೧೯]

೪. ನಿಲಿಸು, ನಿಲ್ಲಿಸು (ಕ್ರಿ) ೧. ಸ್ಥಾಪಿಸು; ೨. ಪ್ರತಿಷ್ಠೆಗೊಳಿಸು (ಚಾವುಂಪು. ೨೪) [೫-೪೭೧೯]

೫. ನೃಪತಿಸನಾಭಿ (ನಾ). ರಾಜನಿಗೆ ಸಮೀಪದ ಸಂಬಂಧಿ (ಕವಿರಾ೨-೨೨) [೫-೪೮೮೭]

೬. ಬಾಹಟ(ನಾ) ಒಬ್ಬ ಪ್ರಾಚೀನ ವೈದ್ಯನ ಹೆಸರು (ವಡ್ಡಾರಾ.ಟಿಪ್ಪಣಿ) [೬-೬೪೧೦]

೭. ಷಷ್ಠೋಪವಾಸ(ನಾ) ಆರು ದಿನಗಳ ಉಪವಾಸ (ಚಾವುಂಪು) [೮-೮೧೮೯]

ಕನ್ನಡ ಭಾಷಾಚರಿತ್ರೆಯಲ್ಲಿ ಹಲವು ಭಾಷಾವ್ಯತ್ಯಾಸಗಳ ಹಿನ್ನೆಲೆಯಲ್ಲಿ 'ಪೂರ್ವದ ಹಳಗನ್ನಡ' ಎನ್ನುವ ಕನ್ನಡದ ಒಂದು ಅವಸ್ಥೆಯನ್ನು ಗುರುತಿಸಲಾಗಿದ್ದು, ಈ ಕಾಲದ ಕಾವ್ಯಗಳಲ್ಲಿರುವ ಪದಗಳನ್ನು ಈ ನಿಘಂಟಿನಲ್ಲಿ ಬಳಸಲಾಗಿದ್ದು, ವೈವಿಧ್ಯಮಯವಾದ ಪದಸಂಪತ್ತನ್ನು ಹೊಂದಿದೆ.

**ಹಳಗನ್ನಡ ಸಾಹಿತ್ಯ ಕೃತಿಗಳು**

ಕ್ರಿ.ಶ. ೯ನೇ ಶತಮಾನದಿಂದ ಕ್ರಿ.ಶ. ೧೨ನೇ ಶತಮಾನದವರೆಗಿನ ಕಾಲವನ್ನು ಹಳಗನ್ನಡ ಎಂದು ಗುರುತಿಸಲಾಗಿದ್ದು, ಈ ಅವಧಿಯಲ್ಲಿ ರಚಿತವಾದ ಸಾಹಿತ್ಯ ಕೃತಿಗಳನ್ನು ಈ ನಿಘಂಟಿನ ರಚನೆಗೆ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಹಳಗನ್ನಡ ಕನ್ನಡ ಸಾಹಿತ್ಯದ ಅತ್ಯಂತ ಪ್ರಬಲ ಸಾಹಿತ್ಯ ಪ್ರಕಾರಗಳಲ್ಲಿ ಚಂಪೂ ಒಂದು. ಈ ಪ್ರಕಾರದಲ್ಲಿ ಪಂಪನ ಆದಿಪುರಾಣ ಹಾಗೂ ವಿಕ್ರಮಾರ್ಜುನವಿಜಯ, ಪೊನ್ನನ ಶಾಂತಿಪುರಾಣ, ರನ್ನನ ಅಜಿತ ತೀರ್ಥಂಕರ ಪುರಾಣ ತಿಲಕಂ ಹಾಗೂ ಸಾಹಸಭೀಮ ವಿಜಯಂ, ಒಂದನೆಯ ನಾಗವರ್ಮನ ಕರ್ಣಾಟಕ ಕಾದಂಬರಿ, ದುರ್ಗಸಿಂಹನ ಪಂಚತಂತ್ರ, ನಾಗಚಂದ್ರನ ರಾಮಚಂದ್ರಚರಿತಪುರಾಣ ಮೊದಲಾದ ಕಾವ್ಯಗಳಿಂದ ಈ ನಿಘಂಟಿಗಾಗಿ ಪದಗಳನ್ನು ಬಳಸಿಕೊಳ್ಳಲಾಗಿದೆ.

ಈ ನಿಘಂಟಿಗೆ ಬಳಸಿದ ಹಳಗನ್ನಡ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಕೆಲವು ಪದಗಳನ್ನು ಈ ಕೆಳಕಂಡಂತೆ ಉದಾಹರಣೆ ನೀಡಲಾಗಿದೆ.

೧. ಅಪವರ್ಗಮಾರ್ಗ (ನಾ). ಮೋಕ್ಷಮಾರ್ಗ: (ಸುಕುಮಾ.೪-೩) [೧-೨೯೧]

೨. ಅಪಸಿದ್ಧಾಂತ (ನಾ). ೧. ತಪ್ಪಾದ ನಿರ್ಣಯ, (ಅಜಿಪು.೧೨-೨೯) [೧-೨೯೨]

೩. ಎಣಗೋಣ (ನಾ) ವಕ್ರ; ಕೊಂಕು; ಬಿಂಕ: (ಧರ್ಮಾಮೃ. ೬-೨೧೭) [೧-೧೦೬೬]

೪. ಆದಿಮುನಿಪತಿ (ನಾ)= ಆದಿ ಜಿನ (ಆದಿಪು -೯-೮೮ ವ) [೧-.೬೧೩]

೫. ಊರ್ಧ್ವಗ (ಗು). ಮೇಲಕ್ಕೆ ಹೋಗುವ (ಶಾಂತಿಪು. ೪-೧೧೧) [೧-೧೦೨೩]

೬. ಚಪಲಾವೇಗ (ನಾ). ಮಿಚಿಚಿನ ವೇಗ (ಪಂರಾಮಾ. ೪-೧೦೩) [೩-೨೭೫೩]

೭. ತೂಂಕಡಿಸು, ತೂಕಡಿಸು (ಕ್ರಿ). ೧. ನಿದ್ರೆಯ ಭಾರದಿಂದ ತಲೆಯನ್ನು ತೂಗಾಡಿಸು (ಮದತಿ. ೧೦-೫೭) [೪-೩೫೭೭]

೮. ಪ್ರಸನ್ನ (ಗು.) ೧. ತಿಳಿಯದ ; ಸ್ವಚ್ಛವಾದ; ಕಶ್ಮಲವಿಲ್ಲದಿರುವ (ಛಂದೋಂಬು. ೧-೯೧) [೬-೬೦೬೪]

೯. ವಿಚ್ಛಿದುರ (ಗು) ಭಗ್ನವಾದ, ಛಿದ್ರಗೊಂಡ (ಪಂಪಭಾ. ೯-೫೯. ವ) [೮-೭೮೯೩]

ಬಹುಮುಖ್ಯವಾಗಿ ಈ ನಿಘಂಟನ್ನು ಬಳಸುವವರು ಪೂರ್ವದ ಹಳಗನ್ನಡ, ಹಳಗನ್ನಡ ಪದಗಳಲ್ಲಿ ಉಲ್ಲೇಖವಾಗಿರುವ ಪದಗಳ ಅರ್ಥಗಳನ್ನು, ಇತಿಹಾಸವನ್ನು, ಪ್ರಯೋಗಗಳನ್ನು ನೀಡಿರುವುದರಿಂದ ಇದು ಮಹತ್ವದ ನಿಘಂಟಾಗಿದೆ.

**ನಡುಗನ್ನಡ ಸಾಹಿತ್ಯ ಕೃತಿಗಳು**

ಕ್ರಿ.ಶ. ೧೨ನೇ ಶತಮಾನದಿಂದ ಕ್ರಿ.ಶ. ೧೯ನೇ ಶತಮಾನದವರೆಗಿನ ಕಾಲವನ್ನು ನಡುಗನ್ನಡ ಎಂದು ಗುರುತಿಸಲಾಗಿದ್ದು, ಈ ಅವಧಿಯಲ್ಲಿ ರಚಿತವಾದ ಸಾಹಿತ್ಯ ಕೃತಿಗಳನ್ನು ಈ ನಿಘಂಟಿನ ರಚನೆಗೆ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ವಚನಕಾರರ ವಚನಗಳು, ಹರಿಹರನ ರಗಳೆಗಳು, ಗಿರಿಜಾಕಲ್ಯಾಣ, ಶತಕ ಕೃತಿಗಳು, ಸೋಮೇಶ್ವರ ಶತಕ, ಹರಿಶ್ಚಂದ್ರ ಕಾವ್ಯ, ವೀರೇಶ ಚರಿತೆ, ದಾಸರ ಕೀರ್ತನೆಗಳು, ಸರ್ವಜ್ಞನ ವಚನಗಳು, ಭರತೇಶ ವೈಭವ ಮೊದಲಾದ ಕೃತಿಗಳನ್ನು ಬಳಸಿದ್ದಾರೆ. ನಡುಗನ್ನಡ ಕಾಲದಲ್ಲಿ ರಚನೆಯಾದ ಹಲವು ಗ್ರಂಥಗಳಲ್ಲಿ ಬಳಕೆಯಾದ ಪದಗಳನ್ನು ಈ ನಿಘಂಟಿನಲ್ಲಿ ಬಳಸಿಕೊಳ್ಳಲಾಗಿದೆ. ಕೆಲವು ಉದಾಹರಣೆಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

೧. ಉಚ್ಚಿ (ಅ). ನಾಯಿಗಳನ್ನು ಕರೆಯಲು ಬಳಸುವ ಅನುಕರಣ ಶಬ್ದ; (ಬಸಪು.೫೫-೪೭) [೧-೮೬೫)

೨. ಉಬುಬು (ಅ). ಸಂತೋಷ, ಸಂಭ್ರಮ (ವೀಶೈಪು.೪-೮-೧೦) [೧-೯೬೧]

೩. ಕುಳಿಸ (ನಾ). ೧. ನವರತ್ನಗಳಲ್ಲಿ ಒಂದು; ವಜ್ರ; (ಕಬ್ಬಿಕಾ.೩೬) [೨-೧೯೯೧]

೪. ಜುಮ್ಮೆನ್ (ಕ್ರಿ) ಜುಂ ಎಂದು ಶಬ್ದ ಮಾಡು; ಮೊರೆ (ಧರ್ಮಾಮೃಳ-೭೬) [೩-೩೦೮೮]

೫. ದರ್ಶನ (ನಾ) ೧. ನೋಡುವಿಕೆ; ಕಾಣುವಿಕೆ; ಅವಲೋಕನ; ನೋಟ: (ಪುರಂದ.೧-೨೫-೩)

[೪-೩೮೨೪]

೬. ನಿಲುಂಬು, ನಿಲುವು, (ಕ್ರಿ). ೧. ಒಟ್ಟುಗೂಡಿಸು ೨. ಒಟ್ಟು ಸೇರಿಸು (ರಾಜಶೇ.೧-೧೩೫೨)

[೫-೪೭೨೧]

೭. ಬಡಿವಡೆ, ಬಡಿಹಡೆ(ಕ್ರಿ), ಹೊಡೆತವನ್ನು ತಡೆ; ಏಟು ತಿನ್ನು; (ಜೈಮಿಭಾ. ೦೬-೪೨)

[೬-.೬೨೧೫]

೮. ಮಥಿಸು, ಮಥಿಯಿಸು (ಕ್ರಿ). ೧.ಕಡೆ ೨. ಮಂಥನ ಮಾಡು (ಸೋಮೇಶ್ವ೭೮)[೭-೬೮೯೧]

ಭಾಷೆಯ ಚಾರಿತ್ರಿಕ ಘಟ್ಟಗಳ ಹಿನ್ನೆಲೆಯಲ್ಲಿ ದಾಖಲಾದ ಪದಗಳು ವೈವಿಧ್ಯಮಯವಾಗಿದ್ದು, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಎಲ್ಲ ಕಾಲದ ಪದಗಳು ದೊರೆಯುತ್ತವೆ. ಈ ನಿಘಂಟು ಹಳಗನ್ನಡ, ನಡುಗನ್ನಡ ಪದಗಳಿಗೆ ಸೂಕ್ತವಾದ ನಿಘಂಟಾಗಿದ್ದು, ಹೇರಳವಾದ ಪದ ಉಲ್ಲೇಖಗಳು, ಪ್ರಯೋಗಗಳು ದೊರೆಯುವುದರಿಂದ ಇದು ವಿಶೇಷವಾದುದಾಗಿದೆ.

**ಹೊಸಗನ್ನಡ ಸಾಹಿತ್ಯ ಕೃತಿಗಳು**

ಹತ್ತೊಂಬತ್ತನೆಯ ಶತಮಾನದ ನಂತರದ ಕನ್ನಡ ಕೃತಿಗಳ ಭಾಷೆಯಲ್ಲಿ ಗಮನಾರ್ಹ ವ್ಯತ್ಯಾಸಗಳು ಕಂಡುಬಂದದ್ದರಿಂದ ಈ ಕನ್ನಡವನ್ನು ಹೊಸಗನ್ನಡ ಎಂದು ಕರೆಯಲಾಗಿದೆ. ಕ್ರಿ.ಶ. ೧೯ನೇ ಶತಮಾನದ ಆದಿಭಾಗದಿಂದ ಹೊಸಗನ್ನಡ ಎಂದು ಗುರುತಿಸಲಾಗಿದ್ದು, ಈ ಅವಧಿಯಲ್ಲಿ ರಚಿತವಾದ ಸಾಹಿತ್ಯ ಕೃತಿಗಳನ್ನು ಈ ನಿಘಂಟಿನ ರಚನೆಗೆ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ವಸ್ತು, ತಂತ್ರ, ಸಾಹಿತ್ಯ ಪ್ರಕಾರ ಮೊದಲಾದ ದೃಷ್ಟಿಯಿಂದ ಹೊಸಗನ್ನಡ ಸಾಹಿತ್ಯ ಪ್ರಕಾರವು ವೈವಿಧ್ಯಮಯವಾಗಿದ್ದು, ಈ ಹಿನ್ನೆಲೆಯಲ್ಲಿ ಹೊಸಗನ್ನಡ ಸಾಹಿತ್ಯ ಪ್ರಕಾರಗಳಾದ ಕಾವ್ಯ, ಕತೆ, ಕಾದಂಬರಿ, ವಿಮರ್ಶೆ, ಸಾಹಿತ್ಯ ಮೀಮಾಂಸೆ, ಪ್ರವಾಸ ಕಥನ, ಪ್ರಬಂಧ, ಸಂಪಾದನೆ ಮೊದಲಾದ ಪ್ರಕಾರಗಳಿಗೆ ಸೇರಿದ ಕೃತಿಗಳಿಂದ ಪದಗಳನ್ನು ಸಂಗ್ರಹಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ನಿಘಂಟಿಗೆ ಹೊಸ ಸಾಹಿತ್ಯ ಪ್ರಕಾರಗಳಿಂದ ಹೇರಳವಾಗಿ ಪದಗಳನ್ನು, ಪ್ರಯೋಗಗಳನ್ನು ಆಯ್ದುಕೊಳ್ಳಲಾಗಿದೆ.

ಹೊಸಗನ್ನಡ ಕಾಲದಲ್ಲಿ ಕಾವ್ಯ, ನಾಟಕ, ಕಾದಂಬರಿ, ಪ್ರಬಂಧ, ವಿಮರ್ಶೆ ಹೀಗೆ ವೈವಿಧ್ಯಮಯವಾದ ಸಾಹಿತ್ಯ ಪ್ರಕಾರಗಳಲ್ಲಿ ರಚನೆಯಾದ ಕೃತಿಗಳನ್ನು ಈ ನಿಘಂಟಿಗೆ ಆಕರ ಕೃತಿಗಳನ್ನಾಗಿ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಕೆಲವು ಪದಗಳನ್ನು ಉದಾಹರಣೆಯಾಗಿ ನೀಡಲಾಗಿದೆ.

೧. ಊರ್ಧ್ವಗಮ (ಗು). ಊರ್ಧ್ವಗ (ಶ್ರೀರಾಮಾ.೪೪೫-೩) [೧-೧೦೨೩]

೨. ಖಾಸಗಿ, ಕಾಸಗಿ (ಗು) ೧. ಸ್ವಂತದ; (ಸಸ್ಯಕ.೩೪) [೨-೨೩೩೮]

೩. ಚೀರಾಟ(ನಾ) ಕಿರಿಚಾಟ; ಕೂಗಾಟ (ಅಶ್ವತ್ಥಾ.೩-೪೪) [೩-೨೮೬೦]

೪. ದಾದಿ, ದಾಯಿ(ನಾ). ೧. ಸಾಕುತಾಯಿ ೨. ಮಕ್ಕಳನ್ನು ಸಾಕುವವಳು (ಗಿಳಿವಿಂ. ೩೫-೧) [೪-೩೮೬೧]

೫. ಪಿಚಕ್ (ನಾ) ಒಂದು ಅನುಕರಣ ಶಬ್ದ (ಮಲೆಮ.೬೫೮) [೬-೫೬೦೧]

೬. ಮನೆ (ನಾ); ವಾಸಿಸು ಜಾಗ; ಆಶ್ರಯಸ್ಥಾನ; (ತುಂಗಭ.೦೨೦) [೭-೬೯೨೭]

ಪೂರ್ವದ ಹಳಗನ್ನಡದಿಂದ ಹಳಗನ್ನಡಕ್ಕೆ, ಹಳಗನ್ನಡದಿಂದ ನಡುಗನ್ನಡಕ್ಕೆ, ನಡುಗನ್ನಡದಿಂದ ಹೊಸಗನ್ನಡಕ್ಕೆ ಪರಿವರ್ತನೆಯಾದ ಪ್ರಕ್ರಿಯೆಯನ್ನು ಪದಗಳ ಮೂಲಕ ಐತಿಹಾಸಿಕ ಭಾಷಾವಿಜ್ಞಾನದ ತತ್ವಗಳನ್ನು ಆಧರಿಸಿ ಕನ್ನಡ ನಿಘಂಟು ರಚನೆಯಾಗಿರುವುದನ್ನು ಈ ಅಧ್ಯಯನದಲ್ಲಿ ಗಮನಿಸಬಹುದಾಗಿದೆ.

**ನಿಘಂಟುಗಳು**

ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ನಿಘಂಟು ಪರಂಪರೆಯಲ್ಲಿ ೧೯೯೫ರವರೆಗೆ ರಚಿತವಾದ ಕನ್ನಡದ ಹಲವಾರು ನಿಘಂಟುಗಳಲ್ಲಿ ಅಡಕವಾಗಿರುವ ಪದಸಾಮಗ್ರಿಗಳನ್ನು, ಪ್ರಯೋಗಗಳನ್ನು ಬಳಸಿಕೊಂಡು ಕನ್ನಡ ನಿಘಂಟನ್ನು ರಚಿಸಲಾಗಿದೆ. ರನ್ನನ 'ರನ್ನಕಂದ'ದಿಂದ ಇತ್ತೀಚಿನ ಹಲವಾರು ನಿಘಂಟುಗಳನ್ನು ಆಕರ ಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ.

| | | |
|---|---|---|
| ಅಕಾರಾದಿ ನಿಘಂಟು | – | ಲಕ್ಷ್ಮಣ ಪಂಡಿತ |
| ಶಬ್ದಾರ್ಥಸಂಗ್ರಹ | – | ಟಿ.ಕೆ. ಅನಂತನಾರಾಯಣ |
| ಅಮರಕೋಶವೆಂಬ ನಾಮಲಿಂಗಾನುಶಾಸನವು | | (ಸಂ॥ ಲೂಯಿ ರೈಸ್) |
| ಜಗನ್ನಾಥವಿಜಯ ನಿಘಂಟು | – | ಸೋಸಲೆ ಅಯ್ಯಾಶಾಸ್ತ್ರಿ |
| ಇಂಗ್ಲಿಶ್ – ಕನ್ನಡ ನಿಘಂಟು | | |
| ಔಷಧಿಕೋಶಂ | – | (ಸಂ॥ ಎ.ವೆಂಕಟರಾವ್, ಎಚ್.ಶೇಷ ಅಯ್ಯಂಗಾರ್) |
| ಕರ್ಣಾಟಕ ನಿಘಂಟು | – | (ಸಂ॥ ಎಸ್.ಜಿ.ನರಸಿಂಹಾಚಾರ್, ಮಂ.ಆ.ರಾಮಾನುಜಯ್ಯಂಗಾರ್) |
| ಕರ್ನಾಟಕ ಶಬ್ದಕಲ್ಪದ್ರುಮ | – | ಹೆಸರುಘಟ್ಟದ ಹೊನ್ನಪ್ಪ |

| | | |
|---|---|---|
| ಕನ್ನಡ – ಕನ್ನಡ ಕಸ್ತೂರೀ ಕೋಶ | – | ಚೆ.ಎ.ಕವಲಿ |
| ಶಬ್ದಮಂಜರಿ ಕೋಶವು | – | ಗಂಗಾಧರ ಮಡಿವಾಳೇಶ್ವರ |
| ಶಬ್ದಸಂಗ್ರಹವು | – | ಗುರುರಾವ್ ವಿಠಲ ಮೊಹರೆ |
| ಚತುರಾಸ್ಯ ನಿಘಂಟು | – | ಚತುರಾಸ್ಯ ಬೊಮ್ಮರಸ (ಸಂ॥ ಎಸ್.ಜಿ.ನರಸಿಂಹಾಚಾರ್, ಮಂ.ಆ. ರಾಮಾನುಜಯ್ಯಂಗಾರ್) |
| ಕನ್ನಡ ಜಾನಪದ ಶಬ್ದಕೋಶ | – | ಬಿ.ಎಸ್.ಗದ್ದಗಿಮಠ |
| ಜೈನಧರ್ಮ ಪರಿಭಾಷೆ | – | ಮಹಾದೇವ ಪ್ರಭಾಕರ ಪೂಜಾರ |
| ತತ್ತ್ವಾಭಿನಯ ನಿಘಂಟು | | |
| ನಿಘಂಟುಗಳ ನಿಘಂಟು | – | (ಸಂ॥ಬೆಳ್ಳಾವೆ ವೆಂಕಟನಾರಾಯಣಪ್ಪ) |
| ಪಂಡಿತ ನಿಘಂಟು | – | ವಿ.ಡಿ.ಪಂಡಿತ್ |
| ಪಂಪಭಾರತದ ನಿಘಂಟು | – | (ಸಂ॥ಬೆಳ್ಳಾವೆ ವೆಂಕಟನಾರಾಯಣಪ್ಪ) |
| ಪತ್ರಿಕಾ ನಿಘಂಟು (ಇಂಗ್ಲಿಶ್–ಕನ್ನಡ) | – | (ಸಂ॥ ಎಲ್. ಗುಂಡಪ್ಪ) |
| ಪಾರಿಭಾಷಿಕ ನಿಘಂಟು – | | ಕೆ.ಆರ್.ಚಕ್ರವರ್ತಿ |
| ಕನ್ನಡ – ಕನ್ನಡ ನಿಘಂಟು – | | (ಸಂ॥ ಪಂಡಿತ ಪ್ರಭಣ್ಣ) |
| ಭಾರತ ನಿಘಂಟು | – | (ಸಂ॥ ಎಸ್.ಎನ್.ಕೃಷ್ಣಜೋಯಿಸ್) |
| ಕನ್ನಡ ನಿಘಂಟು | – | (ಸಂ॥ ಮಚ್ಚಿಮಲೆ ಶಂಕರ ನಾರಾಯಣರಾವ್, ಆರ್.ಎಸ್.ನಾವೂರುಕಾರ್, ಸೇಡಿಯಾಪು ಕೃಷ್ಣಭಟ್ಟ) |
| ರನ್ನಕಂದ | – | ರನ್ನ |
| ಕನ್ನಡ – ಕನ್ನಡ ಶಬ್ದಕೋಶ | – | ಎಚ್.ವಿ.ರಮಾಕಾಂತರಾವ್ |
| ಅಭಿಧಾನ ವಸ್ತುಕೋಶಂ | – | ನಾಗವರ್ಮ ॥ |
| ಶಬ್ದಮಂಜರಿ ಟೀಕು | – | ತೋಂಟದಾರ್ಯ(ಹೆಸರುಘಟ್ಟದ ಹೊನ್ನಪ್ಪ) |
| ಶಬ್ದವಿಹಾರ | – | ಡಿ.ಎಲ್.ನರಸಿಂಹಾಚಾರ್ |
| ಶಬ್ದಾನುಶಾಸನಂ | – | ಭಟ್ಟಾಕಳಂಕ (ಸಂ॥ ಆರ್.ನರಸಿಂಹಾಚಾರ್ಯ) |

| | | |
|---|---|---|
| ನಿಘಂಟು | – | ತಿರುಮಕೂಡ್ಲು ಶಾಮಣ್ಣ |
| ಶಿವಾನುಭವ ಶಬ್ದಕೋಶ | – | (ಸಂ. ಫ.ಗು.ಹಳಕಟ್ಟಿ) |
| ಷಟ್ಪದಿ ಕಾವ್ಯಗಳ ಕನ್ನಡ ನಿಘಂಟು | – | (ಸಂ॥ ಬೆಳ್ಳಾವೆ ವೆಂಕಟನಾರಾಯಣಪ್ಪ) |
| ಸಟೀಕ ಅಮರಕೋಶವು | – | ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿ |
| ಧನಂಜಯ ನಿಘಂಟು (ಸಟೀಕು) | | |
| ನಾನಾರ್ಥ ರತ್ನಾಕರ | – | ೨ನೇ ನಾಗವರ್ಮ |
| ನಾನಾರ್ಥ ರತ್ನಾಕರ ಟೀಕು | – | (ಸಂ. ತೋವಿನಕೆರೆ ರಾಯಣ್ಣ, ಹೆಸರಘಟ್ಟದ ಹೊನ್ನಪ್ಪ) |
| ನಾನಾರ್ಥ ಶಬ್ದಾವಳಿ ಮತ್ತು ಸಂಜ್ಞಾರ್ಥಗಳು | – | ಎ.ಪಿ.ನರಸಪ್ಪ |
| ಸಿರಿಗನ್ನಡ ಅರ್ಥಕೋಶ | – | ಶಿವರಾಮ ಕಾರಂತ |
| ಸಸ್ಯಗಳ ನಿಘಂಟು | – | ಹೆಚ್.ಕೆ.ಮಲ್ಲಿಕಾರ್ಜುನಪ್ಪ |
| Kannada – English Dictionary | – | ಎಫ್. ಕಿಟೆಲ್ |
| Kaanarese and English Dictionary | – | ಜಾನ್ ಗ್ಯಾರೆಟ್ |
| A Dictionary, Canarese and English | – | ಡೇನಿಯಲ್ ಸ್ಯಾಂಡರ್‌ಸನ್ |

ಈ ಮೇಲಿನ ನಿಘಂಟುಗಳಲ್ಲಿರುವ ಪದಗಳನ್ನು ಕನ್ನಡ ನಿಘಂಟಿನಲ್ಲಿ ದಾಖಲಿಸಲಾಗಿದೆ. ಕೆಲವೊಂದು ಉದಾಹರಣೆಗಳನ್ನು ಈ ಕೆಳಕಂಡಂತೆ ನೋಡಬಹುದು.

೧. ಅಮೃತ (ಗು). ೧. ಸತ್ತಿಲ್ಲದ ೨. ಸಾವಿಲ್ಲದ; ಶಾಶ್ವತವಾದ: (ವಸ್ತುಕೋ.೨೧-೧೯) [೧–೩೪೮]

೨. ಐಮುಸುಡ : ೨. "ಶಿವ" (ಪ್ರಭಣ್ಣ). [<ಅಯ್ದು+ಮುಸುಡು+-ಅ] [೧–೩೬೧]

೩. ಗಡ್ಡದಯ್ಯ = ೧. ಜೋಗಿ; ವಿರಕ್ತ; ಗಡ್ಡ ಬಿಟ್ಟವನು : (Beaver. ಇಂಕನಿ) [೨–೨೪೦೦]

೪. ಗೋದಾರಣಕ (ನಾ). ಗೋದಾವರ(ವಸ್ತುಕೊ. ೬೩-೬೯) [೩–೨೬೩೭]

೫. ದರದುಹುಂಡಿ (ನಾ). ಅಗತ್ಯವನ್ನು ಪೂರೈಸಲು ಕೊಟ್ಟ ಹುಂಡಿ. (Accommmdation Bill. ಇಕಂನಿ) [೪–೩೮೧೪]

೬. ಬಾಂಗರೆ (ನಾ). ಆಕಾಶದ ಅಂಚು; ದಿಗಂತ; ಕ್ಷಿತಿಜ : (Horizon. ಇಂಕನಿ) [೬–೬೩೫೧]

೭. ಮುಜರೆ, ಮುಜರಾ, ಮುಜುರೆ (ನಾ). ೧. (ಗೌರವಪೂರ್ವಕವಾಗಿ) ಬಿಟ್ಟುಕೊಡುವುದು; ಮಾಫಿ; ವಜಾ: (ಜಾನಕೋ.೩೨) [೭–೭೨೩೨]

೮. ಹೈತಿಗ್ನೆ (ನಾ). "ಒಂದು ವಿಧ ಕಬ್ಬು" (ಸೂಪಶಾ.ಕೋಶ) [೮–೮೯೭೦]

ನಿಘಂಟು ರಚನೆಯಾಗುವವರೆಗೆ ಕಂಡುಬಂದ ಪ್ರಾಚೀನ ಹಾಗೂ ಆಧುನಿಕ ಶಬ್ದಾರ್ಥಕೋಶಗಳಲ್ಲಿ ದಾಖಲಾದ ಪದಗಳನ್ನು ಈ ನಿಘಂಟಿನಲ್ಲಿ ದಾಖಲಿಸಲಾಗಿದೆ.

ಹೀಗೆ ಕನ್ನಡ ನಿಘಂಟಿನ ರಚನೆಗಾಗಿ ಕನ್ನಡ ಸಾಹಿತ್ಯವನ್ನು ಮೊದಲಿನಿಂದ ಕೊನೆಯವರೆಗೂ ಓದಿ ಸಾವಿರಾರು ಶಾಸನಗಳು ಹಾಗೂ ಗ್ರಂಥಗಳಿಂದ ಪದಗಳನ್ನು, ಆವಶ್ಯಕವಾದ ಪ್ರಯೋಗಗಳನ್ನು ಉದ್ಧರಿಸಲಾಗಿದೆ. ಪರಿಷತ್ತಿಗೆ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬಂದ ಪ್ರಯೋಗಗಳನ್ನು ಗಮನಿಸಿ ದಾಖಲು ಮಾಡಲಾಗಿದೆ.

ಕನ್ನಡ ನಿಘಂಟಿನಲ್ಲಿ ಒಂದು ಪದದ ಅರ್ಥ ಕೊಡುವಾಗ ಐತಿಹಾಸಿಕವಾಗಿ ಅದರ ಅರ್ಥ ಕಾಲಕಾಲಕ್ಕೆ ಹೇಗೆ ಬದಲಾಗುತ್ತಾ ಹೋಯಿತೋ ಅದೇ ಕ್ರಮದಲ್ಲಿ ವ್ಯಾಖ್ಯೆಗಳನ್ನು ಜೋಡಿಸಿರುವುದರಿಂದ ಪದಗಳ ಅರ್ಥಭೇದಗಳನ್ನೂ ಛಾಯಾಭೇದಗಳನ್ನೂ ಸುಲಭವಾಗಿ ಗುರುತಿಸಬಹುದಾಗಿದೆ. ಪದಗಳ ವ್ಯಾಖ್ಯೆ ಪ್ರಯೋಗಗಳಿಗೆ ಅಧಿಕೃತ ಮೂಲಗಳಿಂದ ನಿದರ್ಶನಗಳನ್ನು ಉಲ್ಲೇಖಿಸಿರುವುದರಿಂದ ಪದಗಳ ಅರ್ಥ ಹಾಗೂ ಪ್ರಯೋಗಗಳನ್ನು ಸರಿಯಾಗಿ ಗುರುತಿಸಲು ಈ ನಿಘಂಟು ಸಹಾಯಕವಾಗಿದೆ.

**ಕೊನೆಟಿಪ್ಪಣಿಗಳು**

೧. ಅಶ್ವತ್ಥನಾರಾಯಣ.ಜಿ. ೨೦೧೫, *ಕನ್ನಡ ಸಾಹಿತ್ಯ ಪರಿಷತ್ತು -೧೦೦*, ಪು.೩-೪

೨. ಅದೇ, ಪು.ಸಂ.೫

೩. ವೀರಣ್ಣ ರಾಜೂರ, ಜನವರಿ-ಜೂನ್, ೨೦೧೪, *ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ*, ಪು.೯

* * * *

# ಅಧ್ಯಾಯ ನಾಲ್ಕು

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನಾತ್ಮಕ, ಭಾಷಿಕ ವಿನ್ಯಾಸ ಮತ್ತು ವೈಶಿಷ್ಟ್ಯಗಳು

೪.೩.೧.೫. ಜ್ಞಾತಿ ಪದಗಳು

೪.೩.೧.೬. ಪ್ರತ್ಯಯಗಳು

೪.೩.೧.೭. ಅವ್ಯಯಗಳು

**೪.೨.೨. ಅರ್ಥ**

೪.೩.೨.೧ ಸಮಾನಾರ್ಥಕಗಳು

೪.೩.೨.೨. ನಾನಾರ್ಥಕಗಳು

೪.೩.೩.೩. ನಿಷೇಧಾರ್ಥಕಗಳು

**೪.೩.೩. ನುಡಿಗಟ್ಟುಗಳು**

**೪.೩.೪. ದ್ವಿರುಕ್ತಿಗಳು**

**೪.೩.೫. ಗಾದೆಗಳು**

**೪.೩.೬. ಸಂಕ್ಷಿಪ್ತಗಳು**

**೪.೩.೭. ಸಂಕೇತಗಳು**

**೪.೪. ಕನ್ನಡ ನಿಘಂಟಿನ ವೈಶಿಷ್ಟ್ಯಗಳು**

ಅಧ್ಯಾಯ ನಾಲ್ಕು

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನಾತ್ಮಕ, ಭಾಷಿಕ ವಿನ್ಯಾಸ ಮತ್ತು ವೈಶಿಷ್ಟ್ಯಗಳು

## ೪.೧. ಪೀಠಿಕೆ

ಪದಗಳು ಭಾಷೆಯ ಬಂಡವಾಳವಾಗಿದ್ದು, ಕಾಲ, ಸ್ಥಳ, ಸಂದರ್ಭಗಳಿಗನುಸಾರವಾಗಿ ಪದಗಳು ಬೇರೆ ಬೇರೆ ಅರ್ಥಗಳನ್ನು ಹೊಂದುತ್ತವೆ. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಯೊಡನೆ ಭಾಷಾ ಬೆಳವಣಿಗೆಯೂ ಸಂಭವಿಸುತ್ತದೆ. ವಲಸಿಗರಿಂದ, ಅನ್ಯದೇಶ್ಯ ಶಬ್ದಗಳು ಭಾಷೆಯೊಳಗೆ ಪ್ರವೇಶ ಪಡೆಯುವುದರಿಂದ ಒಂದು ಭಾಷೆಯ ಶೈಲಿ ಮತ್ತು ಶಬ್ದಾರ್ಥಗಳು ಬೇರೆಯೇ ರೂಪವನ್ನು ಪಡೆದುಕೊಳ್ಳುತ್ತವೆ. ಹೀಗೆ ಕಾಲದಿಂದ ಕಾಲಕ್ಕೆ ಭಾಷೆಯಲ್ಲಾಗುವ ಬದಲಾವಣೆಗಳನ್ನು ಅರ್ಥ ಮಾಡಿಕೊಳ್ಳಲು ನಮಗೆ ನಿಘಂಟುಗಳ ಸಹಾಯ ಅತ್ಯಗತ್ಯ ಈ ರೀತಿ ನಿಘಂಟುಗಳು ಒಂದು ಭಾಷೆಯಲ್ಲಿರುವ ಭಾಷಿಕಾಂಶಗಳನ್ನು ದಾಖಲಿಸಿರುವ ಕೈಪಿಡಿಗಳಾಗಿವೆ.

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕ್ರಿಯಾಪದ, ನಾಮಪದ, ಗುಣವಾಚಕ, ಅವ್ಯಯ, ಪ್ರತ್ಯಯ, ಸರ್ವನಾಮ, ಉಪಸರ್ಗ, ಸಂಕ್ಷೇಪಗಳು, ವಿರಾಮ ಚಿಹ್ನೆಗಳು, ಪ್ರಯೋಗಗಳ ಉಲ್ಲೇಖ, ಗಾದೆಗಳು, ನುಡಿಗಟ್ಟುಗಳು, ಅವ್ಯಯಗಳು ಮೊದಲಾದವುಗಳನ್ನು ಒಳಗೊಂಡ ಕನ್ನಡ ಭಾಷೆಯ ಸಮರ್ಥ ಕೈಪಿಡಿಯಾಗಿದ್ದು, ಕನ್ನಡ ನಿಘಂಟಿನ ರಚನಾತ್ಮಕ ಹಾಗೂ ಭಾಷಿಕ ವಿನ್ಯಾಸವನ್ನು ತಿಳಿಯುವುದು ಈ ಅಧ್ಯಾಯದ ಪ್ರಮುಖ ಉದ್ದೇಶವಾಗಿದೆ.

## ೪.೨. ಕನ್ನಡ ನಿಘಂಟಿನ ರಚನಾತ್ಮಕ ವಿನ್ಯಾಸ

ಪ್ರತಿಯೊಂದು ಕೃತಿಗೂ ಅದರದ್ದೇ ಆದ ಒಂದು ರಚನಾ ವಿನ್ಯಾಸವಿರುತ್ತದೆ. ನಿಘಂಟುಗಳು ಅದಕ್ಕೆ ಹೊರತಾದವುಗಳಲ್ಲ. ಪದಗಳನ್ನು ನೀಡುವ ಬಗೆ, ಅಕ್ಷರಗಳ ಗಾತ್ರ, ಅಂಕಣಗಳು, ಸಾಲುಗಳು, ಪುಟದ ಆಕಾರ ಹೀಗೆ ವಿವಿಧ ಅಂಶಗಳು ರಚನೆಯನ್ನು ಪ್ರಭಾವಿಸುತ್ತವೆ.

ಪ್ರಸ್ತುತ ಅಧ್ಯಯನ ವಸ್ತುವಾದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನೆಯನ್ನು ಕುರಿತಂತೆ ೧೯೪೧ನೆಯ ಇಸವಿ ಡಿಸೆಂಬರ್ ತಿಂಗಳಲ್ಲಿ ಹೈದರಾಬಾದಿನಲ್ಲಿ ಸೇರಿದ ಕನ್ನಡ ಸಾಹಿತ್ಯ ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ರಂ.ಶ್ರೀ.ಮುಗಳಿಯವರು ಮಾತನಾಡಿದರು.

ಕನ್ನಡ ಸಾಹಿತ್ಯ ಪರಿಷತ್ತು ಆ ಕಾರ್ಯವನ್ನು ಕೈಗೊಳ್ಳಬೇಕೆಂದು ಸೂಚಿಸಿದರು. ಅದರಂತೆ ಪರಿಷತ್ತು ಕನ್ನಡ ನಿಘಂಟು ರಚನಾಕಾರ್ಯವನ್ನು ಕೈಗೊಳ್ಳಬೇಕೆಂಬ ನಿರ್ಣಯ ಮಂಡನೆಯಾಯಿತು. ಆ ನಿರ್ಣಯವನ್ನು ಸಭೆಯು ಒಪ್ಪಿ ಒಂದು ಯೋಜನೆಯನ್ನು ಸಿದ್ಧಪಡಿಸಲು ರಂ.ಶ್ರೀ.ಮುಗಳಿಯವರ ಸಂಚಾಲಕತ್ವದಲ್ಲಿ ಒಂದು ಉಪಸಮಿತಿಯನ್ನು ರಚಿಸಿತು. ನಂತರದಲ್ಲಿ ಸುಮಾರು ೮೦ಕ್ಕೂ ಹೆಚ್ಚು ಜನ ವಿದ್ವಾಂಸರು ಈ ನಿಘಂಟಿನ ಶಬ್ದಸಂಗ್ರಹ ಕಾರ್ಯದಲ್ಲಿ ನೆರವಾಗಿದ್ದಾರೆ. ನಿಘಂಟು ರಚನಾ ಸಂದರ್ಭದಲ್ಲಿ ಈ ನಿಘಂಟಿನಲ್ಲಿ ದೇಶ್ಯ, ತದ್ಭವ ಶಬ್ದಗಳನ್ನು ಸೇರಿಸಿಕೊಂಡು ಐದು ಸಾವಿರ ಪುಟಗಳ ನಾಲ್ಕು ಸಂಪುಟಗಳನ್ನು ಹೊರತರಬೇಕೆಂದು ನಿರ್ಧರಿಸಲಾಗಿತ್ತು. ನಂತರ ಹಲವು ಜನರ ಸಲಹೆಯಂತೆ ಸಂಸ್ಕೃತ, ಅನ್ಯದೇಶ್ಯ ಶಬ್ದಗಳನ್ನು, ಧಾರ್ಮಿಕ, ದಾರ್ಶನಿಕ, ಪಾರಿಭಾಷಿಕ ಪದಗಳನ್ನೂ ಈ ನಿಘಂಟಿನಲ್ಲಿ ಸೇರಿಸಲಾಗಿದೆ. ಹಲ್ಮಿಡಿ ಶಾಸನದಿಂದ ಹಿಡಿದು ೧೯೫೦ರ ದಶಕದವರೆಗಿನ ಲಿಖಿತ ಗ್ರಂಥಗಳಿಂದ, ಆವರೆಗೆ ಬಂದ ನಿಘಂಟುಗಳಿಂದ ಮತ್ತು ಅಪ್ರಕಟಿತ ಕೃತಿಗಳಿಂದ ಪದಗಳನ್ನು ಸಂಗ್ರಹಿಸಿ ದಾಖಲಿಸಲಾಗಿದೆ.

ಧಾರ್ಮಿಕ ಶಬ್ದಗಳು, ಅಲಂಕಾರ, ಛಂದಸ್ಸು, ವ್ಯಾಕರಣ, ಕಾವ್ಯ ಮೀಮಾಂಸೆಯ ಪಾರಿಭಾಷಿಕ ಶಬ್ದಗಳು, ಸಂಗೀತ, ನೃತ್ಯ, ಶಿಲ್ಪ, ಚಿತ್ರ, ವಾಸ್ತು ಮುಂತಾದ ಕಲೆಗಳಿಗೆ ಸಂಬಂಧಿಸಿದ ಪದಗಳು, ಅಶ್ವಶಾಸ್ತ್ರ, ಗಜಶಾಸ್ತ್ರ, ಗಣಿತಶಾಸ್ತ್ರ, ಸೂಪಶಾಸ್ತ್ರ, ಕಾಮಶಾಸ್ತ್ರ, ಜ್ಯೋತಿಷ, ಖಡ್ಗನೀತಿ, ರಾಜನೀತಿ, ರತ್ನಪರೀಕ್ಷೆ, ತರ್ಕ, ನ್ಯಾಯ, ವೈದ್ಯ–ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಪಾರಿಭಾಷಿಕ ಪದಗಳನ್ನು, ವೈಜ್ಞಾನಿಕ ಪದಗಳನ್ನು ಹಾಗೂ ಕೆಲವು ಭಾಗದ ಆಡುನುಡಿಯ ಪದಗಳನ್ನು ಈ ನಿಘಂಟು ಒಳಗೊಂಡಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಶಬ್ದಗಳನ್ನು ಅವುಗಳ ಅರ್ಥಗಳನ್ನು, ಅವುಗಳಿಗೆ ಸಂಬಂಧಿಸಿದ ಪ್ರಯೋಗಗಳನ್ನು ಉಲ್ಲೇಖಿಸಿರುವ ರೀತಿ, ನಿಷ್ಪತ್ತಿ ಭಾಗವನ್ನು ಬರೆಯುವಾಗ ಅವಲಂಬಿಸಿರುವ ವಿಧಾನ ಮೊದಲಾದ ವಿವರಗಳೆಲ್ಲವೂ ವ್ಯವಸ್ಥಿತವಾದ ಕ್ರಮದಲ್ಲಿದ್ದು, ಅದರ ರಚನಾ ವಿನ್ಯಾಸವನ್ನು ಈ ಕೆಳಕಂಡಂತೆ ನೀಡಲಾಗಿದೆ.

೧. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಎಂಟು ಸಂಪುಟಗಳು ೧೯೭೦–೧೯೯೫ರ ಅವಧಿಯಲ್ಲಿ ಪ್ರಕಟವಾಗಿದೆ.

೨. ಇದು ೯೦೨೧ ಪುಟಗಳ ವಿಸ್ತಾರವಾದ ಪದವ್ಯಾಪ್ತಿಯನ್ನು ಹೊಂದಿದ್ದು, ಇತರೆ ವಿವರಗಳು ಸೇರಿದಂತೆ ಹತ್ತು ಸಾವಿರ ಪುಟಗಳ ಬಹುವ್ಯಾಪ್ತಿಯನ್ನು ಹೊಂದಿದೆ.

೩. ಕನ್ನಡ ನಿಘಂಟನ್ನು ಆಕ್ಸ್‌ಫರ್ಡ್ ಡಿಕ್ಷನರಿಯ ಮಾದರಿಯಲ್ಲಿ ರೂಪಿಸಲಾಗಿದೆ.

೪. ಕನ್ನಡ ನಿಘಂಟು ಡೆಮಿ ಚತುಷ್ಪತ್ರ (೧/೪) ಆಕಾರದಲ್ಲಿ ಪ್ರಕಟವಾಗಿದೆ.

೫. ಪ್ರತಿ ಪುಟದಲ್ಲಿಯೂ ಎರಡೆರಡು 'ಕಾಲಂ' (ಸ್ತಂಭ)ಗಳಿದ್ದು, ಒಂದೊಂದು ಕಾಲಂನಲ್ಲಿ ನಲವತ್ತಾರು ಸಾಲುಗಳಿವೆ.

೬. ಈ ನಿಘಂಟು ಶಬ್ದಸಂಗ್ರಹ, ಮುಖ್ಯ ಉಲ್ಲೇಖಗಳು, ಚಾರಿತ್ರಿಕ ವಿಧಾನ, ಪ್ರಯೋಗಗಳನ್ನು ಸೂಚಿಸಿರುವ ರೀತಿ, ನಿಷ್ಪತ್ತಿ ವಿಧಾನ, ವಿರಾಮ ಚಿಹ್ನೆಗಳು, ಅಕ್ಷರಗಳ ಗಾತ್ರ, ಇತರ ಅಂಶಗಳು ಎನ್ನುವ ರಚನಾಕ್ರಮವನ್ನು ಹೊಂದಿದ್ದು, ಈ ಕೆಳಕಂಡಂತೆ ವಿವರಣೆಯನ್ನು ನೀಡಲಾಗಿದೆ.

### ೪.೨.೧. ಶಬ್ದಸಂಗ್ರಹ

ಕನ್ನಡ ನಿಘಂಟು ಕನ್ನಡ ಶಬ್ದಕೋಶಗಳಲ್ಲಿ ವಿಸ್ತಾರವಾದ ಕೋಶವಾಗಿದ್ದು, ಕರ್ನಾಟಕದ ಬೇರೆ ಬೇರೆ ಭಾಗದ ಶಬ್ದಸಂಪತ್ತನ್ನು ಒಳಗೊಂಡು ವಿಸ್ತಾರ ವ್ಯಾಪ್ತಿಯನ್ನು ಹೊಂದಿದೆ. ಈ ನಿಘಂಟು ಹೊಂದಿರುವ ಶಬ್ದಸಂಪತ್ತನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

೧. ಕನ್ನಡ ಸಾಹಿತ್ಯವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಪರಿಶೋಧಿಸಿ ಪ್ರಯೋಗಗಳನ್ನು ವಿಪುಲವಾಗಿ ಸಂಗ್ರಹಿಸಿ ಗ್ರಾಮ್ಯವಲ್ಲದ ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನು ಈ ನಿಘಂಟಿನಲ್ಲಿ ಸೇರಿಸಲಾಗಿದೆ.

೨. ಕನ್ನಡದ ಅತ್ಯಂತ ಪ್ರಾಚೀನ ಶಾಸನವಾದ ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದಿಂದ ಹಿಡಿದು ಸುಮಾರು ೧೯೫೦ರ ದಶಕದವರೆಗೆ ಪ್ರಕಟವಾದ ಗ್ರಂಥಗಳ ಶಬ್ದಗಳನ್ನು ಸಂಗ್ರಹಿಸಲಾಗಿದೆ.

೩. ಕ್ರಿ.ಶ. ೧೦೫೦ರ ಒಳಗೆ ರಚಿತವಾದ ಕನ್ನಡ ಗ್ರಂಥಗಳಲ್ಲೂ, ಶಾಸನಗಳಲ್ಲೂ ದೊರೆಯುವ ಸಂಸ್ಕೃತ, ದೇಶ್ಯ, ಅನ್ಯದೇಶ್ಯ, ತತ್ಸಮ, ತದ್ಭವ ಶಬ್ದಗಳನ್ನೂ ಅಲ್ಲಿಂದ ಮುಂದಕ್ಕೆ ಕ್ರಿ.ಶ. ೧೨೫೦ರ ಒಳಗೆ ರಚಿತವಾದ ಎಲ್ಲ ಗ್ರಂಥಗಳನ್ನು ಶಾಸನಗಳನ್ನು ಶೋಧಿಸಿ, ರೂಪ ಅರ್ಥ ಅಪೂರ್ವತೆ ಈಮೊದಲಾದ ದೃಷ್ಟಿಗಳಿಂದ ಗಮನಾರ್ಹವಾದ ಪದಗಳನ್ನು ಆರಿಸಿಕೊಂಡಿದೆ.

೪. ಕ್ರಿ.ಶ. ಸುಮಾರು ೧೮೦೦ರ ಒಳಗೆ ರಚಿತವಾದ ಗ್ರಂಥ ಶಾಸನಗಳಲ್ಲಿ ಅಪೂರ್ವವಾದ ಮತ್ತು ಅತಿ ಮುಖ್ಯವಾದುವುಗಳನ್ನು ಆರಿಸಿಕೊಂಡು ಅವುಗಳಲ್ಲಿ ದೊರೆಯುವ ಪದಗಳನ್ನು ಸಂಗ್ರಹಿಸಲಾಗಿದೆ.

೫. ಮುದ್ರಿತ ಗ್ರಂಥಗಳು, ಅಮುದ್ರಿತ ಗ್ರಂಥಗಳು, ಪಠ್ಯಪುಸ್ತಕಗಳಲ್ಲಿ ದೊರೆಯುವ ಸ್ಥಳೀಯ ಶಬ್ದಗಳು, ಜನಪದ(ಪ್ರಾದೇಶಿಕ) ಸಾಹಿತ್ಯದ ಪದಗಳನ್ನು ಈ ನಿಘಂಟಿನಲ್ಲಿ ಸೇರಿಸಲಾಗಿದೆ.

೬. ಕಿಟೆಲ್ ಅವರ ನಿಘಂಟಿನಲ್ಲಿ ಇರುವ ಪ್ರಯೋಗಾಧಾರವಿಲ್ಲದ ಶಬ್ದಗಳನ್ನು ಸಂಸ್ಕೃತ ಶಬ್ದಗಳನ್ನು ಉಳಿಸಿಕೊಳ್ಳಲಾಗಿದೆ. ಕನ್ನಡ ಕಾವ್ಯಗಳಲ್ಲಿ ದೊರೆಯುವ ಇತರ ಸಂಸ್ಕೃತ ಶಬ್ದಗಳು ದಾಖಲಾಗಿವೆ.

೭. ವಿಲಿಯಂ ರೀವ್, ಸ್ಯಾಂಡರ್‌ಸನ್, ಗ್ಯಾರೆಟ್, ಗಂಗಾಧರ ಮಡಿವಾಳೇಶ್ವರ ತುರಮುರಿ, ಗುರುರಾವ್ ವಿಠಲ ಮೊಹರೆ, ಪ್ರಭಣ್ಣ ಮುಂತಾದವರ ಮುದ್ರಿತ ಹಾಗೂ ಅಮುದ್ರಿತ ನಿಘಂಟುಗಳಲ್ಲಿನ ಸೂಕ್ತವಾದ ಶಬ್ದಾರ್ಥ ಪ್ರಯೋಗಗಳನ್ನು ಬಳಸಿಕೊಳ್ಳಲಾಗಿದೆ.

೮. ಜೈನ, ವೀರಶೈವ, ಬ್ರಾಹಣ ಸಾಹಿತ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ಮತ್ತು ದಾರ್ಶನಿಕ ಶಬ್ದಗಳು, ಸಂಗೀತ, ನೃತ್ಯ, ಶಿಲ್ಪ ಮೊದಲಾದ ಕಲೆಗಳಿಗೆ ಸಂಬಂಧಿಸಿದ ಪ್ರಾಚೀನ ಪಾರಿಭಾಷಿಕ ಶಬ್ದಗಳು, ವ್ಯಾಕರಣ, ಛಂದಸ್ಸು, ಅಲಂಕಾರ, ತರ್ಕ, ವೈದ್ಯ, ಜ್ಯೋತಿಷ, ಕಾಮಶಾಸ್ತ್ರ, ಗಣಿತ ಮುಂತಾದ ಶಾಸ್ತ್ರಗಳಿಗೆ ಸಂಬಂಧಿಸಿದ ಶಬ್ದಗಳು, ಇತರ ವೈಜ್ಞಾನಿಕ ಪಾರಿಭಾಷಿಕ ಶಬ್ದಗಳು ಮೊದಲಾದವುಗಳನ್ನು ಈ ನಿಘಂಟಿನಲ್ಲಿ ಸೇರಿಸಲಾಗಿದೆ.

ಒಟ್ಟಾರೆಯಾಗಿ ಭಾಷೆಯಲ್ಲಿ ಬಳಕೆಯಲ್ಲಿರುವ ಎಲ್ಲ ಪದಗಳ ದಾಖಲಾತಿಯನ್ನು ಈ ನಿಘಂಟು ಮಾಡಿದೆ.

### ೪.೨.೨. ಮುಖ್ಯ ಉಲ್ಲೇಖಗಳು

ಈ ನಿಘಂಟಿನಲ್ಲಿ ವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಮುಖ್ಯ ಉಲ್ಲೇಖಗಳನ್ನು ನೀಡಲಾಗಿದೆ. ಅವುಗಳನ್ನು ಈ ಕೆಳಕಂಡಂತೆ ದಾಖಲಿಸಲಾಗಿದೆ.

೧. ನಿಘಂಟಿನಲ್ಲಿ ಮುಖ್ಯ ಉಲ್ಲೇಖಗಳಾಗಿ ಕೊಡುವ ಶಬ್ದಗಳನ್ನು ಅವುಗಳ ಪ್ರಕೃತಿರೂಪದಲ್ಲಿ ನೀಡಲಾಗಿದೆ. ಉದಾ: ಮರ, ನೆಲ, ಕರಿ.

೨. ಮುಖ್ಯ ಉಲ್ಲೇಖಗಳು ಒಂದೇ ರೂಪದ ಪದಗಳಾಗಿದ್ದರೆ ಅವುಗಳನ್ನು ಭಾಷೆ, ಶಬ್ದಜಾತಿಯ ಹಿನ್ನೆಲೆಯಲ್ಲಿ ಕ್ರಮವಾಗಿ ಕೊಡಲಾಗಿದೆ.

೩. ಈ ನಿಘಂಟಿನಲ್ಲಿ ಮುಖ್ಯ ಉಲ್ಲೇಖಗಳನ್ನು ಭಾಷೆಯ ಆಧಾರದಲ್ಲಿ ಕನ್ನಡ, ತದ್ಭವ, ಸಂಸ್ಕೃತ, ಅನ್ಯದೇಶ್ಯ ಎನ್ನುವ ಕ್ರಮದಲ್ಲಿ ದಾಖಲಿಸಲಾಗಿದೆ.

೪. ಕನ್ನಡ ನಿಘಂಟಿನಲ್ಲಿ ಒಂದೇ ಶಬ್ದರೂಪ ವ್ಯಾಕರಣಕ್ಕನುಸಾರವಾಗಿ ಬೇರೆ ಬೇರೆಯಾಗಿದ್ದರೆ ಅದನ್ನು ಕ್ರಿಯಾಪದ, ನಾಮಪದ, ಗುಣವಾಚಕ, ಅವ್ಯಯ, ಪ್ರತ್ಯಯ, ಸರ್ವನಾಮ, ಉಪಸರ್ಗ – ಈ ಕ್ರಮದಲ್ಲಿ ನೀಡಲಾಗಿದೆ. ಇವುಗಳನ್ನು ಕ್ರಮವಾಗಿ ೧, ೨, ೩, ೪ ಎನ್ನುವ ಸಂಖ್ಯೆಗಳಿಂದ ನಿರ್ದೇಶಿಸಿದೆ. ಸಂಖ್ಯಾವಾಚಕ, ಪರಿಮಾಣವಾಚಕ, ಪ್ರಕಾರವಾಚಕ ಇವೆಲ್ಲ ಗುಣವಾಚಕದ ಪ್ರಭೇದಗಳಾಗಿರುವುದರಿಂದ ಇವುಗಳನ್ನು ಗುಣವಾಚಕದಲ್ಲಿಯೇ ನೀಡಲಾಗಿದೆ.

೫. ಭಾಷಾಶಾಸ್ತ್ರದ ದೃಷ್ಟಿಯಿಂದ ಅಂಕಿತನಾಮಗಳಲ್ಲಿ ವೈಶಿಷ್ಟ್ಯ ಕಂಡುಬಂದರೆ ಅವುಗಳನ್ನು ಈ ನಿಘಂಟಿನಲ್ಲಿ ದಾಖಲಿಸಲಾಗಿದೆ.

೬. ಶಬ್ದಗಳ ಪ್ರಾದೇಶಿಕ ರೂಪಗಳನ್ನು ಈ ನಿಘಂಟಿನಲ್ಲಿ ಕೊಟ್ಟಿಲ್ಲ. ಆದರೆ ಶಾಸನಗಳಲ್ಲಿ ಪ್ರಾದೇಶಿಕ ರೂಪಗಳು ಕಂಡುಬಂದರೆ ಅವುಗಳನ್ನು ಸೇರಿಸಲಾಗಿದೆ.

೭. ಪ್ರಾಚೀನ ಗ್ರಂಥದ ಪ್ರತಿಗಳಲ್ಲಿ ಆಯಾ ಲೇಖಕರ ಮನೋಭಾವಕ್ಕನುಸಾರವಾಗಿ ಶಬ್ದಗಳ ಬೇರೆ ಬೇರೆ ರೂಪಗಳು ಕಂಡುಬರುತ್ತವೆ. ವ್ಯಾಕರಣ ಮತ್ತು ಭಾಷೆಯ ಜಾಯಮಾನಕ್ಕನುಸಾರವಾಗಿ

ಅತ್ಯಂತ ಪ್ರಾಚೀನ ರೂಪವನ್ನು ಪ್ರಧಾನವೆಂದು ಅಂಗೀಕರಿಸಿ ಉಳಿದ ರೂಪಗಳನ್ನು ಅದರ ಕೆಳಗೆ ಸೂಚಿಸಲಾಗಿದೆ. ಉದಾ: ಅಂಗೆಯ್, ಅಂಗಯ್, ಅಂಗೈ.

೮. ಈ ನಿಘಂಟಿನಲ್ಲಿ ಕ್ರಿಯಾವಾಚಕ, ನಾಮವಾಚಕ, ಸರ್ವನಾಮಗಳು, ಅವ್ಯಯ, ಪ್ರತ್ಯಯಗಳನ್ನು ಮುಖ್ಯ ಉಲ್ಲೇಖಗಳನ್ನಾಗಿ ನೀಡಲಾಗಿದೆ.

೯. ನುಡಿಗಟ್ಟು, ಆಯಾ ಮುಖ್ಯ ಶಬ್ದದ ಕೆಳಗೆ ಬೇರೊಂದು 'ಪ್ಯಾರಾ'ದಲ್ಲಿ ಪ್ರತ್ಯೇಕವಾಗಿ ಬೇರ್ಪಡಿಸಿ ತೋರಿಸಲಾಗಿದೆ. ದ್ವಿರುಕ್ತಿಗಳನ್ನು ಮುಖ್ಯ ಉಲ್ಲೇಖದ ಕೆಳಗೆ ಸೂಚಿಸಲಾಗಿದೆ.

**೪.೨.೩. ಚಾರಿತ್ರಿಕ ವಿಧಾನ**

ಪ್ರತಿಯೊಂದು ನಿಘಂಟು ಒಂದು ವಿಧಾನದಲ್ಲಿ ರಚನೆಯಾಗಿರುತ್ತದೆ. ಐತಿಹಾಸಿಕವಾಗಿ ಕನ್ನಡ ಭಾಷೆ ಬೆಳೆದುಬಂದಿರುವುದನ್ನು ಗಮನಿಸಿ ಪದಗಳನ್ನು ದಾಖಲಿಸುವಾಗ, ಪ್ರಯೋಗಗಳನ್ನು ನೀಡುವಾಗ ಕಾಲಾನುಕ್ರಮದಲ್ಲಿ ನೀಡಿರುವುದರಿಂದ ಕನ್ನಡ ನಿಘಂಟಿನಲ್ಲಿ ಚಾರಿತ್ರಿಕ ವಿಧಾನವನ್ನು ಬಳಸಲಾಗಿದೆ.

೧. ಈ ನಿಘಂಟಿನಲ್ಲಿ ಒಂದು ಶಬ್ದಕ್ಕೆ ಹಲವು ರೂಪಗಳಿದ್ದಾಗ ಅವುಗಳಲ್ಲಿ ಭಾಷಾಶಾಸ್ತ್ರ ದೃಷ್ಟಿಯಿಂದ ಅತಿಪ್ರಾಚೀನವೆಂದು ಕಂಡುಬಂದ ರೂಪದಿಂದ ಆರಂಭಿಸಿ ಅರ್ಥಗಳನ್ನು, ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ಆ ಪ್ರಾಚೀನ ರೂಪದ ಅಡಿಯಲ್ಲಿಯೇ ದಾಖಲಿಸಿಲಾಗಿದೆ. ಮಿಕ್ಕರೂಪಗಳನ್ನು ಆಯಾ ಸ್ಥಾನಗಳಲ್ಲಿ ಕೊಟ್ಟು ಮೂಲಶಬ್ದಕ್ಕೆ ಸಂಬಂಧವನ್ನು 'ನೋಡಿ' ಎಂದು ಸೂಚಿಸಿದೆ.

೨. ಕನ್ನಡ ನಿಘಂಟಿನಲ್ಲಿ ಶಬ್ದಗಳನ್ನು ಒಟ್ಟುಗೂಡಿಸುವಾಗ ಒಂದು ಶಬ್ದದ ನೇರ ರೂಪಾಂತರಗಳನ್ನು ಒಂದು ಕಡೆ ಸೇರಿಸಿದೆ. ಉದಾ: ಪೆರ್ಮೆ, ಹೆಮ್ಮೆ.

೩. ಬಿಂದುಸಹಿತವಾದ ಶಬ್ದರೂಪವು ಪ್ರಾಚೀನವಾದುದೆಂದು ಪರಿಗಣಿಸಿ ಅದನ್ನು ಮುಖ್ಯ ಶಬ್ದವಾಗಿ ಕೊಟ್ಟು ಬಿಂದು ರಹಿತವಾದ ಶಬ್ದವನ್ನು ಅದರ ರೂಪಪ್ರಭೇದವೆಂದು ಭಾವಿಸಿ ಬಿಂದುಸಹಿತವಾದ ಶಬ್ದದ ಕೆಳಗೆ ಕಾಣಿಸಿದೆ.

೪. ಶಬ್ದಗಳಿಗೆ ಲಕ್ಷಣವನ್ನು ಹೇಳಿ ವಿವರಿಸುವಾಗ, ಸಾಮಾನ್ಯವಾಗಿ ಆಕ್ಸ್‌ಫರ್ಡ್ ಇಂಗ್ಲಿಶ್ ನಿಘಂಟನ್ನು ಮಾದರಿಯಾಗಿಟ್ಟುಕೊಳ್ಳಲಾಗಿದೆ. ಶಬ್ದಗಳಿಗೆ ತಿಳಿದಮಟ್ಟಿಗೆ ಮೊದಲು ವಾಚ್ಯಾರ್ಥವನ್ನೂ ಆಮೇಲೆ ಲಕ್ಷ್ಯಾರ್ಥಗಳನ್ನೂ ನೀಡಲಾಗಿದೆ. ಎಲ್ಲ ಅರ್ಥಗಳಿಗೆ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ತೋರಿಸಲಾಗಿದೆ. ಅರ್ಥದ ಪೂರ್ವಾಪರ ಖಚಿತವಾಗಿ ಗೊತ್ತಾಗದ ಕಡೆ ಪ್ರಯೋಗಗಳ ಪ್ರಾಚೀನತೆಯನ್ನು ಅನುಸರಿಸಿ ಅರ್ಥವನ್ನು ದಾಖಲಿಸಿಲಾಗಿದೆ.

### ೪.೨.೪. ಪ್ರಯೋಗಗಳನ್ನು ಸೂಚಿಸಿರುವ ರೀತಿ

ನಿಘಂಟು ರಚನಾ ವೈಜ್ಞಾನಿಕ ನಿಯಮಗಳಲ್ಲಿ ನಿಘಂಟುಗಳಲ್ಲಿ, ಕೃತಿಗಳಲ್ಲಿ ಬಳಕೆಯಾಗಿರುವ ಪ್ರಯೋಗಗಳ ದಾಖಲಾತಿಯೂ ಒಂದು. ಕನ್ನಡ ನಿಘಂಟಿನಲ್ಲಿ ಶಬ್ದಾರ್ಥವನ್ನು ವಿವೇಚಿಸುವಾಗ ತಾವು ಹೇಳುವ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ತಾವು ಕೊಡುವ ಅರ್ಥ ವಿವರಣೆಗೆ ಪುಷ್ಟಿಯನ್ನು ಕೊಡಲು ಉದ್ಧರಣೆಯನ್ನು ಬಳಸಿದ್ದಾರೆ. ನಿಘಂಟು ಕೇವಲ ನೀರಸವಾದುದಲ್ಲ ಎಂಬುದನ್ನು ತೋರಿಸಲು ಈ ನಿಘಂಟಿನಲ್ಲಿ ರಸವತ್ತಾದ ಪ್ರಯೋಗಗಳೂ ಇವೆ.

ಶಬ್ಬಕ್ಕೆ ಪ್ರಯೋಗಗಳನ್ನು ನೀಡುವುದು ಸಮರ್ಥವಾದ ಮಾರ್ಗ. ಒಂದು ಶಬ್ದಕ್ಕೆ ಸಾಧ್ಯವಿರುವ ಮಟ್ಟಿಗೆ ಮೊದಲು ಪ್ರಾಚೀನ ಪ್ರಯೋಗವನ್ನು ನೀಡಿ ನಂತರ ಮಧ್ಯಕಾಲದ ಪ್ರಯೋಗ ಆನಂತರ ಅರ್ವಾಚೀನ ಕಾಲದ ಪ್ರಯೋಗಗಳನ್ನು ನೀಡಿದರೆ ಹೆಚ್ಚು ಅನುಕೂಲವಾಗುತ್ತದೆ. ಏಕೆಂದರೆ ಆ ಶಬ್ದ ಕಾಲಾನುಕಾಲಕ್ಕೆ ಬದಲಾವಣೆ ಹೊಂದಿದ ಭಾಷಿಕ ವ್ಯತ್ಯಾಸದ ಹೊಳಹು ಸ್ಪಷ್ಟವಾಗಿ ತಿಳಿದುಬರುತ್ತದೆ. ಆ ಭಾಷಿಕ ವ್ಯತ್ಯಾಸ ಹೊಂದಿರುವ ಪದವನ್ನು ದಪ್ಪ ಅಕ್ಷರಗಳಲ್ಲಿ ತೋರಿಸಲಾಗುತ್ತದೆ.

ಪದಗಳಿಗೆ ಅರ್ಥವನ್ನು ನಿರ್ಧರಿಸುವಾಗ ಮುಖ್ಯವಾಗಿ ಶಾಸನಗಳು ಹಾಗೂ ಕವಿಸೂಕ್ತಿಗಳೇ ಪ್ರಧಾನವಾದ ಪರಿಕರಗಳು. ಈ ನಿಘಂಟನ್ನು ಸಿದ್ಧಪಡಿಸುವಾಗ ಬೃಹತ್ಕೋಶದ ನಿರ್ಮಾಣಕ್ಕೆಂದು ಕ್ರೋಢೀಕರಿಸುವ ಪ್ರಯೋಗಗಳನ್ನೇ ಮುಖ್ಯ ಆಧಾರವಾಗಿಟ್ಟುಕೊಳ್ಳಲಾಗಿದೆ. ಜೊತೆಗೆ ಕನ್ನಡದಲ್ಲಿರುವ ಇತರ ಎಲ್ಲ ನಿಘಂಟುಗಳನ್ನು ಪರಿಶೀಲಿಸಿ ಶಬ್ದಾರ್ಥಗಳನ್ನು ನಿರ್ಧಾರ ಮಾಡಲಾಗಿದೆ. ಈ ನಿಘಂಟಿನಲ್ಲಿ ವೈವಿಧ್ಯಮಯ ಪ್ರಯೋಗಗಳನ್ನು ನೀಡಲಾಗಿದೆ.

ಅನೇಕಾರ್ಥಗಳಿರಲಿ, ಒಂದೇ ಅರ್ಥವಿರಲಿ ಆ ಅರ್ಥವನ್ನು ದೃಢಪಡಿಸುವುದಕ್ಕೆ ಒಂದು ಪ್ರಯೋಗವಿರಲೇಬೇಕು. ಇಲ್ಲದಿದ್ದರೆ ನಿಘಂಟಿನ ಅಧಿಕಾರ ಪೂರ್ಣವಾಗುವುದಿಲ್ಲ. ಆದುದರಿಂದ ಯಾವ ಪ್ರಯೋಗವೂ ದೊರಕದೆ ಇದ್ದಾಗ ನಿಘಂಟುಕಾರನಿಗೆ ನಿಘಂಟು ರಚನೆಯ ಸಂಪ್ರದಾಯದಲ್ಲಿ ಒಂದು ಅಧಿಕಾರ ಬರುತ್ತದೆ. ಅದು ರೂಢಿಗೆ ಮೊರೆಹೋಗುವುದು, 'ರೂಢಿ' ಎಂದು ಸೂಚಿಸಿ ಜನರ ಆಡುಮಾತಿನಲ್ಲಿ ಕಾಣಬರುವ ಯಾವುದಾದರೂ ಉಚಿತವಾದ ವಾಕ್ಯವನ್ನು ಸೂಚಿಸಬಹುದು.

೧. ಪ್ರತಿಯೊಂದು ಶಬ್ದದ ವಿಷಯದಲ್ಲೂ ಅದು ಎಂದು, ಹೇಗೆ, ಯಾವ ರೂಪದಲ್ಲಿ ಯಾವ ಅರ್ಥದೊಂದಿಗೆ ಶಬ್ದವಾಯಿತು, ಅಲ್ಲಿಂದೀಚೆಗೆ ರೂಪದಲ್ಲೂ, ಅರ್ಥದಲ್ಲೂ ಅದು ಯಾವ ಬೆಳವಣಿಗೆಗಳನ್ನು ಪಡೆದಿದೆ. ಅದರ ಪ್ರಯೋಗಗಳಲ್ಲಿ ಯಾವುವು ಕಾಲಕ್ರಮದಲ್ಲಿ ಲೋಪವಾಗಿವೆ. ಯಾವುವು ಇನ್ನೂ ನಿಂತಿವೆ; ಈಚೆಗೆ ಯಾವ ಹೊಸ ಪ್ರಯೋಗಗಳು ಯಾವ ವಿಧಾನಗಳಲ್ಲಿ ಎಂದಿನಿಂದ ತಲೆ ಎತ್ತಿವೆ ಎನ್ನುವುದನ್ನು ತೋರಿಸುವುದು.

೨. ಈ ಅಂಶಗಳಿಗೆಲ್ಲ ಉದಾಹರಣೆಯಾಗಿ, ನಮಗೆ ಗೊತ್ತಾಗಿರುವ ಮಟ್ಟಿಗೆ ಶಬ್ದ ಮೊಟ್ಟಮೊದಲು ಕಾಣಿಸಿಕೊಂಡಂದಿನಿಂದ ಪ್ರಾರಂಭಿಸಿ ಕೊನೆಯ ಸಲಕ್ಕೆ ಅಥವಾ ಇಂದಿನವರೆಗೆ

ಮುಟ್ಟುವಂತೆ ಪ್ರಯೋಗ ಪರಂಪರೆಯನ್ನು ಕೊಡುವುದು. ಹೀಗೆ ಶಬ್ದ ತನ್ನ ಚರಿತ್ರೆಯನ್ನು, ಅರ್ಥವನ್ನು ತಾನೇ ಪ್ರದರ್ಶಿಸುವಂತೆ ಮಾಡುವುದು.

೩. ಪ್ರತಿಯೊಂದು ಶಬ್ದದ ರೂಪವ್ಯುತ್ಪತ್ತಿಯನ್ನು ಕೇವಲ ಐತಿಹಾಸಿಕಾಂಶದ ಆಧಾರದ ಮೇಲೆಯೇ ಆಧುನಿಕ ಭಾಷಾಶಾಸ್ತ್ರದ ಪದ್ಧತಿಗಳನ್ನು, ಸಿದ್ಧಾಂತಗಳನ್ನು ಅನುಸರಿಸಿಯೇ ಪ್ರತಿಪಾದಿಸುವುದು.

ಈ ಹಿನ್ನೆಲೆಯಲ್ಲಿ ಕನ್ನಡ ನಿಘಂಟಿನಲ್ಲಿ ನೀಡಿದ ಪ್ರಯೋಗಗಳನ್ನು ಗಮನಿಸಿದಾಗ ಹಲವು ಬಗೆಯಲ್ಲಿ ನೀಡಿರುವುದು ಕಂಡುಬರುತ್ತದೆ. ಅವುಗಳೆಂದರೆ –

೧. ಶಬ್ದಗಳಿಗೆ ಅರ್ಥಗಳನ್ನು ಸೂಚಿಸುವಾಗ ಪ್ರತಿಯೊಂದು ಅರ್ಥಕ್ಕೂ ಶಾಸನಗಳಿಂದಲೂ ಕಾವ್ಯಗಳಿಂದಲೂ ಸಾಧ್ಯವಾದಷ್ಟು ಪ್ರಯೋಗಗಳನ್ನು ಎತ್ತಿಕೊಡಲಾಗಿದೆ.

೨. ಶಾಸನಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಅವುಗಳ ಆಕರಗಳನ್ನು ಜೊತೆಯಲ್ಲಿಯೇ ಕಾಲವನ್ನು ಸೂಚಿಸಿದೆ.

೩. ಕಾವ್ಯಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಆಕರಗಳನ್ನು ಮಾತ್ರ ಕೊಟ್ಟಿದೆ. ಅವುಗಳ ಕಾಲವನ್ನು ಸಂಕ್ಷಿಪ್ತ ಸೂಚಿಯಿಂದ ತಿಳಿದುಕೊಳ್ಳಬಹುದು.

೪. ದೇಶ್ಯಶಬ್ದಗಳಿಗೆ ಪ್ರಯೋಗಗಳನ್ನು ಕೊಡುವಾಗ ಅರ್ಥ ಸ್ಪಷ್ಟವಾಗಿರುವ ಕಡೆ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಪ್ರಯೋಗಗಳನ್ನು ಕೊಡಲಾಗಿದೆ. ಪ್ರಯೋಗಗಳು ವಿಪುಲವಾಗಿದ್ದು ಸ್ವಾರಸ್ಯವಾಗಿದ್ದರೆ ಶತಮಾನಕ್ಕೆ ಒಂದರಂತೆ ವಿವೇಚಿಸಿ ಉದ್ಧರಿಸಲಾಗಿದೆ. ಅದರ ಜೊತೆಗೆ ಕೆಲವು ಪ್ರಯೋಗಗಳಿಗೆ ಸಂಬಂಧಿಸಿದಂತೆ ಆಕರಗಳನ್ನು ಮಾತ್ರ ಸೂಚಿಸಿ ಆಯಾ ಗ್ರಂಥಗಳನ್ನು ನೋಡಿಕೊಳ್ಳಿ ಎಂದು ನಿರ್ದೇಶಿಸಲಾಗಿದೆ. ಅರ್ಥ ಸಂದಿಗ್ಧವಾಗಿದ್ದರೆ ಅರ್ಥಪುಷ್ಟಿಗಾಗಿ ಹೆಚ್ಚು ಪ್ರಯೋಗಗಳನ್ನು ನೀಡಲಾಗಿದೆ. ಸ್ಪಷ್ಟವಾಗಿರುವ ಕಡೆ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಈ ಮೂರರಿಂದಲೂ ಒಂದೆರಡು ಪ್ರಯೋಗಗಳನ್ನು ಕೊಟ್ಟರೆ ಸಾಕು. ಪ್ರಯೋಗಗಳು ವಿಪುಲವಾಗಿದ್ದು, ಸ್ವಾರಸ್ಯವಾಗಿದ್ದರೆ ಶತಮಾನಕ್ಕೊಂದು ಅಥವಾ ಎರಡರಂತೆ ಕೊಡಲಾಗಿದೆ. ಉದಾ :–

ಅಕ್ಕೆ, ಅಕ್ಕ, ಅಕ್ಕಳ್ (ನಾ).

೧. ಹಿರಿಯ ಸಹೋದರಿ : ತಮ್ಮಕ್ಕನಂ ಕಣಲ್ ಪೋದಾತಂ (ಪಂಪಭಾ. ೮–೫೮ ವ); ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು (ಅಜಿಪು.೧–೪೬) : ಆತನ ಅಕ್ಕ ಸಿರಿಯಬ್ಬೆ ಪರಲೋಕ ವಿನೆಯಂ ಮಾಡಿ (ಎಕ. VIII, ಸೊರಬ, ೪೬–೬; ೧೦೦೮) ; ಹಿಂಗದೆಯಕ್ಕತಂಗಿಯರ ಮೇಳದಲಿ ಪುರಾಂಗನಾಜನವೈದಿದುದು (ಕಂನವಿ. ೨೧–೨೨) ; ಅಕ್ಕನ ಹಗೆ ಭಾವನ ನಂಟು (ಗಾದೆ); ಅಕ್ಕನ ಬಂಗಾರವಾದರೂ ಅಕ್ಕಸಾಲೆ ಬಿಡ (ಗಾದೆ).

೨. (ಗೌರವಾರ್ಥದಲ್ಲಿ) ಹೆಂಗಸು : ಗಾಂಧಾರಿವೆಸರಿನಕ್ಕಂಗಳು ತಾಂ (ಮಣ್ಯಾಸ್ರ.೨–೪೬); ಮನೆಯೊಳಗಕ್ಕಂದಿರನುವೆ (ಜಯಕ.೧–೨೦)

೩. ಹೆಂಗಸರನ್ನು ಸಂಬೋಧಿಸುವಾಗ ಸರ್ವಸಾಧಾರಣವಾಗಿ ಉಪಯೋಗಿಸುವ ಮಾತು (ಅವ್ವ, ಅಮ್ಮ ಎಂಬಂತೆ) : ಅಕ್ಕ ಪೇಳಾರೊಳಿಂ ನುಡಿವೋ ಬೇಸರಂ (ಆದಿಪು.೩-೩೧) ; ಲತಾಂಗಿ ನೊಂದಿನಿಸುಮಲ್ಲಿರದಕ್ಕನ ಬರ್ಪ ಬಟ್ಟೆಯಂ ನೋಡುವಮೇಳಿಮೆಂದು (ಕಾದಂಉ. ೯೫) ಅಕ್ಕ ನಿನ್ನಂತಾರೀ ಜಗದೊಳಡಬಲ್ಲರ್ (ಧರ್ಮಾಮೃ, ೫-೯೮) ; ಬನ್ನಿರೆ ಅಕ್ಕಂಗಳು, ಹೋಗಿರೆ ಆಲದ ಮರಕ್ಕೆ (ಬಸವ.೫೬೨) ; ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದ ಕನಸ ಕಂಡೆ (ಮಹದೇ.೧೫-೨) ; ತರಳೆ ನಿನ್ನಂ ನಂಬಿ ಹೋದಪೆವಕ್ಕ ಚೆನ್ನಕ್ಕ (ಬಸಪು.೧೪-೩); ಅಕ್ಕ ಬಪ್ಪೆನು ಬಿಡು ಸೆರಗ (ಭರಚ.೩೬-೩೫).

೪. ಹೆಂಗಸಿನ ಹೆಸರಿನ ಕೊನೆಯಲ್ಲಿ (ಅವ್ವ, ಅಮ್ಮ ಎಂಬಂತೆ) ಸೇರುವ ಮಾತು. ಉದಾ - ನಂಬಿಯಕ್ಕ, ಮಹದೇವಿಯಕ್ಕ, ರಾಮಕ್ಕ.

೫. ಅಪೂರ್ವವಾಗಿ ಗಂಡಸರ ಹೆಸರಿನ ಕೊನೆಯಲ್ಲಿ ಸೇರುವ ಮಾತು : ಮಾರಕ್ಕ ಅರಸರ್ ಬನಮಾ(ವಾ)ಸಿ ಪನ್ನಿಚ್ಛಾಸಿರಮನಾಳೆ (ಎಇ. VI. ೧೬೩-೧ ; ೭೮೦).

ಅಕ್$_{8}$ : ೧. ಬೆರಲ್ಗಳೊಪ್ಪಿರ್ದುವಾಯಕನಂಘ್ರಿಯುಗಳ ಪಲ್ಲವದಿ (ಮೋಹತ. ೧೩-೩೬, ೨೪-೧೯, ೨೫-೫, ೩೧-೫೨, ೩೩-೬೩, ೪೦-೨೬ ನೋ). Eಆ+ಅಕ=ಆಯಕ ∃ ನಿರುತದಿಂದವರು ಶುಚಿಯಾಗಿ ಹಾಸುತಲಾಯಕನ ಕುಳ್ಳಿರಿಸಿ ಬಳಿಕ್ಕಂ (ಪ್ರಭುಪು. ೮-೬೬) ; ಮುಪ್ಪೊಳಲ ಜೈಸಿದ ಸದಾಶಿವನ ಪತ್ನಿಗಂತಃಕರಣದನ್ನೆಯೀಯಕನೆನಿಪ್ಪುದನುದಾಹರಿಸುವಂತೆ (ಸೌಂದಪು.೧೩-೪೦); E ಈ+ಅಕ=ಈಯಕ ∃

ಅಕ್ಕಳ್ : ೧. 'ಅಕ್ಕಳ್ಗ' ಪರಾ. ೨. ಸೂಳೆಯರ ನೆಗಳ್ತೆ ನಾಡೆ ತನಗಳ್ತೆದಲಕ್ಕಳೆ ಸೂಳೆಯಾಗಳೇ (ಪಂಪಭಾ. ೪-೯೪) ; ಕೊಂತಿಮಾದೇವಿಗಮೊಂದುತ್ತರಮಾದಳ್ ಕರ್ಣಂಬೆತ್ತಕ್ಕಳೆ [ಪಾಠಾಂ. ಕ್ಕನೆ, ರ್ಕಳೆ] (ಪಂಪಭಾ. ೧೨-೧೨೫). ‖P (ಬಹುವ) ಅಕ್ಕಂಗಳ್, ಅಕ್ಕಗಳು, ಅಕ್ಕಂದಿರ್, ಅಕ್ಕಂದಿರು, ಅಕ್ಕನವರು ಇತ್ಯಾದಿ. ಗೌರವವನ್ನು ಅಥವಾ ಪ್ರೀತಿಯನ್ನು ತೋರಿಸುವಾಗ ಅಕ್ಕಚ್ಚಿ, ಅಕ್ಕಣ್ಣಿ, ಅಕ್ಕಮ್ಮ, ಅಕ್ಕಯ್ಯ, ಅಕ್ಕವ್ವ ಮುಂತಾದ ಸಮಾಸ ರೂಪಗಳೂ ಉಂಟು. ದೇಶ್ಯ ಶಬ್ದಗಳಿಗೆ ಕೊಟ್ಟಿರುವಂತೆ ಸಂಸ್ಕೃತ ಶಬ್ದಗಳಿಗೆ ಸಾಮಾನ್ಯವಾಗಿ ಪ್ರಯೋಗಗಳನ್ನು ಕಾಣಿಸಿಲ್ಲ. ಆದರೆ ಸಂಸ್ಕೃತದಲ್ಲಿಲ್ಲದ ಅರ್ಥ ಕನ್ನಡದಲ್ಲಿ ಕಂಡುಬಂದರೆ ಆ ಅರ್ಥಸಮರ್ಥನೆಗಾಗಿ ಪ್ರಯೋಗಗಳನ್ನು ಕೊಡಲಾಗಿದೆ. ಅಲ್ಲದೆ ಶಬ್ದ ಅಪೂರ್ವದ್ದಾಗಿದ್ದರೆ, ವಿಶೇಷ ಅರ್ಥವುಳ್ಳದ್ದಾಗಿದ್ದರೆ ಅಥವಾ ಶಾಸ್ತ್ರಪರಿಭಾಷೆಯದಾಗಿದ್ದರೆ ಅರ್ಥವನ್ನು ಖಚಿತಪಡಿಸಲು ಉಚಿತವರಿತು ಪ್ರಯೋಗಗಳನ್ನು ತೋರಿಸಾಗಿದೆ.

ಉದಾ- ಅಂಗಾರ (ನಾ). ೧. ಕೆಂಡ. ೨. ಇದ್ದಿಲು. ೩. ಮಂಗಳಗ್ರಹ; ಅಂಗಾರಕ. ೪. ದೇವರ ಧೂಪಾರತಿಯ ಕೆಂಡವನ್ನು ನೀರಿನಲ್ಲಿ ಆರಿಸಿ, ಅದರಿಂದ ಮಾಧ್ವರು ಹಣೆಯಲ್ಲಿ

ಧರಿಸುವ ಊರ್ಧ್ವರೇಖೆ : ತಲೆಭಾರ ಇಳಿದಿತ್ತು ; ಅಂಗಾರ ಬೆಳೆದಿತ್ತು; ಮೈಯನ್ನು ಮುಚ್ಚಿತ್ತು ಕೆಂಪು ಸೀರೆ (ಸಖೀಗೀ. ೫೪-೯) ; ವೈಷ್ಣವರ ಮಕ್ಕಳಿಗೆ ಅಂಗಾರವೇ ಬಂಗಾರ, ಸ್ಮಾರ್ಥರ ಮಕ್ಕಳಿಗೆ ಗಂಧವೇ ಚಂದ (ಗಾದೆ) ೫. (ಉಕ). "ಬೂದಿ" (ಕಸ್ತೂಕೋ). ೬. (ಉಕ). ದೇವರ ಧೂಪಾರತಿಯ ಬೂದಿ; ದೇವಸ್ಥಾನದಲ್ಲಿ ಅಭಿಮಂತ್ರಿಸಿ ಇಟ್ಟಿರುವ ಬೂದಿ; ಪುರೋಹಿತರು, ಜೋಯಿಸರು ಮೊದಲಾದವರು ಅಭಿಮಂತ್ರಿಸಿ ಕೊಟ್ಟ ಬೂದಿ: ರಾಯರ ಸನಾತನಿ ಬಾಲಮಿತ್ರ ಅವರಿಗೆ ದೇವರ ಅಂಗಾರ ಕೂಡ ಹಚ್ಚಿಹೋದ (ನಿರಾಭ. ೬೪-೭) ; ದನಗಳಿಗೆ ಬೇನೆ ಬಂದರೆ ಭಟ್ಟರ ಅಂಗಾರದಿಂದ ಅವಕ್ಕೆ ಗುಣವಾಗುತಿತ್ತು (ಹಬ್ಬಬಿ.೨೫). ೭. ಇಂಗಾಲ (Carbon) : ನಿಜವಾದ ವಜ್ರವು ಬರೀ ಅಂಗಾರದ ಪರಮಾಣುಗಳ ಸಮೂಹವಾದುದರಿಂದ, ಅವು ಎಕ್ಸ್‌ರೇಗೆ ಸಂಪೂರ್ಣ ಪಾರದರ್ಶಕಗಳು (ಎಕ್ಸ್‌ರೇ. ೫೪) ; ಇದ್ದಲು ಒಲೆಯಲ್ಲಿ ಹೊಗೆಯೇಳದಿದ್ದರೂ, ಸರಿಯಾಗಿ ಉರಿಯದೆ ಅಂಗಾರ ಉತ್ಪನ್ನವಾಗಿ, ವಾಯುಸಂಚಾರದ ವ್ಯವಸ್ಥೆಯಿಲ್ಲದಿದ್ದರೆ ವಾತಾವರಣ ವಿಷಮಯವಾಗುವ ಸಂಭವವಿದೆ. (ಅಡುಸೌ.೧೬)

ಈ ಮೇಲಿನ ಅರ್ಥಗಳಲ್ಲಿ ಮೊದಲ ಮೂರು ಸಂಸ್ಕೃತದಲ್ಲಿ ಪ್ರಸಿದ್ಧವಾದುವು. ಉಳಿದವು ಕನ್ನಡದಲ್ಲಿ ಬೆಳೆದು ಬಂದವು. ಇವುಗಳಿಗೆ ಪ್ರಯೋಗಗಳನ್ನು ದಾಖಲಿಸಿದೆ. ಕನ್ನಡ ನಿಘಂಟಿನಲ್ಲಿ ಪದಕ್ಕೆ ಪ್ರಯೋಗಗಳನ್ನು ನೀಡಿರುವ ವಿಧಾನಗಳ ಮಾಹಿತಿ ನಿಘಂಟಿನ ರಚನೆಯಲ್ಲಿ ಕಿಟೆಲ್ ತನ್ನ ನಿಘಂಟಿನಲ್ಲಿ ಅನುಸರಿಸಿರುವ ಕ್ರಮವನ್ನೇ ಸ್ಥೂಲವಾಗಿ ಅನುಸರಿಸಲಾಗಿದೆ.

ಪಞ್ಚ-ಪಂಚ, ತನ್ದೆ-ತಂದೆ ಎಂದು ಮುಂತಾಗಿ ಸ್ಪಷ್ಟಪಡಿಸಿ ತೋರಿಸಲಾಗಿದೆ.

ಒಂದು ಶಬ್ದಕ್ಕೆ ಹಲವು ರೂಪಗಳಿದ್ದಾಗ, ಅವುಗಳಲ್ಲಿ ಅತಿ ಪ್ರಾಚೀನ ರೂಪದಿಂದ ಆರಂಭಿಸಿ, ಕಾಲದೃಷ್ಟಿಯಿಂದ ಅರ್ಥಗಳನ್ನು, ಪ್ರಯೋಗಗಳನ್ನು ಆ ಪ್ರಾಚೀನ ರೂಪದ ಅಡಿಯಲ್ಲಿಯೇ ಕಾಣಿಸಲಾಗಿದೆ.

ಮಿಕ್ಕ ರೂಪಗಳನ್ನು ಅವುಗಳ ಸ್ಥಾನಗಳಲ್ಲಿ ಕೊಟ್ಟು ಮೂಲಶಬ್ದಕ್ಕೆ ಸಂಬಂಧವನ್ನು 'ನೋ' ಎಂದು ಸೂಚಿಸಲಾಗಿದೆ. ಉದಾ. 'ಅಳ್ಕರು', ಅಕ್ಕರು, ಅಕ್ಕರು, ಅಕ್ಕರೆ ಇತ್ಯಾದಿ ಅಕ್ಕರೆ ಅಳ್ಕರು ನೋ.

ಕಿಟೆಲ್ ನಿಘಂಟಿನಲ್ಲಿ ಕಾಣಿಸಿರುವ ಪ್ರಯೋಗಾಧಾರವಿಲ್ಲದ ಶಬ್ದಗಳನ್ನು ಸೇರಿಸಿಕೊಳ್ಳಲಾಗಿದೆ.

ಸ್ಯಾಂಡರ್‌ಸನ್ ಮುಂತಾದ ಇತರ ನಿಘಂಟುಗಳಲ್ಲಿನ ಶಬ್ದಾರ್ಥ ಪ್ರಯೋಗಗಳನ್ನು ವಿಚಾರ ಮಾಡಿ ಸೂಕ್ತವೆನ್ನಿಸಿದುವನ್ನು ಅಂಗೀಕರಿಸಲಾಗಿದೆ.

ಶಬ್ದಗಳಿಗೆ ಅರ್ಥವನ್ನು ಕೊಡುವಾಗ ತಿಳಿದಮಟ್ಟಿಗೂ ಮೊದಲು ವಾಚ್ಯಾರ್ಥವನ್ನು ಆಮೇಲೆ ಲಕ್ಷ್ಯಾರ್ಥವನ್ನೂ ಕೊಡಲಾಗಿದೆ.

ಎಲ್ಲ ಅರ್ಥಗಳಿಗೂ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ತೋರಿಸಲಾಗುತ್ತದೆ. ಅರ್ಥದ ಪೂರ್ವಾಪರ ಖಚಿತವಾಗಿ ಗೊತ್ತಾಗದ ಕಡೆ ಪ್ರಯೋಗಗಳ ಪ್ರಾಚೀನತೆಯನ್ನು ಅನುಸರಿಸಿ ಅರ್ಥ ಕೊಡಲಾಗಿದೆ.

ಯಾವುದಾದರೂ ಒಂದು ಶಬ್ದದ ಮೂಲರೂಪಕ್ಕೆ ಪ್ರಯೋಗ ಸಿಕ್ಕದಿದ್ದರೆ ಅಂತಹ ಸಂದರ್ಭದಲ್ಲಿ ಪ್ರಯೋಗ ಸಿಕ್ಕಿರುವ, ಮೂಲರೂಪಕ್ಕೆ ಸಮೀಪವಾಗಿರುವ ರೂಪವನ್ನೇ ಮುಖ್ಯೋಲ್ಲೇಖವಾಗಿ ತೆಗೆದುಕೊಂಡು ಅದರ ಜೊತೆಗೆ ಉಳಿದವನ್ನು ಪರ್ಯಾಯ ರೂಪಗಳಾಗಿ ಕೊಡಲಾಗಿದೆ.

'ತವಕಕಾರ್ತಿ' ಎಂಬ ಶಬ್ದವಿದ್ದು, 'ತವಕಕಾರ' ಎಂಬ ಶಬ್ದಕ್ಕೆ ಪ್ರಯೋಗಗಳು ಸಿಗದಿದ್ದರೂ ಆ ರೂಪವನ್ನು ಇರಿಸಿಕೊಳ್ಳಲಾಗಿದೆ. ಈ ಬಗ್ಗೆ ಚರ್ಚೆ ನಡೆದು ನಮಗೆ ಆ ರೂಪಕ್ಕೆ ಪ್ರಯೋಗಗಳು ಸಿಗದೆ ಇದ್ದರೂ, ಕಿಟೆಲ್ ಅವರು ಅದನ್ನು ಉಲ್ಲೇಖ ಮಾಡಿರದಿದ್ದರೂ ಅಂಥ ರೂಪವನ್ನು ಇಟ್ಟುಕೊಂಡು ಸ್ತ್ರೀವಾಚಕ ರೂಪವನ್ನು 'ಪರಾ' ಎಂದು ಉಳಿಸಿಕೊಳ್ಳಲಾಗಿದ್ದು, ಇಲ್ಲದಿದ್ದರೆ ನಿಷ್ಪತ್ತಿ ಕೊಡುವಾಗ 'ತವಕಕಾರ' ರೂಪಕ್ಕೆ ಶೂನ್ಯ (O)ವನ್ನು ತೋರಿಸಬೇಕಾಗುತ್ತದೆಂದೂ ಭಾವಿಸಿ ಮುಂದೆ ಇಂಥ ಶಬ್ದಗಳು ಬಂದಾಗ ಇದೇ ಕ್ರಮವನ್ನು ಅನುಸರಿಸಬೇಕೆಂದು ಆ ಬಗ್ಗೆ ಒಂದು ನಿರ್ಣಯವನ್ನು ಮಾಡಲಾಗಿದ್ದು, ಅದೇ ಕ್ರಮದಲ್ಲಿ ಉಲ್ಲೇಖಿಸಲಾಗಿದೆ.

'ವಿತ್ತು, ವೆಟ್ಟ, ವೆಳೆ' ಮುಂತಾದ ವಕಾರಾದಿಯಾದ ಪೂರ್ವದ ಹಳಗನ್ನಡ ರೂಪಗಳನ್ನು 'ಬಿತ್ತು, ಬೆಟ್ಟ, ಬೆಳೆ' ಮುಂತಾದ ಬಕಾರಾದಿಯಾದ ಹಳಗನ್ನಡ ರೂಪಗಳ ಕೆಳಗೆ ಕೊಟ್ಟು ವಿವರಿಸಿದೆ. ಇಂತಹ ವಕಾರಾದಿಯಾದ ಶಬ್ದರೂಪಗಳಿಗೆ ಹೆಚ್ಚುಮಟ್ಟಿಗೆ ಶಾಸನ ಪ್ರಯೋಗಗಳು ಇವೆ. ಪ್ರಾಚೀನ ಕಾವ್ಯಪ್ರಯೋಗಗಳು ಸಿಕ್ಕಿರುವ ಸಂದರ್ಭದಲ್ಲಿ ಮಾತ್ರ ಈ ವಕಾರಾದಿಯಾದ ಶಬ್ದರೂಪಗಳನ್ನು ಮುಖ್ಯೋಲ್ಲೇಖಗಳಾಗಿ ಮಾಡಿ ಬಕಾರಾದಿಯಾದ ರೂಪಗಳನ್ನು ಪರ್ಯಾಯ ಪದಗಳಾಗಿ ತೋರಿಸಿದೆ. ಉದಾಹರಣೆಗೆ :– 'ವಯಲ್', ಬಯಲ್: 'ವರ್', ಬರ್.

ಶಬ್ದಾರ್ಥಗಳಿಗೆ ಉದಾಹರಣೆಯಾಗಿ ಕೊಟ್ಟಿರುವ ಕಾವ್ಯಪ್ರಯೋಗಗಳ ಆಕರ, ಸಂಕೇತ, ಕವಿಯ ಕಾಲಗಳನ್ನು ಅನುಸರಿಸಿ ಕಾಲಾನುಕ್ರಮದಲ್ಲಿ ಪ್ರಯೋಗಗಳನ್ನು ಕೊಡಲಾಗಿದೆ.

ಇತ್ತೀಚಿನ ಕಾಲದ ಸಂಶೋಧನೆಗಳಿಂದ ಕವಿ ಕೃತಿಗಳ ಕಾಲವಿಚಾರದಲ್ಲಿ ವ್ಯತ್ಯಾಸಗಳು ಉಂಟಾಗಿದ್ದರೂ (ಉದಾಹರಣೆಗೆ– ಮೊದಲನೆಯ ನಾಗವರ್ಮನ 'ಛಂದೋಂಬುಧಿ', ಶಿಶುಮಾಯಣನ 'ಅಂಜನಾಚರಿತೆ', ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ') ಆರಂಭದಿಂದ ಸಂಕೇತ ಸೂಚಿಯಲ್ಲಿ ಕೊಟ್ಟಿರುವ ಕಾಲಕ್ರಮವನ್ನೇ ಅನುಸರಿಸಿದೆ. ಪರಿಷ್ಕರಣ ಸಂಪುಟಗಳಲ್ಲಿ ಈ ಬದಲಾದ ಕಾಲಕ್ರಮವನ್ನು ಅನುಸರಿಸಲಾಗಿದೆ.

ಸಂಸ್ಕೃತದ ಆಕಾರಂತ ಶಬ್ದರೂಪಗಳು ಸಾಮಾನ್ಯವಾಗಿ ಕನ್ನಡದಲ್ಲಿ ಎಕಾರಾಂತಗಳಾಗಿ ಪರಿವರ್ತನಗೊಳ್ಳುವುದರಿಂದಲೂ, ಸಂಸ್ಕೃತದ ದೀರ್ಘಾಂತ ಶಬ್ದರೂಪಗಳನ್ನು ಉಲ್ಲೇಖಿಸಿಲ್ಲವಾದ್ದರಿಂದಲೂ ಅಂತಹ ಶಬ್ದರೂಪಗಳ ಪ್ರಯೋಗಗಳನ್ನು ಎಕಾರಾಂತ ಶಬ್ದರೂಪಗಳಿಗೆ ಉದಾಹರಿಸಲಾಗಿದೆ.

ಉದಾಹರಣೆಗೆ :- ಅಭಿಯೋಗವಾರ್ತೆ : ಈಗಲೀ ವಿಪ್ರರಲಿ ಖಳರಭಿಯೋಗವಾರ್ತಾಶ್ರವಣ ಬಹುದುರಿತಾಗಮವು ತನಗಾವುದೋ (ಕುವ್ಯಾಅ. ೧೯-೫). ಅವಲೀಢೆ : "ಹೇಳಾ, ಅವಹೇಳಾ, ಲೀಢಾ, ಅವಜ್ಞಾ, ಅವಲೀಢಾ - ಈ ೫ ಲೀಲೆ" (ಹಲಾಯು. ೧೧೮-೩೦).

ಶಾಸನಗಳಿಗೆ ಕಾಲವನ್ನು ಸೂಚಿಸುವಾಗ ಅವುಗಳ ಸಂಪಾದಕರು ಕೊಟ್ಟಿರುವ ಕಾಲವನ್ನೇ ಸಾಧಾರಣವಾಗಿ ಸ್ವೀಕರಿಸಿದೆ. ಶಕ ವರ್ಷದ ಕಾಲಕ್ಕೆ ೭೮ ವರ್ಷ ಸೇರಿಸಿ ಕ್ರಿಸ್ತಶಕದ ಕಾಲವನ್ನು ಸೂಚಿಸುವುದು ಕ್ರಮ. ಆದರೆ ಮುದ್ರಣವಾಗದಿರುವ ಪ್ರಯೋಗ ಪಟ್ಟಿಕೆಗಳಿಂದ ತೆಗೆದುಕೊಂಡಿರುವ ಶಾಸನ ಪ್ರಯೋಗಗಳಲ್ಲಿ ಶಕವರ್ಷದ ಕಾಲವೇ ಇದ್ದು, ಅವುಗಳನ್ನು ಹಾಗೆಯೇ ಸೂಚಿಸಿದೆ. (ಉದಾ-ಸೌಇಎ= South Indian Epigraphy, ಇಎ = Indian Epigraphy, ಬೊಂಕಶಾ = Bombay Karnataka Inscriptions). ಓದುಗರು ಅಂತಹವುಗಳಿಗೆ ೭೮ನ್ನು ಸೇರಿಸಿ ಕಾಲವನ್ನು ತಿದ್ದಿಕೊಳ್ಳಬೇಕು.

E ∃ ಕಂಸ (Editorial bracket)ವನ್ನು ಕಾವ್ಯಪ್ರಯೋಗಗಳಲ್ಲಿ ಮಾತ್ರ ಬಳಸಿದೆ. ಸಂಪಾದಕರು ಸಂಯೋಜಿಸಿದ ಪಾಠವನ್ನು ಸೂಚಿಸುವಲ್ಲಿ ಬಳಸುವ ಈ ಚಿಹ್ನೆ ಶಾಸನ ಪ್ರಯೋಗಗಳಿಗೆ ಅನ್ವಯವಾಗಿಲ್ಲ.

ಈ ನಿಘಂಟಿನಲ್ಲಿ ಶಾಸನ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಸಾಹಿತ್ಯ, ಶಾಸ್ತ್ರ ಸಾಹಿತ್ಯಕ್ಕೆ ಸಂಬಂಧಿಸಿದ ಹಾಗೂ ಆಡುಮಾತಿನ ರೂಢಿಗಳನ್ನು ಒಳಗೊಂಡಂತೆ ಸುಮಾರು ಎರಡು ಸಾವಿರ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ನಿಘಂಟಿನಲ್ಲಿ ಬಳಸಿದ ಪ್ರಯೋಗಗಳನ್ನು, ಮಹತ್ವವನ್ನು ಈ ಕೆಳಕಂಡಂತೆ ಗಮನಿಸಬಹುದಾಗಿದೆ.

ಕನ್ನಡ ನಿಘಂಟಿನಲ್ಲಿ ಒಂದು ಪದದ ಅರ್ಥ ಕೊಡುವಾಗ ಐತಿಹಾಸಿಕವಾಗಿ ಅದರ ಅರ್ಥ ಕಾಲಕಾಲಕ್ಕೆ ಬದಲಾದಂತೆ ಅದೇ ಕ್ರಮದಲ್ಲಿ ವ್ಯಾಖ್ಯೆಗಳನ್ನು ಜೋಡಿಸಿರುವುದರಿಂದ ಪದಗಳ ಅರ್ಥಭೇದಗಳನ್ನು ಗುರುತಿಸಲು ಇಲ್ಲಿ ದಾಖಲಾದ ಪ್ರಯೋಗಗಳು ಸಹಕಾರಿಯಾಗಿವೆ.

ಉದಾ :- ೧.ಅಮ್ಮ೧, ಆಮ್ಮ೧ (ನಾ) ಅಪ್ಪ; ತಂದೆ.

ಅಮ್ಮ೨ (ನಾ). ೧. ತಾಯಿ; ಮಾತೆ:

ಅಮ್ಮ೩ (ನಾ) ೧. ಆಶ್ಚರ್ಯ, ಆಯಾಸ, ದುಃಖ ಮುಂತಾದವುಗಳನ್ನು ಸೂಚಿಸುವ ಅವ್ಯಯ(೧/೩೫೧)

ಪದಗಳ ವ್ಯಾಖ್ಯೆ ಪ್ರಯೋಗಗಳಿಗೆ ಅಧಿಕೃತ ಮೂಲಗಳಿಂದ ನಿದರ್ಶನಗಳನ್ನು ಉಲ್ಲೇಖಿಸಿರುವುದರಿಂದ ಪದಗಳ ಅರ್ಥ ಹಾಗೂ ಪ್ರಯೋಗಗಳನ್ನು ಸರಿಯಾಗಿ ಗುರುತಿಸಬಹುದು. ಪ್ರಯೋಗಗಳನ್ನು ನೀಡುವುದರಿಂದ ನಿಘಂಟಿನ ಶಬ್ದಾರ್ಥಗಳ ಖಚಿತತೆ ಹೆಚ್ಚುತ್ತದೆ.

ಸರಿಯಾದ, ಸಮಗ್ರವಾದ ಭಾಷಾಜ್ಞಾನಕ್ಕೆ ಆಕರವಾದ ಈ ನಿಘಂಟಿಗೆ ಪ್ರಯೋಗಗಳೇ ಜೀವಾಳವಾಗಿವೆ. ಅರ್ಥ ಸ್ಪಷ್ಟೀಕರಣಕ್ಕಾಗಿ ನೀಡಿರುವ ಪ್ರಯೋಗಗಳ ಉಲ್ಲೇಖವೇ ಕೆಲವೊಮ್ಮೆ ಒಂದು ಪುಟದ ವ್ಯಾಪ್ತಿಯನ್ನು ಹೊಂದಿದ್ದು, ಮೂಲಕಾವ್ಯದ ಬಗ್ಗೆ ಆಸಕ್ತಿ ಬೆಳೆಸಿಕೊಳ್ಳಲು ಸಹಕಾರಿಯಾಗಿವೆ.

ಕನ್ನಡ ನಿಘಂಟಿನ ಎಂಟು ಸಂಪುಟಗಳಲ್ಲಿ ದಾಖಲಾಗಿರುವ ಆಯ್ದ ಪ್ರಯೋಗಗಳ ವಿವರಣೆಯನ್ನು ನೀಡಲಾಗಿದೆ.

ಒಂದನೇ ಸಂಪುಟದಲ್ಲಿರುವ 'ಅಲೆ' ಎನ್ನುವ ಪದಕ್ಕಿರುವ ಅರ್ಥ ಮತ್ತು ಪ್ರಯೋಗಗಳನ್ನು ದಾಖಲಿಸಲಾಗಿದೆ.

ಅಲ್ವ (ಕ್ರಿ) :-

೧. ಸಂಚರಿಸು ; ಅಲ್ಲಾಡು : "ಅಲೆ – ಪರಿಭಾವ (ತಿರಸ್ಕರಿಸು), ಲೋಲನಯೋಃ (ಚಲಿಸು)" (ಶಮಧಾ); ಮಸಗಿದ ಕಂಪು ಕಂಪನೊಳಕೊಂಡಲೆವೊಂದಲ[ರಂಬಿ]ವಂದು ಪಾಟಳಿಸುವುವು . . .ಪರಿಶ್ರಮಂಗಳಂ (ಪಂಪಭಾ.೧೧–೪); ದೆಸೆದೆಸೆಯೊಳಲೆವ ಕಣ್ಮಲರ್ಗಳಿನುನ್ಮತ್ತ ಗಜಗಮನೆಯುರ್ಬಂದೊತ್ತಿಗೆ ನಿಲ್ವರ್ (ಸುಕುಮಾ.೯–೬೨); ಅಳೆದೊಡೊಂದಡಿ ಮೇರುತನಕತ್ತಲೆದುದೊಂದಡಿ ಮಾನುಷೋತ್ತರ ಕಳತೆಯಾದುದು ವಿಕ್ರಿಯೆಯನಾಂತಾ ತ್ರಿವಿಕ್ರಮನ (ಸಾಳ್ವಭಾ. ೮–೨೮).

೨. ಗುರಿಯಿಲ್ಲದೆ ತಿರುಗಾಡು ; ವ್ಯರ್ಥವಾಗಿ ಸುತ್ತಾಡು : ಈ ಊರಿನಿಂದ ಆ ಊರಿಗೆ. . . ವರ್ಷಗಟ್ಟಲೆ ಅಲೆಯುತ್ತಿದ್ದೆ (ಬಾಣಾಆ. ೧೧) ; ಅವನು ಕೆಲಸವಿಲ್ಲದೆ ಸುಮ್ಮನೆ ಸಿಕ್ಕಿದ ಕಡೆ ಅಲೆಯುತ್ತಾನೆ (ರೂಢಿ)

೩. ಪರಿಭವಿಸು ; ಸೋಲಿಸು: ವ್ಯಪಗತಭಯಾ ದಯಾಲೂ ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್ (ಕವಿರಾ. ೨–೨೨)

೪. ಕಾಡು ; ಹಿಂಸಿಸು : ನಮ್ಮ ಜನ್ಮಾಂತರದಿಂದಂ ಬಂದ ಮೋಹಂ ಬಿಡದಲೆವುದರಿಂದಾದೊಡಂ (ಆದಿಪು. ೪–೮೯) ; ಬಲದೇವಂ ಭೀಮನ ಭುಜಬಳದೇವಂ ಮನಮನಲೆಯೆ (ಗದಾಯು. ೮–೪೩) ; ನಿಂದು ದೇಹವನಲೆದುದಲ್ಲಿ ರೋಗದ ಕೇಳಿ (ಬಸರ. ೫–೧೪೮) ; ಜಳದಂ ಕಳಸಿಗೆ ಪಡಲರಿ ಫಳತ್ರಯಂ ದೇವದಾರು ನಿಶೆ ನಿಂಬಮಿವಂ ಜಳದಿಂ ಮರುಗಿಸಿ ಕುಡಇಗದು ಕಳೆಗುಂ ಬಿಡದಲೆವ ಸನ್ನಿವಾತಜ್ವರಮಂ (ಲೋಕೋಪ. ೯–೨೦).

೫. ಕಳೆ ; ನಿವಾರಿಸು ; ಹೋಗಲಾಡಿಸು : ಬಳ್ಳಿಗವುಂಗಂ ತಳ್ತೆಲೆವಳ್ಳಿಯ ಕಳ್ತಲೆಯನಲೆವ ಸೊಡರ್ಗುಡಿಗಳನೀಯಳ್ಳಿರೆದಲೆವುವು ಬನದೊಳಗುಳ್ಳರ್ದುಜ್ವಳಿಪ ಚಂಪಕಪ್ರಸವಂಗಳ್ (ಆದಿಪು. ೧೧-೬೭); ವಿಷಮನಲೆಯಲಿಂತಿದೆ ಸಾಲ್ಗುಂ (ಲೋಕೋಪ. ೧೦-೧೭); ತಂದರುಂಧತಿಯ ಮುಂದಿಡೆ ಭೂತಿದಳಿದಸುವನಿತ್ತು ಶಾಪವನಲೆಯಳೆ (ಪದ್ಮರಾ. ೧೧-೧೩೫).

೬. ಮೂದಲಿಸು; ಹಂಗಿಸು; ಹಾಸ್ಯ ಮಾಡು: ಒರ್ಬೆಸಕಳ್ಕು ಜೋಳಗಳ್ಳರಂ ಪಳೆಯೆಡೆಯಿಲ್ಲದೊಳ್ಪಲೆಯುತಿರ್ಪ್ಪುದುಮಾವನ ಗಂಧಹಸ್ತಿಯಂ ಇಯಾಇ (ಎಕ. II ೧೩೪-೩೩: ೯೮೭).

೭. ತಾಗು ; ಸ್ಪರ್ಶಿಸು: ಪಾದತಳಂಗಲಡಿಗೆರಗಿದರಿನರಪಾಲರ ಮಕುಟಮಾಣಿಕ್ಯ ಮರೀಚಿ ಜಾಲ ಬಾಳಾತಪಂಗಳನಲೆದು ಕೆಂಕಮಾದಂತಾದುವು (ಪಂಪಭಾ. ೨-೩೬ ವ) ; ಗಿಳಿ ಸೋವರ್ ಬಳಲುವ ಮುಡಿ ಬೆನ್ನನಲೆಯೇ ಧವಳೇಕ್ಷಣೆಯರು (ಸೌಇಇ. IX-i, ೨೪೯-೨೯ ; ೧೧೪೭); ಸೆಳ್ಳುಗುರ್ಗಳಿಂ ಮುಂದಲೆಯನಲೆವ ನುಣ್ಗುರುಳನೊಯ್ಯಾರಿಸುತ (ಪದ್ಮರಾ.೫-೪೩); ಹರಳೋಲೆ ಕುಣಿಯಲು ಜಡೆ ಬೆನ್ನನಲೆಯಲು (ಕಂನವಿ. ೬-೧೨೩).

೮. ತೊಳೆ; ಜಾಲಿಸು; ಪುಳಿಯೊಳಲೆದ ಪವಳದ ಬಟ್ಟನಂತೆ ಸೊಗಯಿಸುವ ಸಂಸಾರಸಾರೋದಯನ ಬಿಂಬಾಧರಮನಂಗರಾವರಸದುರುಳಿಯಂತಾದುದು (ಪಂಪಭಾ. ೨-೩೯ ವ); ವಾರುಣಿಯನೊಲಿದು ಮುಟ್ಟದ ಕಾರಣದಿಂ ಮುಳುಗುವಂತೆ ತನ್ನಯ ಕಳೆಯಂ ನೀರೊಳಲೆವಂತೆ ಪಶ್ಚಿಮವಾರಿಧಿಯೊಳ್ ಮಗ್ನನಾದನಮೃತಕರಂ (ಲೀಲಾವ. ೩-೬); ಕುದಿಸಿ ಉದಕದೊಳಲೆದು (ಪಾಠಾ. ಳಲುಬಿ) ಬೀಸುತ್ತೊಗೆದು . . . ಮೈಲಿಗೆ ನುಡಿಗಳಹುದು (ಬಸಪು. ೩೬-೪೭).

ಅಲೆದಾಡು = ಸುತ್ತಾಡು ; ತಿರುಗಾಡು : ಮೆಲ್ಲೆಲರೊಂದು ತಣ್ಣನಲೆದಾಡುತ್ತಿದೆ (ನಾಡೋಜ. ೨೨೬) ; ಮನಸ್ಸು ಚಂಚಲವಾಗಿ ಅಲೆದಾಡಿತು (ನನ್ನಜೋ. ೨೬) ಅವನ ಕಣ್ಣು ತನ್ನ ಮನೆಯನ್ನು ಹುಡುಕಿ ಅಲೆದಾಡಿತು (ಯೋಧಪು. ೧).

ಅಲೆದಾಟ = ಸುತ್ತಾಟ; ತಿರುಗಾಟ

ಅಲೆದಿಡು = ಭದ್ರವಾಗಿ ಒತ್ತು : ಮೊಳೆಯಲ್ಲಮನುಪ್ಪಿನೊಳಂ ಪುಳಿಯೊಳಮಲೆದಿಟ್ಟು ದಾಸವಣದಲರಂ ತಂದಳೆಯೊಳರೆದಲ್ಲಿ ಕಲಸಿದೊಡೆಳಯೊಳಮಲೆದಿಟ್ಟು ದಾಸವಣದಲರಂ ತಂದಳೆಯೊಳಸಿಗುವುದು ಚೆಲ್ವುವೆತ್ತ ಪವಳದ ಕುಡಿಯಂ (ಲೋಕೋಪ. ೮-೧೮). [ದೇ. ॥ ತಮಿ. ಅಲ್ಲೈ]

ಅಲೆ್ತ (ನಾ).

೧. ಹಿಂಸೆ; ತೊಂದರೆ; ಕಾಟ: ನುಡಿಯೊಳನೃತಂ ತೋರದಂತೆ ನಿನ್ನಲೆಗೆ ನಿಂದಡೆ ಮೆಚ್ಚಿ ಮೇಲೇನ ಕೊಡುವೆನೆಂದೆಂದೆಯದ ಕೊಡು ಬೇಗದಿಂ [ದೆ] ವಿಶ್ವಾಮಿತ್ರ (ಹಚಕಾ. ೧೪-೧೦);

ನೀವಿರ್ದು ಫಲವಾವುದೆಂಬಳಾ ಸಖಿಯರಂ ಭಾವಭವನಲೆಗೆ ಸೈರಿಸದಿಂದು ಮುಖಿಯರಂ (ನಳಚಂ. ೧೯೫); ಕಡುಚೆಲ್ವ ನಿನ್ನ ವಾರತೆಗೇಳಿದಾಕ್ಷಣ ಕುಡುವಿಲ್ಲನಲೆಗೊಳಗಾದೆ (ಕಂನವಿ. ೧೦-೩೪) ; ನಿನ್ನನು ಮರೆದು ಕರ್ಮಾಸುರನಲೆಯೊಳತಿ ಕೊರಗಿ ಕರಗಿದೆನಯ್ಯಾ (ಸನತ್ಕು. ೧೦-೭); ಖರನಲೆಗೆ ಮುನಿಗಣಂ ಚಿತ್ರಾದ್ರಿಯಂ ತ್ಯಜಿಸೆ (ಶ್ರೀರಾಮಾ. ೧೭೭-೪೫).

೨. ಬೀಸುವಿಕೆ ; ಚಲನ : ಎಲರಲೆಯಿಲ್ಲದೇಕೆಳವಳ್ಳಿ ನಡುಗಿತು (ಕಂನವಿ. ೬-೧೬೧). [ದೇ. ॥ ತಮಿ. ಅಲೈ]

ಅಲೆ₃ (ನಾ). (ನೀರಿನ) ತೆರೆ; ತರಂಗ: "ಊರ್ಮಿಃ, ವೀಚಿಃ – ಅಲೆಗಳ ಹೆಸರುಗಳು" (ಸಿದ್ಧಾಂತಿ. ೬೯); ಆ ಹಾಲಿನಲೆಗಳನು ಬಿಡಿಸಿ ಬಂದಿತು ತೇಲಿ ಕೊಳಲ ದನಿ (ನಡೆದಾ. I, ೪೫೧); ವಿದ್ಯುತ್ತಿನ ಅಲೆಗಳಿಗೆ ಸಂಬಂಧಿಸಿದ ಪ್ರಯೋಗಗಳು ಪ್ರದರ್ಶಿಸಲ್ಪಟ್ಟವು (ಸಸ್ಯಕ. ೧೧೧).

[ದೇ. ॥ ತಮಿ. ಅಲೈ ; ತೆಲು. ಅಲ]

ಅಲೆ₄ 'ಅಲ್ಗ' ನೋ.

ಈ ಮೇಲೆ ವಿವರಿಸಿದ 'ಅಲೆ' ಎನ್ನುವ ಪದ ನಾಲ್ಕು ಬೇರೆ ಬೇರೆ ಮುಖ್ಯ ಅರ್ಥಗಳನ್ನು ಹೊಂದಿದೆ. ಮೊದಲನೇ ಪದ ಕ್ರಿಯಾಪದವಾಗಿದ್ದು, ಎಂಟು ಬೇರೆ ಬೇರೆ ಅರ್ಥಗಳನ್ನು ಒಳಗೊಂಡಿದೆ. ಇನ್ನುಳಿದ ಮೂರು ಪದಗಳು ನಾಮಪದಗಳಾಗಿವೆ. ಈ ಎಲ್ಲ ಪದಗಳಿಗೆ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗಿನ ಪ್ರಯೋಗಗಳನ್ನು ನೀಡಲಾಗಿದೆ.

ಎರಡನೇ ಸಂಪುಟದಲ್ಲಿರುವ 'ಕರಿ' ಎನ್ನುವ ಪದಕ್ಕಿರುವ ಅರ್ಥ ಮತ್ತು ಪ್ರಯೋಗಗಳನ್ನು ದಾಖಲಿಸಲಾಗಿದೆ.

ಕರಿ₁ (ಕ್ರಿ).

೧. ಸುಟ್ಟು ಕರಿಕಾಗು; ಸೀದುಹೋಗು : "ಕರಿ–ಅತಿದಾಹೇ (ಸೀದುಹೋಗು)" (ಶಮಧಾ) ; ಪೊಸವೇಟಕಾರರೆರ್ದೆಗಳ್ ಪೊಸಕಾರ ಪೊಡರ್ಪುಗಂಡ[ದೇ]ಂ ಕೂರಿತುವದೇಂ ಕಲಂಕಿದುವು (ಪಂಪಭಾ. ೭-೨೩); ಸೂಡಿದ ಬಾಸಿಗಮಾಗಳಂತೆ ದಳ್ಳುರಿ ತಗುಳ್ದಂದದಿಂ ಕರಿದುದು (ಕಬ್ಬಿಕಾ. ೩೧೩) ; ನವನಖರೇಖೆಗಳ ಕರಿತು ಪೋದುವು (ಸೂಕ್ತಿಸು. ೧೨-೭೯); ಸೊಡರಂ ಪೊತ್ತಿಸಿದನೊಂದಂ. . . ಒತ್ತಿ ಕರಿಯದು ಬೇಯದಿರ್ಪಂ ತತ್ತನುವಿನೊಳಗುರುಪಿದಂ (ಬಸಪು. ೩-೬).

೨. ಹುರಿ ; ಬೆಂಕಿಯಲ್ಲಿ ಸುಡು : ಕಾಯ್ದೋಡಿನೊಳ್ ಪುರಿವುದುಂ ಮೊರ್ಮರಾಗೆ ಕರಿವುದುಂ ಚಿಮಿಚಿಮಿಸೆ ತಾಳಿಸುವುದುಂ (ಸುಕುಮಾ. ೧೧-೪೭ ವ); ಮೆಯ್ಯಂಕೊಳ್ಳಿಯಿಂ ಕರಿದುಂ (ಧರ್ಮಾಮೃ. ೭-೧೦೫).

೩. ಎಣ್ಣೆ ಅಥವಾ ತುಪ್ಪದಲ್ಲಿ ಬೇಯಿಸು : ಅದನ್ನು ಯಾವುದರಲ್ಲೇ ಕರಿದಿರಲಿ ಅದರ ರುಚಿಯೇ ರುಚಿ (ಮಾರ್ಗದ. ೧೦೯) ; ಕರಿದ ಆಹಾರ ರುಚಿಯಾಗಿರುತ್ತದೆ (ಅಡಸೌ. ೮೯).

[ದೇ. ॥ ತಮಿ. ಮಲ. ಕೊಡ. ಕರಿ]

ಕರಿ$_3$ (ನಾ).

೧. ಸೀದು ಹೋಗುವಿಕೆ ; ಕರಿಕು ; ಇದ್ದಿಲು: ಸರಸಿ ಜಂಗಳುಮಾಕೆಯ ಮೆಯ್ ಸೋಂಕಿದನಿತರೊಳೆ ಕರಂಗಿ ಕರಿಯಪ್ಪುವು (ಕಾದಂಉ. ೩೨೯); ಉರಿಯೊಳಗಣ ಕರ್ಪುರಕ್ಕೆ ಕರಿಯುಂಟೇ ಅಯ್ಯಾ (ಬಸಹೆ. ೫೭-೧೫೯) : ನಿನ್ನೀನಗೆಮೊಗದ ಸಿರಿ ಸೀದು ಕರಿಯಾಯ್ತು (ಕುವ್ಯಾಸ. ೧೪-೨); ಕೆಟ್ಟ ಪ್ರಪಂಚವಿದು, ಸುಟ್ಟ ಕರೆ ನರಮನಸು (ಮಂಕುಕ. ೬೨೫).

೨. ಕರಿಯ ಬಣ್ಣ ; ಕಪ್ಪು; ಮಸಿ : "ಕರಿದೆನ್ಸಲ್ಲ ಕರಿಯೆನಲ್ ಕರ್ಪೆನಲ್ ಕಪ್ಪಕ್ಕು" (ಕಶರ. ೨೦) ; ಅವರಂಗದೊಳಿರ್ದ ಮಾನಕಷಾಯದ ಉರಿಯ ಕರಿಯಂ ಕಳೆವುದುಂ (ಪುಣ್ಯಾಸ್ರ. ೧೦-೩೨ ವ); ಹಿಂದಣ ದಿನವೇ ಅವಳು ಜಗಲಿಗೆ ಕರಿಯನ್ನು ಸೇರಿಸಿ ಬಳಿದಿದ್ದಳು (ಹಾಹುತ್ತ. ೮೮).

೩. ಅಶುಭ ; ಕಳಂಕ; ಅಮಂಗಳ. 'ಕರಿಗಾಲ', 'ಕರಿಮುಖ', ಪರಾ.

೪. ಸಂಕ್ರಾಂತಿ, ಗ್ರಹಣ, ಅಮಾವಾಸ್ಯೆ ಮೊದಲಾದ ದಿನಗಳ ಮರುದಿನ ; ಅಶುಭ ಕಾಲ: ಸಂಕ್ರಮನದ ಕರಿಯ ದಿವಸ ಕೂಡಲಸಂಗಮೇಶನ ಜಾತ್ರೆ ಜರಗುತ್ತದೆ (ಶಿಲಾಮು. ೧) ; ಸಂಕರಾತರಿ ಕರಿಯ ದಿನ ಮಿತ್ರೆರೆಲ್ಲಾ ಮಡಿಗಳುಟ್ಟು (ಮಲ್ಲಿಗೆ. ೪).

೫. ಸಸ್ಯಕ್ಕೆ ಬರುವ ಒಂದು ಬಗೆಯ ರೋಗ: ಗಿಡಕ್ಕೆ ಕರಿ ಹತ್ತಿದೆ (ರೂಢಿ).

ಕರಿಕರಿಯಾಗು = ಸೀದುಹೋಗು ; ಸುಟ್ಟು ಕರಿಕಾಗು ; ಉರಿದು ಕರಿಕರಿಯಾದೊಡಾಲದ ಮರದ ಬೂದಿಯ ಮೇಲೆ ನಿರ್ಮಳ ವರಭಸಿತಮಂ ತಳಿಯಲ್ (ಬಸಪು. ೫೦-೭೯).

ಕರಿಬಳಿ = ಸುಟ್ಟ ತೆಂಗಿನ ಸಿಪ್ಪೆಯ ಕರಿಯನ್ನು ಸಗಣಿಯೊಂದಿಗೆ ಬೆರಸಿ ಸಾರಿಸು : ನೆಲಕ್ಕೆ ಸಲ್ಲಿಸುವ ಷೋಡಶೋಪಚಾರ ಅಲ್ಲಿಗೆ ನಿಲ್ಲಲಿಲ್ಲ. ಅದರ ಮೇಲೆ ಮತ್ತೆ ಕರಿಬಳಿಯಲುಂಟು (ಬಾಳಿಗಿ. ೫೧).

ಕರಿಯಹರಿಯುವುದು = ಕಾರ ಹುಣ್ಣಿಮೆಯ ದಿನ ಹೋರಿಗಳನ್ನು ಓಡಿಸಿಕೊಂಡು ಬಂದು ತೋರಣವನ್ನು ಹರಿಯುವ ಒಂದು ಉತ್ಸವ : ಕಾರ ಹುಣ್ಣಿಮೆಯಲ್ಲಿ ಕರಿಯಹರಿಯಲು ಹೊರಟ ಹೋರಿಗಳ ತೆರದಲ್ಲಿ ಮುನ್ನುಗ್ಗೆ ಮೋಡ (ಕರುಶಾ. ೧೬)

[< ಕರಿ೧. / ತಮಿ. ಮಲ. ತುಳು. ಕೊಡ. ಕರಿ]

ಕರಿ$_4$ (ನಾ). ಒಂದು ಬಗೆಯ ಮೂಲಿಗೆ : "ಅಂಗುರ – ಕರಿ" (ಓಷಧಿ. ೫)

ಕರಿ$_5$ (ನಾ).

೧. ಸೊಂಡಿಲನ್ನುಳ್ಳುದು ; ಆನೆ: "ಕರಿಯಾನೆಯಕ್ಕು ಪೆಸರಿಂ" (ಕವಿಕಂ. ೫೯); ಕರಿಕರಿಗಲ್ಲದಿರುಂಪೆಗೆ ಪರಿವುದೆ (ಯಶೋಚ. ೨-೫೪) ; ಕರಿಯು ಕೊಲ್ಲುವ ಹರಿಗೆ ಮರಿಯೆಂಬ ಶಂಕೆ ತಾನೇಕೆ ? (ಶ್ರೀರಾಮಾ. ೨೮-೧೯).

೨. ಎಂಟು ಎಂಬ ಸಂಖ್ಯೆ ಸಂಕೇತ : "ಕರಿ. . . . . ವಾರಣಮಾರಯೆ ಯೆಂಟಕ್ಕೆ ನಾಮಂ" (ವ್ಯವಹಾ.೯-೮).

೩. ಕನ್ನಡಿ.

೪. ಕಮಲ

೫. ಕಸ್ತೂರಿ

೬. ಸರ್ಪ

೭. ಹಂಸ

೮. ಕೀರ್ತಿ

೯. ಪರ್ವತ

೧೦. ಕಾಂತಿ

೧೧. ಕುದುರೆ

೧೨. ವಿಷ್ಣು : "ಕರಿಯೆಂದೆನೆ ಗಿರಿಗಳಕ್ಕಂಉ ಕಾಂತಿಗಳಕ್ಕು ಕರಿಯೆಂದನೆ ಕಮಲ ಕೀರ್ತಿಯಕ್ಕು ಶಬ್ದಾಗಮದೊಳ್ (ಶಬ್ದರ. ೬,೭).

೧೩. [ಛಂದ} ಆರು ಬಗೆಯ ಪ್ರಾಸಗಳಲ್ಲಿ ಒಂದು ಪ್ರಕಾರ ; ಪದ್ಯದ ಪ್ರತಿ ಪಾದದ ಒಂದು ಮತ್ತು ಎರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ಒಂದು ವ್ಯಂಜನ ಬಂದು ಅದರ ಹಿಂದಿನ ಸ್ವರವು ದೀರ್ಘವಾಗಿರುವ ಪ್ರಾಸ : ಹರಿ ಕರಿ ವೃಷಭ ತುರಂಗಂ ಶರಭಮಜಂಗಳುಮೆನಿಪ್ಪ ಷಟ್‌ಪ್ರಾಸಕ್ಕಂ (ಛಂದೋಂಬು. ೧-೪೭). [ಸಂ. ಕರಿನ್]

ಸಾಮಾನ್ಯಾರ್ಥ, ವಿಶೇಷಾರ್ಥ, ಅಲಂಕಾರಿಕ ಅರ್ಥ, ಶ್ಲೇಷಾರ್ಥ, ಹೀನಾರ್ಥ, ಸಾಂಸ್ಕೃತಿಕ ಅರ್ಥ ಮೊದಲಾದ ನೆಲೆಗಳಲ್ಲಿ ಅರ್ಥ ವಿಶೇಷಗಳನ್ನು ಕೊಡಲಾಗಿದೆ. ಈ ನಿಘಂಟು ಪದಭಂಡಾರವನ್ನು ಹೊಂದಿದ್ದು, ಒಂದು ಪದಕ್ಕೆ ವಾಚ್ಯಾರ್ಥ ಮತ್ತು ಲಕ್ಷಣಾರ್ಥಗಳನ್ನು ಕೊಡುವುದಲ್ಲದೇ ಪದಕ್ಕಿರುವ ನಾನಾರ್ಥಗಳನ್ನು ಕೊಡುವ ಮೂಲಕ ಪದ ಬೆಳವಣಿಗೆಯ ಹಂತವನ್ನು, ಪ್ರಯೋಗಗಳನ್ನು ನೀಡಿದೆ. ಇದರಿಂದ ಪ್ರಯೋಗಗಳ ಮೂಲಕ ಅರ್ಥ ಮನದಟ್ಟಾಗುತ್ತದೆ. ಪ್ರಯೋಗಗಳನ್ನು ಉಲ್ಲೇಖಿಸಿರುವುದು ನಿಘಂಟಿನ ಮೌಲ್ಯವನ್ನು ಹೆಚ್ಚಿಸಿದೆ. ಯಾವ ಪದವನ್ನು ಎಲ್ಲೆಲ್ಲಿ, ಯಾವ ಅರ್ಥದಲ್ಲಿ ಬಳಸಲಾಗಿದೆ ಎನ್ನುವುದನ್ನು ಕಂಡುಕೊಂಡು ಪ್ರಯೋಗಗಳನ್ನು ನೀಡಿರುವುದು ಇದರ ವೈಶಿಷ್ಟ್ಯವಾಗಿದೆ.

"ಕೆಲವು ಪದಗಳಿಗೆ ಹಿಂದಿನ ನಿಘಂಟುಗಳಿಂದ ಅರ್ಥ ತಿಳಿದುಬಂದಿರುವುದೇನೋ ನಿಜ; ಆದರೆ ಕವಿಗಳು ಅವನ್ನು ಬಳಸುವಾಗ ಅವುಗಳ ಪ್ರಸಿದ್ಧಾರ್ಥಕ್ಕಿಂತ ತುಸು ಭಿನ್ನವಾದ ಬೇರೆ ಬೇರೆ

ಬಣ್ಣದ ಅರ್ಥಗಳಲ್ಲಿ ಪ್ರಯೋಗ ಮಾಡಿದ್ದಾರೆ. ಆದ್ದರಿಂದ ಅಂಥ ಪ್ರಯೋಗಗಳನ್ನು ಮೊದಲು ಹುಡುಕಬೇಕು. ಅಪೂರ್ವವಾದ ಪದಗಳಿಗೂ ಹೀಗೆಯೇ. ಬೇರೆ ಬೇರೆ ಸಂದರ್ಭಗಳಲ್ಲಿ ಹೇಗೆ, ಯಾವ ಅರ್ಥದಲ್ಲಿ, ಪದಗಳನ್ನು ಕವಿಗಳು ಉಪಯೋಗಿಸಿರಬಹುದೆಂಬುದನ್ನು ತಿಳಿಯಬೇಕಾದರೆ ಅವರ ಕಾವ್ಯಗಳಲ್ಲಿ ಮಿನುಗುವ ಅವರ ಪ್ರಯೋಗಗಳೇ ಶರಣು”[೧] ಎಂದು ಡಿ.ಎಲ್.ನರಸಿಂಹಾಚಾರ್ ಅವರು ಹೇಳಿರುವುದು ಪ್ರಯೋಗಗಳ ಮಹತ್ವವನ್ನು ತಿಳಿಸುತ್ತದೆ. ಕನ್ನಡ ನಿಘಂಟಿನಲ್ಲಿರುವ ಪ್ರಯೋಗಗಳು ಅಂತಹ ಹಿರಿಮೆಯನ್ನು ಹೊಂದಿವೆ.

### ೪.೨.೫. ನಿಷ್ಪತ್ತಿ ವಿಧಾನ

ನಿಷ್ಪತ್ತಿ ಎಂದರೆ ಶಬ್ದದ ಹುಟ್ಟು, ವ್ಯುತ್ಪತ್ತಿ ಎಂದು ಅರ್ಥ. ಪ್ರಕೃತಿ ಪ್ರತ್ಯಯಗಳ ಸೇರುವಿಕೆಯಿಂದಾದ ರೂಪಸಿದ್ಧಿ. ಒಂದು ಪದದ ಮೂಲವನ್ನು ಕಂಡು ಹಿಡಿದು ಅದರಿಂದ ಪ್ರಕೃತ ಪದವನ್ನು ಸೂಚಿಸುವ ಪ್ರಕ್ರಿಯೆಯೇ ನಿಷ್ಪತ್ತಿ ವಿಧಾನವೆನಿಸಿಕೊಳ್ಳುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಸಂಸ್ಕೃತ ಶಬ್ದ, ದೇಶ್ಯಶಬ್ದ, ತದ್ಭವ ಶಬ್ದ, ಅನ್ಯದೇಶ್ಯ ಮತ್ತು ಜ್ಞಾತಿಶಬ್ದಗಳು ಮೊದಲಾದವುಗಳನ್ನು ವಿವರಿಸುವಾಗ ನಿಷ್ಪತ್ತಿಯನ್ನು ಮುಖ್ಯ ಉಲ್ಲೇಖಕ್ಕೆ ಮಾತ್ರ ಕೊಡಲಾಗಿದೆ. ಪ್ರತಿಯೊಂದು ಮುಖ್ಯ ಶಬ್ದದ ನಿಷ್ಪತ್ತಿಯನ್ನು ಆ ಶಬ್ದದ ಕೆಳಗೆ ಪ್ರತ್ಯೇಕವಾಗಿ ಸೂಚಿಸಿದೆ. ನಿಷ್ಪತ್ತಿ ತಿಳಿಯದಿರುವ ಕಡೆ ಪ್ರಶ್ನೆಯನ್ನು ಹಾಕಿದೆ.

ಸಂಸ್ಕೃತ ಶಬ್ದಗಳ ರಚನೆಯಲ್ಲಿ ಸೇರಿರುವ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರಿಸಿರುವುದಿಲ್ಲ. ಸಿದ್ಧವಾದ ಶಬ್ದರೂಪಗಳನ್ನು ಮಾತ್ರ ಕೊಡಲಾಗುವುದು. ಹಾಗೆಯೇ ನಿಷೇಧರೂಪಗಳನ್ನು ಉಪಸರ್ಗ ಸೇರಿದ ರೂಪಗಳನ್ನು ಬಿಡಿಸಿ ತೋರಿಸಿಲ್ಲ. ಸಂಸ್ಕೃತ ಸಮಾಸಗಳಲ್ಲಿ ಸೇರಿರುವ ಬೇರೆ ಬೇರೆ ಶಬ್ದರೂಪಗಳನ್ನು ಮಾತ್ರ ಬಿಡಿಸಿ ತೋರಿಸಲಾಗಿದೆ. ದೇಶ್ಯಶಬ್ದಗಳಿಗೆ ಅವುಗಳ ರಚನೆ ಸ್ಪಷ್ಟವಾಗುವಂತೆ ಪ್ರಕೃತಿ ಪ್ರತ್ಯಯಾದಿಗಳನ್ನು ವಿಭಜಿಸಿ ತೋರಿಸಲಾಗಿದೆ. ಸಮಾಸಗಳಲ್ಲಿ ಸೇರಿರುವ ಬೇರೆ ಬೇರೆ ಪ್ರಕೃತಿರೂಪಗಳನ್ನು ಕೊನೆಯಲ್ಲಿ ಸೇರುವ ಅಂತ್ಯ ಪ್ರತ್ಯಯಗಳನ್ನು ನೀಡಲಾಗಿದೆ.

ಸಂಸ್ಕೃತ ಅಥವಾ ಪ್ರಾಕೃತದಿಂದ ಬಂದ ಶಬ್ದಗಳನ್ನು ಮಾತ್ರ ತದ್ಭವವೆಂದು ಪರಿಗಣಿಸಲಾಗಿದ್ದು, ಇವುಗಳ ಮೂಲವನ್ನು ನಿಷ್ಪತ್ತಿ ಚಿಹ್ನೆ(<)ಯ ಮೂಲಕ ಸೂಚಿಸಿದೆ. ಕನ್ನಡದಲ್ಲಿ ಬಳಕೆಯಲ್ಲಿರುವ ತದ್ಭವ ಮೂಲಭಾಷೆಯಿಂದ ನೇರವಾಗಿ ಬಾರದೆ ಬೇರೆ ಭಾಷೆಯ ಮೂಲಕ ಬಂದಿರುವ ಪಕ್ಷದಲ್ಲಿ ನೇರ ಸಂಪರ್ಕವುಳ್ಳ ಶಬ್ದವನ್ನು ನಿಷ್ಪತ್ತಿ ಚಿಹ್ನೆಯಿಂದ ಸೂಚಿಸಿ ಆ ಶಬ್ದದ ಮುಂದೆ ಓರೆಯಾದ ಲಂಬಗೆರೆ (/)ಯನ್ನು ಕೊಟ್ಟು ಮೂಲಶಬ್ದವನ್ನು ಸೂಚಿಸಲಾಗಿದೆ.

ಈ ನಿಘಂಟಿನಲ್ಲಿ ಮುಖ್ಯ ಶಬ್ದ ಯಾವ ಭಾಷೆಯದೆಂದು ಗೊತ್ತಿರುವಾಗ ಆ ಭಾಷೆಯ ಹೆಸರನ್ನು ಸೂಚಿಸಲಾಗಿದ್ದು, ಮೂಲಭಾಷೆ ಗೊತ್ತಿಲ್ಲದಿದ್ದರೆ 'ಅನ್ಯದೇ' ಎಂದು ಹೇಳಿ, ಈ ಅನ್ಯದೇಶ್ಯ ಶಬ್ದಗಳಿಗೂ ಆಯಾ ಶಬ್ದಕ್ಕೆ ಸಂಬಂಧಪಟ್ಟಂತೆ ಮುಖ್ಯವಾದ ಕೆಲವು ಇತರ

ಭಾಷೆಗಳಿಂದ ಸಂವಾದಿ ಶಬ್ದಗಳನ್ನು ಕೊಡಲಾಗಿದೆ. ದೇಶ್ಯ ಶಬ್ದಗಳಿಗೆ ಇತರ ಸೋದರ ಭಾಷೆಗಳಲ್ಲಿ ದೊರೆಯುವ ಜ್ಞಾತಿ ಶಬ್ದಗಳನ್ನು ಕೊಟ್ಟಿದೆ. ಅರ್ಥಭೇದವಿದ್ದಲ್ಲಿ ಮಾತ್ರ ಅರ್ಥವನ್ನು ಬರೆದು ದಾಖಲಿಸಿದೆ. ಹೀಗೆ ಕನ್ನಡ ನಿಘಂಟಿನಲ್ಲಿರುವ ಪದಗಳಿಗೆ ನಿಷ್ಪತ್ತಿ ಕೊಡುವಾಗ ಜ್ಞಾತಿ ಅಥವಾ ಸಂವಾದಿ ಶಬ್ದಗಳ ರೂಪಗಳನ್ನು ತೋರಿಸುವಾಗ ಅವುಗಳ ಪ್ರಕೃತಿರೂಪದಲ್ಲಿ ತೋರಿಸಲಾಗಿದ್ದು, ಬಳಕೆದಾರರಿಗೆ ಇದರಿಂದ ಅನುಕೂಲವಾಗುತ್ತದೆ.

**೪.೨.೬. ವಿರಾಮ ಚಿಹ್ನೆಗಳು**

ನಾವು ಮಾತನಾಡುವಾಗ ಮಾತುಗಳ ಅರ್ಥ ಸ್ಪಷ್ಟತೆಗಾಗಿ ವಿರಾಮ, ಧ್ವನಿಯ ಏರಿಳಿತ, ಆಂಗಿಕ ಅಭಿನಯ, ಮುಖದಲ್ಲಿ ಭಾವನೆಗಳನ್ನು ಬದಲಾವಣೆ ಮಾಡುತ್ತೇವೆ. ಇದರಿಂದ ನಮ್ಮ ಆಲೋಚನೆ, ಅಭಿಪ್ರಾಯಗಳು ಕೇಳುಗರಿಗೆ ಸ್ಪಷ್ಟವಾಗಿ ಅರ್ಥವಾಗುತ್ತದೆ. ಅದೇ ರೀತಿ ಬರವಣಿಗೆಯ ಭಾಷೆಯಲ್ಲಿ ಭಾವನೆಗಳನ್ನು, ಅರ್ಥವನ್ನು ಸ್ಪಷ್ಟಪಡಿಸಲು ಬಳಸುವ ಚಿಹ್ನೆಗಳನ್ನು ವಿರಾಮ ಚಿಹ್ನೆಗಳೆಂದು ಕರೆಯುತ್ತಾರೆ. ಇವುಗಳಿಗೆ ಲೇಖನ ಚಿಹ್ನೆಗಳು ಅಥವಾ ಲೇಖನ ಸಂಕೇತಗಳು ಎನ್ನುವ ಹೆಸರುಗಳು ಇವೆ. ಇವು ಬರವಣಿಗೆಯಲ್ಲಿ ಬಳಸುವ ಚಿಹ್ನೆ, ಸಂಕೇತಗಳಾಗಿದ್ದು, ಬರಹ ಸೌಂದರ್ಯವನ್ನು ಹೆಚ್ಚಿಸಿ, ಅರ್ಥ ಮಾಡಿಕೊಳ್ಳಲು ನೆರವಾಗುತ್ತವೆ.

ಬರವಣಿಗೆಯಲ್ಲಿ ಲೇಖನ ಚಿಹ್ನೆಗಳ ಪಾತ್ರ ಮಹತ್ವದ್ದಾಗಿದ್ದು ಇವುಗಳನ್ನು ಸರಿಯಾಗಿ ಬಳಸದಿದ್ದಲ್ಲಿ ಅರ್ಥವು ಅಸ್ಪಷ್ಟವಾಗಿ ಅನೇಕ ತೊಡಕುಗಳಿಗೆ ಕಾರಣವಾಗುತ್ತದೆ.

ಓದುಗರಿಗೆ ವಿಷಯ ಸುಲಭವಾಗಿ ಅರ್ಥವಾಗಲು, ಭಾವನೆಗಳನ್ನು ಸೂಚಿಸಲು ಮತ್ತೊಬ್ಬರ ಮಾತುಗಳನ್ನು ವಾಕ್ಯಗಳಲ್ಲಿ ಅಳವಡಿಸಲು, ವಿಷಯದ ವಿವರಣೆ ನೀಡಲು ಹಾಗೂ ಪೂರಕ ಮಾಹಿತಿಗಳನ್ನು ತಿಳಿಸಲು ಲೇಖನ ಚಿಹ್ನೆಗಳನ್ನು ಬಳಸಲಾಗುತ್ತಿದೆ.

"ಬರವಣಿಗೆಯಲ್ಲಿ ಅರ್ಥವಿಶದತೆಯನ್ನು ಉಂಟುಮಾಡಲು ಮತ್ತು ಓದುವಾಗ ಉಸಿರನ್ನು ನಿಲ್ಲಿಸಲು ಪದಗಳ, ವಾಕ್ಯಭಾಗಗಳ ಮತ್ತು ವಾಕ್ಯಗಳ ನಡುವೆ ಅರ್ಥಾನುಸಾರಿಯಾಗಿ, ಉಚಿತವಾಗಿ ಎಡೆಗಳಲ್ಲಿ ವಿರಾಮ ಸ್ಥಾನಗಳನ್ನು ಸೂಚಿಸಲು ಬಳಸುವ ಚುಕ್ಕೆ, ಕೊಕ್ಕೆ ಮುಂತಾದ ಲಿಖಿತ ಸಂಕೇತಗಳು."[೨]

ಕನ್ನಡದಲ್ಲಿ 'ಲೇಖನ ಚಿಹ್ನೆಗಳು' ಮೊದಲು ಬಳಕೆಯಲ್ಲಿರಲಿಲ್ಲ. ಕನ್ನಡದ ಹಸ್ತಪ್ರತಿಗಳಲ್ಲಾಗಲೀ ಅಥವಾ ಶಾಸನಗಳಲ್ಲಾಗಲೀ ಕಂಡುಬರುವುದಿಲ್ಲ. ಆಂಗ್ಲ ಭಾಷೆಯ ಪ್ರಭಾವದಿಂದ ಕನ್ನಡದಲ್ಲಿಯೂ ಲೇಖನ ಚಿಹ್ನೆಗಳು ರೂಢಿಗೆ ಬಂದಿವೆ. ಇವುಗಳನ್ನು ಸೂಕ್ತವಾಗಿ ಬಳಸಿದಾಗ ಅರ್ಥ ಸ್ಪಷ್ಟಗೊಂಡು ಬರವಣಿಗೆಯ ಮೌಲ್ಯ ಹೆಚ್ಚುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಕನ್ನಡ ನಿಘಂಟಿನಲ್ಲಿ ಲೇಖನ ಚಿಹ್ನೆಗಳನ್ನು ಪದಗಳ ವಿಂಗಡಣೆ, ಅರ್ಥಸ್ಪಷ್ಟತೆ ಹಾಗೂ ಅರ್ಥಖಚಿತತೆ ಮೊದಲಾದ ಉದ್ದೇಶಗಳಿಗೆ ಬಳಸಲಾಗಿದ್ದು, ನಿಘಂಟು ಬಳಸುವವರಿಗೆ ಸುಲಭವಾಗಿ ಅರ್ಥವಾಗುತ್ತದೆ. ಕನ್ನಡ

ನಿಘಂಟಿನಲ್ಲಿ ಲೇಖನ ಚಿಹ್ನೆಗಳನ್ನು ಗಮನಿಸಲಾಗಿದೆ. ಯಾವ ರೀತಿಯಲ್ಲಿ ಬಳಕೆಯಾಗಿದೆ ಎಂಬುದನ್ನು ಉದಾಹರಣೆಗಳೊಂದಿಗೆ ಈ ಕೆಳಕಂಡಂತೆ ವಿವರಿಸಲಾಗಿದೆ.

ಮಾತಿನ ಅಭಿಪ್ರಾಯ, ನಿಲುಗಡೆ, ಅರ್ಧವಿರಾಮ ಮೊದಲಾದವುಗಳನ್ನು ಸೂಚಿಸಲು ಬಳಸುವ ಕೆಲವು ಚಿಹ್ನೆಗಳನ್ನು ನಾವು ಲೇಖನ ಚಿಹ್ನೆಗಳು ಎಂದು ಕರೆಯುತ್ತೇವೆ. ಮಾತಿನಲ್ಲಿ ನಿರ್ದಿಷ್ಟವಾದ ಅಭಿಪ್ರಾಯವನ್ನು ವ್ಯಕ್ತಪಡಿಸಲು ಪೂರಕವಾಗಿ ಧ್ವನಿಯ ಉಚ್ಚಾರಣೆ, ಏರಿಳಿತ, ವಿರಾಮಗಳು ಎಷ್ಟು ಮುಖ್ಯವೋ ಬರವಣಿಗೆಯಲ್ಲೂ ಸೂಕ್ತ ಲೇಖನ ಚಿಹ್ನೆಗಳನ್ನು ನಮೂದಿಸಿ ಅಭಿಪ್ರಾಯವನ್ನು ಸ್ಪಷ್ಟಪಡಿಸಬೇಕಾದುದು ಅವಶ್ಯಕ. ಮನುಷ್ಯನ ಮೆದುಳಿಗೆ ಸೀಮಿತ ಗ್ರಹಣಶಕ್ತಿಯಿರುವುದರಿಂದ ವಿರಾಮ ಚಿಹ್ನೆಗಳನ್ನು ಉಪಯೋಗಿಸಿ ಬಳಸುವ ಭಾಷೆ ಓದುಗರಿಗೆ ಸುಲಭವಾಗಿ ಅರ್ಥವಾಗುತ್ತದೆ. ಅದೇ ರೀತಿ ಪ್ರಸ್ತುತ ನಿಘಂಟನ್ನು ಸರಿಯಾಗಿ ಅರ್ಥೈಸಿಕೊಳ್ಳಲು, ಪದಗಳ ಸರಿಯಾದ ತಿಳಿವಳಿಕೆಗಾಗಿ ಈ ನಿಘಂಟಿನಲ್ಲಿ ಲೇಖನ ಚಿಹ್ನೆಗಳ ಬಳಕೆ ಯಾವ ರೀತಿಯಲ್ಲಾಗಿದೆ ಎನ್ನುವುದನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದೆ.

**೧. ( . ) ಪೂರ್ಣ ವಿರಾಮ**

ಸಾಮಾನ್ಯವಾಗಿ ವಾಕ್ಯದಲ್ಲಿ ಬರುವ ನಿಲುಗಡೆಗೆ ಪೂರ್ಣ ವಿರಾಮ ಎಂದು ಹೆಸರು. ಆದರೆ, ಈ ನಿಘಂಟಿನಲ್ಲಿ ಬೇರೆ ಬೇರೆ ಉದ್ದೇಶಗಳಿಗಾಗಿ ಪೂರ್ಣ ವಿರಾಮವನ್ನು ಬಳಸಲಾಗಿದೆ. ಅವೆಂದರೆ.

- ಈ ನಿಘಂಟಿನಲ್ಲಿ ದಾಖಲಿಸಿಲಾದ ಮುಖ್ಯ ಉಲ್ಲೇಖಗಳ ವಾಚಕ ನಿರ್ದೇಶನವಾದ ಅನಂತರವೂ,

  ಉದಾ :- ೧. ಅಂಟರಳೆ (ನಾ). ಒಂದು ಜಾತಿಯ ಗಿಡ; ಅಂಟವಾಳ.

- ಅರ್ಥಚ್ಛಾಯೆಯನ್ನು ತೋರಿಸುವ ೧, ೨ ಮುಂತಾದ ಸಂಖ್ಯೆಗಳ ಮುಂದೆಯೂ,

  ಉದಾ :- ಅಂಟಿಕ್ಕು (ಕ್ರಿ). ೧. ಅಂಟಿಸು. ೨. ನಾಟಿ ಹಾಕು; ಕಸಿಮಾಡು (ಕ್ರಿ). ೩. ಬೆಂಕಿಹಚ್ಚು (ಸ್ಯಾಂಡರ್)

- ಅರ್ಥಪ್ರಯೋಗಗಳೇ ಮೊದಲಾದ ಎಲ್ಲ ವಿವರಗಳು ಮುಗಿದು ನಿಷ್ಪತ್ತಿಯನ್ನು ಪ್ರಾರಂಭಿಸುವ ಮೊದಲು, ಉದಾ:- ಅಕ್ಕಯ್ಯ (ನಾ). ಅಕ್ಕನನ್ನು ಪ್ರೀತಿಯಿಂದ ಕರೆಯುವ ಮಾತು.

- ಉದ್ಧರಿಸಿದ ಪ್ರಯೋಗಗಳ ಆಕರಗಳ ಸಂಕ್ಷಿಪ್ತ ಸೂಚನೆ ಮುಗಿದ ಮೇಲೆಯೂ,

  ಉದಾ:- ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದ ಕನಸ ಕಂಡೆ (ಮಹಾದೇ. ೧೫-೨).

- 'ನೋ', 'ಪರಾ', 'ಹೋ' ಮುಂತಾದ ಸಂಕೇತಗಳ ಮುಂದೆಯೂ,

  ಉದಾ:- ೧. ಅಟ್ಟುಕುಳಿ 'ಅಟ್ಟುಗುಳಿ' ನೋ.

೨. ಅಟ್ಟು (ಗು). ದಟ್ಟವಾದ; ಒತ್ತಾದ (?): 'ಅಟ್ಟಾಗು' ಪರಾ.

೩. ಅಚ್ಚುಬೆಲ್ಲ (ನಾ). 'ಉಂಡೆಬೆಲ್ಲ' ಹೋ.

೪. ಅಕ್ಕಾಜಿ (ನಾ). 'ಅಣ್ಣಾಜಿ' 'ಭಾವಾಜಿ' 'ಮಾವಾಜಿ' ಇತ್ಯಾದಿ ಹೋ.

- ನಿಷ್ಪತ್ತಿಯಲ್ಲಿ ಸಮಾಸಗಳನ್ನು ಬಿಡಿಸಿ ತೋರಿಸಿದ ಮೇಲೆ

ಉದಾ :- ಅಟಮಟಿಸು (ಕ್ರಿ). [ಅಟಮಟ + – ಇಸು.]

- ಜ್ಞಾತಿ ಅಥವಾ ಸಂವಾದಿ ಶಬ್ದಗಳನ್ನು ಕೊಡುವುದಕ್ಕೆ ಮೊದಲು

ಉದಾ :- [ತೆಲು. ಅಟಮಟಿಂಚು]

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಪೂರ್ಣವಿರಾಮ ಚಿಹ್ನೆಯನ್ನು ಬಳಸಲಾಗಿದೆ.

೨. ( , ) ಅಲ್ಪವಿರಾಮ

ಒಂದೇ ಸಮನೆ ಮಾತನಾಡುತ್ತಿರುವವರು ಉಸಿರು ತೆಗೆದುಕೊಳ್ಳುವುದಕ್ಕಾಗಿ ಆಗಾಗ ಮಾತು ನಿಲ್ಲಿಸಬೇಕಾಗುತ್ತದೆ. ನಾವು ಆಡುವ ಮಾತು ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದ್ದು ಕೇಳುವವರಿಗೆ ಸ್ಪಷ್ಟವಾಗಿ ಅರ್ಥವಾಗುವಂತಿರಬೇಕು. ಆದರೆ ಅನೇಕ ಅಂಶಗಳನ್ನು ಒಂದೇ ವಾಕ್ಯದಲ್ಲಿ ಹೇಳಬೇಕಾದಾಗ, ವಾಕ್ಯ ದೀರ್ಘವಾಗಬೇಕು. ಹಾಗಿದ್ದರೂ ಪದಗಳ ನಡುವಣ ಅರ್ಥ ಸಂಬಂಧ ಗೊಂದಲವಾಗದ ಹಾಗೆ ಅಲ್ಲಲ್ಲಿ ವಿರಾಮವಿಟ್ಟು ಮಾತು ಮುಂದುವರೆಸಬೇಕು. ಬರೆಯುವಾಗ ಈ ಚಿಕ್ಕ ನಿಲುಗಡೆಯನ್ನು ಅಲ್ಪವಿರಾಮ ಎಂದು ಕರೆಯಲಾಗುತ್ತದೆ.

ಪ್ರಸ್ತುತ ನಿಘಂಟಿನಲ್ಲಿ ಈ ಕೆಳಕಂಡ ಕಾರಣಗಳಿಗಾಗಿ ಅಲ್ಪವಿರಾಮವನ್ನು ಉಪಯೋಗಿಸಿದ್ದಾರೆ.

- ಪ್ರಧಾನ ಶಬ್ದ ಮತ್ತು ಅದರ ಇತರ ರೂಪಗಳನ್ನು ಒಂದೆಡೆ ಉಲ್ಲೇಖಿಸುವಾಗ ಮಧ್ಯದಲ್ಲಿ ಅಲ್ಪವಿರಾಮವನ್ನು ಬಳಸಲಾಗಿದೆ.

ಉದಾ:- ಅಕ್ಕಲ್ತು, ಅಖಲು. ಅಂಕಕಾಱ, ಅಂಕಂಗಾಱ, ಅಂಕಗಾಱ.

- ಸಂಕೇತ ಸೂಚನೆಗಳಲ್ಲಿ ಸಂಪುಟ ಭಾಗಗಳನ್ನು ಸೂಚಿಸುವ ಅಂಕಿಗಳ ಮುಂದೆ ಅಲ್ಪವಿರಾಮವನ್ನು ಬಳಸಲಾಗಿದೆ.

ಉದಾ:- ಅಂಕೆ (ಮೈಆರಿ. ೧೯೩೮, ೧೬–೧೦; ೧೭೬೨). ಅಕ್ಕಯ್ಯ (ಎಕ. XIV, ನಾಗಮಂ. ೧೧೧–೩; ೯೬೧). ಅಮ್ಮಲಗೊಟ್ಟಗೆ (ಸೌಇ IX-ii, ೪೪೬–೬೦; ೧೪೩೬).

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಅಲ್ಪವಿರಾಮ ಚಿಹ್ನೆಯನ್ನು ಬಳಸಿದೆ.

೩. ( ; ) ಅರ್ಧವಿರಾಮ

- ಒಂದೇ ಬಗೆಯ ಅರ್ಥವಿರುವಲ್ಲಿಯೂ, ಅರ್ಥದ ಛಾಯೆ ಸ್ವಲ್ಪಮಟ್ಟಿಗೆ ಭಿನ್ನವಾಗಿರುವಾಗಲೂ ನಡುವೆ ಅರ್ಧವಿರಾಮವನ್ನು ಬಳಸಲಾಗಿದೆ.

  ಉದಾ:- ಅಗಣಿತ (ಗು). ೧. ಎಣಿಸಿಲ್ಲದ; ಲೆಕ್ಕವಿಲ್ಲದ; ಲೆಕ್ಕಕ್ಕೆ ಮೀರಿದ.

  ಅಕ್ಕರಗೊಟ್ಟಿ (ನಾ). ವಿದ್ವಾಂಸರ ಸಭೆ; ವಿದ್ವಾಂಸರೊಡನೆ ಮಾಡುವ ಚರ್ಚೆ,

  ಸಲ್ಲಾಪ ಮುಂತಾದವು.

- ಪ್ರಯೋಗವನ್ನು ಕೊಡುವಾಗ ಒಂದು ಪ್ರಯೋಗ ಮುಗಿದು ಮತ್ತೊಂದು ಪ್ರಯೋಗ ಪ್ರಾರಂಭವಾಗುವ ಮುನ್ನ ಅವುಗಳ ನಡುವೆ ಅರ್ಧವಿರಾಮವನ್ನು ಬಳಸಲಾಗಿದೆ.

  'ಅಕ್ಕ' ಮೊದಲಾದ ಶಬ್ದಗಳಿಗೆ ಕೊಟ್ಟಿರುವ ಉದಾಹರಣೆಗಳನ್ನು ನೋಡಿ.

- ಸಂಕೇತ ಸೂಚನೆಗಳಲ್ಲಿ ಎಲ್ಲ ವಿವರಗಳು ಮುಗಿದ ಮೇಲೆ ಕಾಲ ನಿರ್ದೇಶಕ್ಕೆ ಮೊದಲು ಈ ಚಿಹ್ನೆಯನ್ನು ಬಳಸಲಾಗಿದೆ.

  ಉದಾ:- ಅಕಸಾಲೆವಾಳು (ನಾ)... (ಸೌಇಇ IX-ii, ೧೨೩-೨೬; ೧೦೫೯)

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಅರ್ಧವಿರಾಮ ಚಿಹ್ನೆಯನ್ನು ಬಳಸಿದೆ.

೪. ( : ) ವಿವರಣವಿರಾಮ

ಶಬ್ದಕ್ಕೆ ಅರ್ಥವನ್ನು ಕೊಟ್ಟ ಮೇಲೆ ಪ್ರಯೋಗಗಳನ್ನು ಪ್ರಾರಂಭಿಸುವ ಮೊದಲು ವಿವರಣ ವಿರಾಮವನ್ನು ಉಪಯೋಗಿಸಲಾಗಿದೆ.

ಉದಾ:- ಅಂಕಿಸು, (ಕ್ರಿ). ಬಳಿ; ಲೇಪಿಸು: ಕುಂಕುಮದೊಳ್ಬುಡಿವೆರೆದ ಕಮ್ಮೆಣ್ಣೆಯ

ಪಂಕವನ್ನುತ್ತಮಾಂಗದೊಳು ಅಂಕಿಸಿಕೊಂಡವಳಿರ್ದಳು (ಕುರಾಸಾಂ. ೩೩-೯೨). ಅಕರ,

(ಅ). ತೆರಿಗೆಯಿಲ್ಲದೆ: ಭಟ್ಟನುರ್ಗ್ಗೀಗಟ್ಟಿ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ (ಮೈಆರಿ. ೧೯೩೭,

೧೬-೧೬; ಸು. ೪೫೦).

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ವಿವರಣವಿರಾಮ ಚಿಹ್ನೆಯನ್ನು ಬಳಸಿದೆ.

೫. ( " "/ ' ' ) ಉದ್ಧರಣ ಚಿಹ್ನೆಗಳು

- ನಿಘಂಟು, ವ್ಯಾಕರಣ, ಲಕ್ಷಣ ಗ್ರಂಥಗಳಿಂದ ಅರ್ಥಕ್ಕೆ ಆಧಾರವನ್ನು ಸೂಚಿಸುವಾಗ ಎರಡೆರಡಿರುವ ಉದ್ಧರಣ ಚಿಹ್ನೆಗಳನ್ನು ಬಳಸಲಾಗಿದೆ.

ಉದಾ:- ಅಂಕ೨ (ನಾ). ೫. ಭಾರವನ್ನು ಎತ್ತುವುದಕ್ಕೆ ಉಪಯೋಗಿಸುವ ಹಾರೆ;

ಸನ್ನೆಕೋಲು: "ಅಂಕವೆನೆ ಭಾರವೆತ್ತುವದಕ್ಕುಂ" (ಕಶರ. ೧೦)

ತೊಡೆ: "ಅಂಕಮುತ್ಸಂಗಮಕ್ಕು" (ಮಂಗರಾ. ೯೩-೧೭).

- ನೋ, ಪರಾ ಇವುಗಳನ್ನು ಸೂಚಿಸುವಲ್ಲಿ ಒಂದೊಂದು ಇರುವ ಉದ್ಧರಣ ಚಿಹ್ನೆಗಳನ್ನು ಬಳಸಲಾಗಿದೆ.

ಉದಾ :- ಅಂಕಕಾತಿ 'ಅಂಕಕಾರ್ತಿ' ನೋ. ಅಂಕಗದ್ಯಾಣ (ನಾ). 'ಅಂಕದೆಜೆ', 'ಅಂಕವಣ', 'ಅಂಕಸುಂಕ' ಪರಾ.

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಉದ್ಧರಣ ಚಿಹ್ನೆಗಳನ್ನು ಬಳಸಿದೆ.

**೬. [ ] ಚೌಕಕಂಸ**

- ನಿಷ್ಪತ್ತಿ ಭಾಗವನ್ನು ಚೌಕಕಂಸದಲ್ಲಿ ತೋರಿಸಲಾಗಿದೆ

ಉದಾ:- ಅಂಕುರಿಸು (ಕ್ರಿ). [ಅಂಕುರ + - ಇಸು೨]

- ಪ್ರಯೋಗಗಳಲ್ಲಿ ಪಾಠಾಂತರಗಳನ್ನು ಸೂಚಿಸುವಲ್ಲಿ ಚೌಕಕಂಸಗಳನ್ನು ಬಳಸಿದೆ.

ಉದಾ:- ಅಂಗಜಾವ (ನಾ). ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ ?

ಡಿಂಗರಿಗರ ಮನೆಗೆ ಅಂಗಜಾವ[ಪಾಠಾಂ. ಜಾಹವ, ಜಾವಹ]ಕ್ಕೆ ಹೋಗಿದ್ದರೊಳರೆ

ಕೂಡಲಸಂಗಮದೇವ (ಬಸವ. ೭೪೨).

- ಶಾಸನ ಮತ್ತು ಕಾವ್ಯಗಳಿಂದ ಪ್ರಯೋಗಗಳನ್ನು ಉದ್ಧರಿಸುವಾಗ ಅವುಗಳ ಸಂಪಾದಕರು ಚೌಕಕಂಸವನ್ನು ಬಳಸಿದ್ದರೆ ಅವುಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿದೆ.

ಉದಾ:- ಅಗುರ್ (ಕ್ರಿ). ಧರೆಯೆಲ್ಲಂ ಪೊೞ್ವನ್ತಿರೆ [ಪುರಿ]ಗೆರೆಯೊಳಗುರ್ತುರ್ಱ ರೋಣಮಂ

ಕಾದಮರೇಶ್ವರಪುರಮನೆಯ್ದಿದೊಂ . . .ಪಂಪಯ್ಯಂ (ಸೌಇಇ IX-i, ೩೬-೨೩;

೯೪೨).

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಚೌಕಕಂಸ ಚಿಹ್ನೆಯನ್ನು ಬಳಸಿದೆ.

**೭. E ∃ ಕಂಸ**

- E ∃ ಕಂಸವು ಸಂಪಾದಕರು ಸಂಯೋಜಿಸಿದ ಪಾಠವನ್ನು ಸೂಚಿಸುವಲ್ಲಿ ಬಳಸಿದೆ. ಶಾಸನಗಳಿಂದ ಪ್ರಯೋಗಗಳನ್ನು ಎತ್ತಿಕೊಂಡಾಗ ಅವುಗಳನ್ನು ತಿದ್ದಬೇಕಾದ ಸಂದರ್ಭಗಳಲ್ಲಿ E ∃ ಕಂಸವನ್ನು ಹಾಕಿದೆ.

ಉದಾ:- ಅಚ್ಛವೋEವ?ã ತ್ತಳಿಕೆ, ಅಜ್ಜವEವೊã ಡೆಯ, ಅಡಗುಶೇEಸೇã ಕ. ಮುಖ್ಯ ಉಲ್ಲೇಖಕ್ಕೆ ಸಂಬಂಧಿಸಿದಂತೆ ಪ್ರಯೋಗದಲ್ಲಿ ಕ್ವಚಿತ್ತಾಗಿ ಅರ್ಥವಿವರಣೆ ಮಾಡಬೇಕಾದ ಸಂದರ್ಭದಲ್ಲಿ E ã ಕಂಸವನ್ನು ಬಳಸಲಾಗಿದೆ.

ಉದಾ:- ಅಂಕ್ತ (ನಾ). ೧೩. ಹೆಸರು: ಚೇರಮಾಂಕಂಗೆ ಬೆಸಸಿದ ಭಕ್ತ ಸತ್ಯೇಂದ್ರ ಚೋಳ ಕೃತಿ (ಭಾವಚಿಂ. ೧-೪೬).

E ಚೇರಮಾಂಕ = ಚೇರಮ ಎಂಬ ಹೆಸರುಳ್ಳವನುã ಅಂಕಕಾಱ (ನಾ). ೨. ಬಿರುದುಳ್ಳ ವೀರ (ಇದು ಬಿರುದಿನ ಭಾಗವಾಗಿ ಬರುವುದೂ ಉಂಟು): ನೆಲನದಿರೆವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನನೊಂದೆ ಮದಾಂಧಗಂಧಸಿಂಧುರದೊಳೋಡಿಸಿದ (ಪಂಪಭಾ. ೯-೫೨ ವ);

E ಬಪ್ಪುವನಂಕಕಾಱ:ಬಪ್ಪುವಂ + ಅಂಕಕಾಱ = ಬಪ್ಪುವನೆಂಬ ಅಂಕಕಾಱ; ಇದನ್ನು ಬಪ್ಪುವನ + ಅಂಕಕಾಱ (=ಬಪ್ಪುವ ಎಂಬ ಒಡೆಯನ ಆಶ್ರಯದಲ್ಲಿರುವ ಅಂಕಕಾಱ) ಎಂದು ಬಿಡಿಸುವುದೂ ಸಾಧ್ಯ ã

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ Eã ಕಂಸ ಚಿಹ್ನೆಯನ್ನು ಬಳಸಿದೆ.

**೮. ( ) ದುಂಡುಕಂಸ**

- ಮುಖ್ಯ ಉಲ್ಲೇಖಗಳ ಶಬ್ದಜಾತಿಯನ್ನು, ಸಂಕ್ಷಿಪ್ತಗಳನ್ನು, ಆಕಾರಗಳನ್ನು, ಪರ್ಯಾಯ ಶಬ್ದಗಳ ಮೂಲರೂಪಗಳನ್ನು ಸೂಚಿಸುವಲ್ಲಿ ದುಂಡುಕಂಸವನ್ನು ಬಳಸಲಾಗಿದೆ.
- ಮುಖ್ಯಉಲ್ಲೇಖಗಳ ಶಬ್ದಜಾತಿ :- ಅಕ್ಕ (ನಾ). ಅಕ್ಕಚ್ಚಿ (ನಾ). ಅಗಲ್ಚು (ಕ್ರಿ). - ಅ್ (ಅ). ಅಕ್ಕುಡ್ತ (ಗು).
- ಸಂಕ್ಷಿಪ್ತ :- ಅಗಡೀದಿಗಡೀ (ಗು). (ಉಕ).
- ಆಕರ :- ಅಕ್ಕನ ಚೌರಿ (ನಾ). ಒಂದು ಬಗೆಯ ಕಾಯಿಪಲ್ಯ (ಸ್ಯಾಂಡರ್).
- ಪರ್ಯಾಯ ಶಬ್ದಗಳ ಮೂಲರೂಪ:- ಅಕ್ಕರೆಮಗ (ನಾ). [ಅಕ್ಕರ್ಗೆ(<ಅಟ್ಟಜ್ಜ್ತ) + ಮಗ].

ಈ ಮೇಲಿನ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ದುಂಡುಕಂಸ ಚಿಹ್ನೆಯನ್ನು ಬಳಸಿದೆ.

**೯. - ಕೂಡುಗೆರೆ**

- ಈ ಚಿಹ್ನೆ ಅಕ್ಷರ ಅಥವಾ ಅಕ್ಷರಗಳ ಹಿಂದಿದ್ದರೆ ಪ್ರತ್ಯಯವನ್ನು ಸೂಚಿಸುತ್ತದೆ; ಮುಂದಿದ್ದರೆ ಶಬ್ದ ಆದ್ಯಂಶವನ್ನು ಸೂಚಿಸುತ್ತದೆ.

ಉದಾ:- -ಅ೨, -ಅ೩, ಅಗ-೧.

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಕೂಡುಗೆರೆ ಚಿಹ್ನೆಯನ್ನು ಬಳಸಿದೆ.

೧೦. – ಅಡ್ಡಗೀಟು

- ಈ ಚಿಹ್ನೆ ಹಿಂದೆ ಕೊಟ್ಟಿರುವ ಶಬ್ದವನ್ನು ಸೇರಿಸಿಕೊಂಡು ಓದಬೇಕೆಂಬುದನ್ನು ಸೂಚಿಸುತ್ತದೆ.

ಉದಾ:- ಅಡಕೆತಾಳಿಲ, ಅಡಕೆದಾಳಿಲ (ನಾ). ಒಂದು ಬಗೆಯ ಪಲ್ಯ, – ತಾಳಿದ. ಇಲ್ಲಿ – ತಾಳಿದ ಎಂಬುದರ ಹಿಂದೆ ಒಂದು ಬಗೆ ಎಂಬುದನ್ನು ಸೇರಿಸಿಕೊಂಡು,

ಒಂದು ಬಗೆಯ ತಾಳಿದ ಎಂದು ಅರ್ಥ ಮಾಡಿಕೊಳ್ಳಬೇಕು.

ಈ ರೀತಿ ಪದಗಳನ್ನು ವಿವರಿಸುವ ಸಂದರ್ಭದಲ್ಲಿ ನಿಘಂಟಿನಲ್ಲಿ ಅಡ್ಡಗೀಟು ಚಿಹ್ನೆಯನ್ನು ಬಳಸಲಾಗಿದೆ.

ಬರವಣಿಗೆಯ ಸಂದರ್ಭದಲ್ಲಿ ಲೇಖನ ಚಿಹ್ನೆಗಳನ್ನು ಬಳಸುವಾಗ ಗೊಂದಲಗಳಾಗುತ್ತವೆ. ಏಕೆಂದರೆ ಒಂದು ನಿರ್ದಿಷ್ಟ ನಿಯಮಗಳು ಇಲ್ಲದೇ ಇರುವುದರಿಂದ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಆದರೆ, ಪರಿಷತ್ತು ಪ್ರಕಟಿಸಿದ ಕನ್ನಡ ನಿಘಂಟಿನ ರಚನೆಯಲ್ಲಿ ಲೇಖನ ಚಿಹ್ನೆಗಳನ್ನು ಪದಗಳ ವಿಂಗಡಣೆ, ಅರ್ಥಸ್ಪಷ್ಟತೆ, ಅರ್ಥಖಚಿತತೆ ಮೊದಲಾದ ಉದ್ದೇಶಗಳಿಗಾಗಿ ಇವುಗಳನ್ನು ಬಳಸಿದ್ದು, ನಿಘಂಟು ಬಳಸುವವರಿಗೆ ಸುಲಭವಾಗಿ ಅರ್ಥವಾಗುತ್ತದೆ. ಇವುಗಳ ಮೂಲಕ ನಿಘಂಟು ಬಳಕೆಯ ವಿಧಾನವನ್ನು ತಿಳಿಯಬಹುದು ಮತ್ತು ಈ ನಿಯಮಗಳನ್ನು ಬರವಣಿಗೆಯ ಸಂದರ್ಭದಲ್ಲಿ ಅಳವಡಿಸಿಕೊಳ್ಳಲು ಸಹಕಾರಿಯಾಗಿದೆ.

ಕನ್ನಡ ಬರವಣಿಗೆಯಲ್ಲಿ ಲೇಖನ ಚಿಹ್ನೆಗಳನ್ನು ಬಳಸುವ ಬಗೆಗೆ ಹಲವಾರು ಅಭಿಪ್ರಾಯಗಳಿದ್ದು ಗೊಂದಲಕ್ಕೀಡುಮಾಡಿವೆ. ಗೊತ್ತಾದ ನಿಯಮಗಳನ್ನು ರೂಪಿಸಿಕೊಳ್ಳದಿರುವುದು ಮತ್ತು ಇರುವ ನಿಯಮಗಳನ್ನು ಸರಿಯಾಗಿ ಪಾಲಿಸದಿರುವುದು ಇದಕ್ಕೆ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ನಿಘಂಟಿನಲ್ಲಿ ಬಳಸಲಾದ ಲೇಖನ ಚಿಹ್ನೆಗಳನ್ನು ಆಧಾರವಾಗಿಟ್ಟುಕೊಂಡು ಲೇಖನ ಚಿಹ್ನೆಗಳ ನಿಯಮಗಳನ್ನು ಮರು ರೂಪಿಸಿಕೊಳ್ಳಬಹುದಾಗಿದೆ.

### ೪.೨.೭. ಅಕ್ಷರಗಳ ಗಾತ್ರ

ಕನ್ನಡ ನಿಘಂಟಿನಲ್ಲಿ ಮುಖ್ಯಶಬ್ದಗಳು, ಶಬ್ದದ ಇತರ ರೂಪಗಳು, ಅರ್ಥ ಪ್ರಯೋಗಗಳು, ಅರ್ಥಗಳು, ಅರ್ಥದ ವಿಶೇಷಾಂಶಗಳು, ನುಡಿಗಟ್ಟುಗಳನ್ನು ಪದನಿಷ್ಪತ್ತಿಯ ಜ್ಞಾತಿಶಬ್ದಗಳು ಮೊದಲಾದವುಗಳನ್ನು ವಿವರಿಸುವಾಗ ಬೇರೆ ಬೇರೆ ಗಾತ್ರದ ಹಾಗೂ ಅಕ್ಷರ ರೂಪಗಳನ್ನು ಬಳಸಿದ್ದಾರೆ. ಇದರಿಂದ ನಿಘಂಟನ್ನು ಬಳಸುವವರು ಪದಗಳ ಸರಿಯಾದ ತಿಳಿವಳಿಕೆಗೆ ಅನುಕೂಲವಾಗುತ್ತದೆ.

**೧. ೧೨ ಪಾಯಿಂಟ್ ದಪ್ಪ ಅಕ್ಷರ (೧೨ ಪಾಯಿಂಟ್ ಆಂಟಿಕ್) :-**

೧. ನಿಘಂಟಿನಲ್ಲಿ ಬರುವ ಮುಖ್ಯ ಶಬ್ದಗಳನ್ನು ಉಲ್ಲೇಖಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಬಳಸಲಾಗಿದೆ.

ಉದಾ:- ೧. ಅಂಕ (ನಾ).
೨. ಅನ್ನ (ನಾ).
೩. ಪಾಲಿಸು (ಕ್ರಿ)
೪. ಚಂದ್ರ (ಗು)

೨. ಮುಖ್ಯ ಶಬ್ದದ ಜೊತೆಯಲ್ಲಿ ಕೊಟ್ಟಿರುವ ಅದರ ಇತರ ರೂಪಗಳಿಗೆ ಅರ್ಥ ಪ್ರಯೋಗಗಳನ್ನು ಕೊಡುವಾಗ ಆ ಒಂದೊಂದು ರೂಪಕ್ಕೂ ಈ ಅಳತೆಯ ಅಕ್ಷರವನ್ನು ಬಳಸಲಾಗಿದೆ.

ಉದಾ – ೧. ಅಕ್ಕಸಾಲೆ ಶಬ್ದದಲ್ಲಿ ಅಕಸಾಲ, ಅಕಸಾಲೆ, ಅಕ್ಕಸಾಲ, ಅಕ್ಕಸಾಲಿ, ಅಗಸಾಲ, ಅಗಸಾಲೆ, ಅರ್ಕಸಾಲೆ.

**೨. ೧೨ ಪಾಯಿಂಟ್ ಸಾದಾ ಅಕ್ಷರ (೧೨ ಪಾಯಿಂಟ್ ರೋಮನ್)**

೧. ಮುಖ್ಯ ಶಬ್ದಗಳಿಗೆ ಅರ್ಥಗಳನ್ನು ಕೊಡುವಾಗ ಈ ಅಳತೆಯ ಅಕ್ಷರಗಳನ್ನು ಬಳಸಿದೆ.

ಉದಾ – ಅಡಕನಗೆ (ನಾ) ಅದುಮಿಟ್ಟುಕೊಂಡ ನಗೆ ; ಪರಿಮಿತವಾದ ನಗೆ.

೨. ಮುಖ್ಯ ಶಬ್ದದ ಜೊತೆಯಲ್ಲಿ ಕೊಡುವ ಅದರ ಇತರ ರೂಪಗಳಿಗೆ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಿದೆ.

ಉದಾ : ೧. ಅಕ್ಕ, ಅಕ್ಕ, ಅಕ್ಕಳ್ (ನಾ).

೩. ಒಂದು ಶಬ್ದದ ಅರ್ಥಕ್ಕೆ ಬೇರೆ ಕಡೆ ಆ ಶಬ್ದದ ಮುಖ್ಯರೂಪದ ಕೆಳಗಡೆ ನೋಡಿ ಎಂದು ನಿರ್ದೇಶಿಸುವಾಗ ಈ ಅಳತೆ ಅಕ್ಷರಗಳನ್ನು ಬಳಸಿದೆ.

ಉದಾ – ೧. ಅಕ್ಕಡ, 'ಅಕ್ಕಡ' ನೋ. ಅಕಲು 'ಅಕ್ಕಲು' ನೋ.

೪. ಬೇರೆ ರೀತಿ ಗೊತ್ತು ಮಾಡಿಲ್ಲದ ಎಲ್ಲ ಕಡೆಗಳಿಗೂ ಈ ಅಳತೆಯ ಅಕ್ಷರಗಳನ್ನು ಬಳಸಿದೆ.

ಉದಾ – ೧. [ಜೈನ]. [ವೀಶೈ]. (ಕರಾ). (ದಕ). (ಉಕ). ನೋ. ಪರಾ. ಹೋ. (ಕ್ರಿ). (ನಾ). (ಗು). (ಪ್ರ). ಇತ್ಯಾದಿ.

೫. ವಿಶೇಷಾಂಶಗಳನ್ನು ವಿವರಿಸುವ ಕಡೆ ಪಿ ಈ ಚಿಹ್ನೆಯ ಮುಂದೆ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಿದೆ.

**೩. ೧೦ ಪಾಯಿಂಟ್ ದಪ್ಪ ಅಕ್ಷರ (೧೦ ಪಾಯಿಂಟ್ ಆಂಟಿಕ್)**

೧. ನುಡಿಗಟ್ಟುಗಳನ್ನೂ ವಿಶಿಷ್ಟ ರೂಪಭೇದಗಳನ್ನು ನಿರ್ದೇಶಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ.

ಉದಾ :- ೧. ಅಕ್ಕರ ಶಬ್ದದ ಕೆಳಗೆ ಅಕ್ಕರದ ಹೊಲಿಗೆ. ಅಟ್ಟ ಶಬ್ದದ ಕೆಳಗೆ ಅಟ್ಟಕ್ಕೇರು.

೨. ನಿಷ್ಪತ್ತಿ ವಿಭಾಗದಲ್ಲಿ ಭಾಷೆಗಳ ಹೆಸರುಗಳನ್ನು ನಿರ್ದೇಶಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ.

ಉದಾ :- ೧. ತಮಿ, ಮಲ, ತುಳು, ತೆಲು, ಹಿಂ.

**೪. ೧೦ ಪಾಯಿಂಟ್ ಸಾದಾ ಅಕ್ಷರ (೧೦ ಪಾಯಿಂಟ್ ರೋಮನ್)**

೧. ಮುಖ್ಯ ಶಬ್ದಗಳಿಗೆ ಅರ್ಥಗಳನ್ನು ಕೊಟ್ಟ ಮೇಲೆ ಪ್ರಯೋಗಗಳನ್ನು ಉದ್ಧರಿಸುವಾಗ ಈ ಅಳತೆಯ ಅಕ್ಷರಗಳನ್ನು ಉಪಯೋಗಿಸಲಾಗಿದೆ. ಉದಾ – ೧. ಅಂಗವಟ್ಟ೧ (ನಾ). ಆಗಳಾ ತುಂಗಸ್ತನೆಯ ಮಂಗಳಮಾದಂಗದೊಳಂಗವಟ್ಟಮಂ ಸಂಗಡಿಸಿದಂ ಬಳೆಯಂ (ಬಾಧಮ. ೧–೧೦೪ ವ)

೨. ನಿಷ್ಪತ್ತಿ ವಿಭಾಗದಲ್ಲಿ ಜ್ಞಾತಿಶಬ್ದಗಳನ್ನೂ, ಆ ಶಬ್ದಗಳ ಅರ್ಥಗಳನ್ನೂ ವಿವರಿಸುವಲ್ಲಿ ಈ ಅಳತೆಯ ಅಕ್ಷರಗಳನ್ನು ಬಳಸಿದೆ.

ಉದಾ – ೧. ಅಕ್ಕಿ೧ (ನಾ). [ದೇ.< *ಅರ್ಕ್. ॥ ತಮಿ. ಅರಿ. ಅರಿಚಿ; ಮಲ. ತುಳು. ಅರಿ; ಕೊಡ. ಅರಿ, ಅಕ್ಕಿ; ತೆಲು. ಅಕ್ಕುಳ್ಲು].

**೫. ೮ ಪಾಯಿಂಟ್ ಸಾದಾ ಅಕ್ಷರ (೮ ಪಾಯಿಂಟ್ ರೋಮನ್)**

೧. ಮುಖ್ಯ ಶಬ್ದಗಳಿಗೆ ಕೊಡುವ ಪ್ರಯೋಗಗಳ ಆಕರಗಳನ್ನು ಸೂಚಿಸುವಾಗ ಈ ಅಳತೆಯ ಅಕ್ಷರಗಳನ್ನು ಬಳಸಿದೆ.

ಉದಾ:- ೧. ಅಂಕ೨ ಶಬ್ದದಲ್ಲಿ (ಶ್ರೀಪಾಲ. ೪–೧೬); (ಎಕ. X. ಶ್ರೀನಿವಾ. ೨೭–೨೨; ೮೭೦).

೨. 'ಪಾಠಾಂ' ಎಂಬುದನ್ನು ಸೂಚಿಸುವಾಗ ಈ ಅಳತೆಯ ಅಕ್ಷರಗಳನ್ನು ಬಳಸಲಾಗಿದೆ.

ಉದಾ:- ೧. ಮನಮುನನುವಿಸ [ಪಾಠಾಂ. ಉಪಮಿಸ]ಲಾರದಂತೆಯುಸಿರ್ ಮಿಟ್ಟಿಗೊಳಿಸುವ ಸವಿಯುಂ (ಲೀಲಾವ. ೧೦–೪೫ ವ).

ಅಕ್ಷರಗಳ ಗಾತ್ರವು ಅವುಗಳ ಬಳಕೆಯ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳಲು ನಿಘಂಟನ್ನು ಬಳಸುವವರಿಗೆ ಅನುಕೂಲವಾಗುವಂತೆ ನೀಡಿರುವುದು ಕನ್ನಡ ನಿಘಂಟಿನ ವೈಶಿಷ್ಟ್ಯವಾಗಿದೆ.

**೪.೨.೮. ಇತರ ಅಂಶಗಳು**

೧. ವರ್ಗಪಂಚಮಾಕ್ಷರಗಳಿಂದ ಕೂಡಿದ ಶಬ್ದಗಳಲ್ಲಿ ಬಿಂದುಸಹಿತವಾದ ರೂಪಗಳನ್ನು ಮಾತ್ರ ಈ ನಿಘಂಟಿನಲ್ಲಿ ಮುಖ್ಯ ಶಬ್ದಗಳಾಗಿ ಅಂಗೀಕರಿಸಲಾಗಿದೆ.

೨. ಪದಗಳಲ್ಲಿ ವಿಸರ್ಗದ ಮುಂದೆ ಶ, ಷ, ಸ ಕಾರಗಳು ಬಂದಾಗ ವಿಸರ್ಗ ಸಹಿತವಾದ ರೂಪಗಳನ್ನು ವರ್ಣಾನುಕ್ರಮದಲ್ಲಿ ದಾಖಲಿಸಿ ಮುಖ್ಯ ಉಲ್ಲೇಖಕ್ಕೆ 'ನೋ' ಎಂದು ನಿರ್ದೇಶಿಸಲಾಗಿದೆ.

ಕನ್ನಡ ಭಾಷೆಯ ಸಕಲ ವೈಶಿಷ್ಟ್ಯಗಳನ್ನು ಒಳಗೊಂಡ ನಿಘಂಟು ಭಾಷಾಶಾಸ್ತ್ರ ನಿಯಮಗಳಿಗೆ ಅನುಸಾರವಾಗಿ, ನಿಘಂಟು ರಚನಾ ನಿಯಮಗಳಿಗೆ ಅನುಗುಣವಾಗಿ ಕ್ರಮಬದ್ಧವಾಗಿ ಕನ್ನಡ ಭಾಷೆಯ ಅವಸ್ಥೆಗಳಿಗೆ ಅನುಗುಣವಾಗಿ ಚಾರಿತ್ರಿಕ ಮಾದರಿಯನ್ನು ಹೊಂದಿದೆ. ಭಾಷಿಕ, ಸಾಹಿತ್ಯಿಕ,

ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನಗಳನ್ನು ಕೈಗೊಳ್ಳುವವರಿಗೆ ಈ ನಿಘಂಟು ಒಂದು ಉಪಯುಕ್ತ ಆಕರ ಗ್ರಂಥವಾಗಿದ್ದು, ವಿದ್ವಾಂಸರಿಂದ ಅಭ್ಯಾಸಿಗಳವರೆಗೆ ವಿವಿಧ ಸ್ಥರಗಳಲ್ಲಿ ಉಪಯೋಗಕ್ಕೆ ಬರುವಂತಹುದು ಎನ್ನುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನಾ ವಿನ್ಯಾಸದ ಮಾದರಿಯನ್ನು ಈ ಕೆಳಕಂಡಂತೆ ನೋಡಬಹುದು.

[illegible]

ದಿನದಿನದ ಪದಗಳ ಜೊತೆಗೆ ಕಾವ್ಯ, ಗದ್ಯ, ವೃತ್ತಿಪದಗಳು, ಆಡುಮಾತು, ಜಾನಪದ ಹೀಗೆ ಎಲ್ಲ ವಲಯದ ಕನ್ನಡ ಪದಕೋಶ ಲಭ್ಯವಿದೆ. ಜೊತೆಗೆ ಕನ್ನಡದಲ್ಲಿ ಬಳಕೆಯಲ್ಲಿರುವ ಅನ್ಯದೇಸಿ ಪದಗಳು ಕೂಡ ಸೇರಿವೆ. ಉಲ್ಲೇಖಗಳನ್ನು ನೀಡುವಾಗ ಮುಖ್ಯ ಉಲ್ಲೇಖ, ವ್ಯಾಕರಣದ ರೀತ್ಯಾ ಪದವರ್ಗ, ಅರ್ಥ-ಅರ್ಥಗಳು, ಪ್ರಯೋಗ, ಆಕರ, ಪದದ ಮೂಲ, ಪದನಿಷ್ಪತ್ತಿ, ಜ್ಞಾತಿಪದಗಳು, ನುಡಿಗಟ್ಟುಗಳಲ್ಲಿ ಬಳಕೆಯಾಗಿದ್ದರೆ, ಗಾದೆಗಳಲ್ಲಿ ಬಳಕೆಯಾಗಿದ್ದರೆ, ದ್ವಿರುಕ್ತಿಗಳಲ್ಲಿ ಬಳಕೆಯಾಗಿದ್ದರೆ ಅವುಗಳನ್ನು ನೀಡಲಾಗಿದೆ. ಅರ್ಥವನ್ನು ಗಮನಿಸಿದರೆ ಇದರಲ್ಲಿರುವ ಪದಗಳಿಗೆ ಸಮಾನಾರ್ಥ, ನಾನಾರ್ಥ, ನಿಷೇಧಾರ್ಥ, ವಿರುದ್ಧಾರ್ಥ ಎನ್ನುವ ಬೇರೆ ಬೇರೆ ಅರ್ಥಗಳನ್ನು ನೀಡಲಾಗಿದೆ. ಇದು ಒಳಗೊಂಡಿರುವ ಭಾಷಿಕ  ವಿನ್ಯಾಸವನ್ನು  ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**೪.೩.೧. ಪದಗಳು**

ಕನ್ನಡ ನಿಘಂಟಿನಲ್ಲಿ ಪದಗಳನ್ನು ಭಾಷೆ ಮತ್ತು ಶಬ್ದಜಾತಿ ಎಂದು ಎರಡು ವಿಧದಲ್ಲಿ ಮುಖ್ಯ ಉಲ್ಲೇಖವಾಗಿ ನೀಡಲಾಗಿದೆ.ಈ ನಿಘಂಟಿನಲ್ಲಿ ಭಾಷೆಯ ಹಿನ್ನೆಲೆಯಲ್ಲಿ ಕ್ರಮವಾಗಿ ಕನ್ನಡ, ತದ್ಭವ, ಸಂಸ್ಕೃತ, ಅನ್ಯದೇಶ್ಯ ಎಂದು ಪದಗಳನ್ನು ನೀಡಿರುವುದರಿಂದ ಇದನ್ನು ಬಳಸುವವರಿಗೆ ಭಾಷೆಯ ಹಿನ್ನೆಲೆಯಲ್ಲಿ ಪದಗಳನ್ನು ಗುರುತಿಸಲು ಸಹಾಯಕವಾಗುತ್ತದೆ. ಶಬ್ದಜಾತಿಯ ಹಿನ್ನೆಲೆಯಲ್ಲಿ ಒಂದೇ ಶಬ್ದರೂಪ ವ್ಯಾಕರಣಕ್ಕನುಸಾರವಾಗಿ ಬೇರೆ ಬೇರೆಯಾಗಿದ್ದರೆ ಅದನ್ನು ಕ್ರಿಯಾವಾಚಕ, ನಾಮವಾಚಕ, ಗುಣವಾಚಕ, ಸರ್ವನಾಮ, ಅವ್ಯಯ, ಪ್ರತ್ಯಯ ಎಂದು ಕ್ರಮಬದ್ಧವಾಗಿ ನೀಡಲಾಗಿದೆ.

ಒಂದು ಭಾಷೆಯ ಎಲ್ಲ ಪದಗಳು ಆ ಭಾಷೆಯವೇ ಆಗಿರುವುದು ಅಸಾಧ್ಯ. ಹಾಗೆಯೇ ಕನ್ನಡದಲ್ಲಿರುವ ಎಲ್ಲ ಶಬ್ದಗಳು ಕನ್ನಡ ಪದಗಳಲ್ಲ. ಭಾಷೆ ಬೆಳೆಯಬೇಕಾದರೆ ಕೊಳು-ಕೊಡುಗೆ ಅಗತ್ಯ. ಕನ್ನಡದಲ್ಲಿ  ದೇಶ್ಯ(ಅಚ್ಚಗನ್ನಡ) ಪದಗಳಲ್ಲದೆ, ತತ್ಸಮ-ತದ್ಭವ, ಅನ್ಯದೇಶ್ಯ ಪದಗಳು ಅಧಿಕವಾಗಿದ್ದು,  ಇದರಿಂದ ಕನ್ನಡ ಭಾಷೆಯು ಸಮೃದ್ಧವಾಗಿ ಬೆಳೆಯುತ್ತಿದೆ. ಈ ನಿಘಂಟಿನಲ್ಲಿ ಕನ್ನಡದಲ್ಲಿ ಬಳಕೆಯಿರುವ ಎಲ್ಲ ಪದಗಳನ್ನೂ ಅಂದರೆ, ಬೇರೆ ಭಾಷೆಯಿಂದ ಬಂದಂತಹ ಪದಗಳನ್ನೂ ದಾಖಲಿಸಲಾಗಿದೆ.

ಯಾವುದೇ ಜೀವಂತ ಭಾಷೆ ಅನ್ಯಭಾಷೆಗಳ ಸಂಪರ್ಕವನ್ನು ಹೊಂದಿ ಪದಸಂಪತ್ತನ್ನು ವೃದ್ಧಿಸಿಕೊಳ್ಳುತ್ತದೆ. ವ್ಯಾಪಾರ, ವ್ಯವಹಾರ, ಆಡಳಿತ, ಗಡಿಭಾಗ ಪ್ರವಾಸಾನುಭವ ಮೊದಲಾದ ಕಾರಣಗಳಿಂದ ಅನ್ಯದೇಶ್ಯ ಪದಗಳು ಕನ್ನಡ ಭಾಷೆಯಲ್ಲಿ ಬಂದು ಸೇರಿ ಅನ್ಯದೇಶ್ಯ ಶಬ್ದಗಳೆನಿಸಿವೆ. ಸಂಸ್ಕೃತ, ಪ್ರಾಕೃತ, ಪರ್ಶಿಯನ್, ಅರೇಬಿಕ್, ಇಂಗ್ಲಿಶ್, ಫ್ರೆಂಚ್, ಪೋರ್ಚುಗೀಸ್ ಮೊದಲಾದ ಭಾಷೆಗಳಿಂದ ಅಸಂಖ್ಯಾತ ಪದಗಳು ನಮ್ಮ ಭಾಷೆಗೆ ಬಂದು ಸೇರಿವೆ. ಈ ಭಾಗದಲ್ಲಿ ಕನ್ನಡ ನಿಘಂಟಿನಲ್ಲಿ ದಾಖಲಾದ ಹಲವು ದೇಶ್ಯ-ಅನ್ಯದೇಶ್ಯಗಳ ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದಾಗಿದೆ.

### ೪.೩.೧.೧. ದೇಶ್ಯ ಪದಗಳು

ಅಚ್ಚಗನ್ನಡ ಶಬ್ದಗಳನ್ನು 'ದೇಶ್ಯ ಶಬ್ದ'ಗಳು ಎಂದು ಕರೆಯಲಾಗಿದ್ದು, ಈ ಪದಗಳು ಭಾಷೆಯ ಮೂಲ ಪದಗಳಾಗಿವೆ. ಕನ್ನಡ ಭಾಷೆಗೆ ತನ್ನದೇ ಆದ ಪದಭಂಡಾರವಿದ್ದು, ಈ ಪದಗಳನ್ನು ನಮ್ಮ ಜನರು ತಾವೇ ಕಲ್ಪಿಸಿಕೊಂಡು ಬಳಸಿ ಮುಂದಿನ ಪೀಳಿಗೆಗೆ ಕೊಡುಗೆಯಾಗಿ ಕೊಟ್ಟಿದ್ದಾರೆ. ಉದಾ. ಅಲರು, ಆಕಳು, ಆಟ, ಊಟ, ಕಣ್ಣು, ಜೇನು, ಜೋಳ, ದನ, ರಾಗಿ, ಸಾರು, ರುಚಿ, ಹಾಲು ಮೊದಲಾದವು ದೇಶ್ಯ ಪದಗಳಾಗಿದ್ದು, ಈ ನಿಘಂಟಿನಲ್ಲಿ ಅಸಂಖ್ಯಾತ ದೇಶ್ಯಪದಗಳಿವೆ. ಈ ನಿಘಂಟಿನಲ್ಲಿ ದೇಶ್ಯಶಬ್ದಗಳಿಗೆ ಅವುಗಳ ರಚನೆ ಸ್ಪಷ್ಟವಾಗುವಂತೆ ಪ್ರಕೃತಿ ಪ್ರತ್ಯಾದಿಗಳನ್ನು ವಿಭಜಿಸಿ ತೋರಿಸಲಾಗಿದೆ. ರೂಪನಿಷ್ಪತ್ತಿ ಮತ್ತು ಜ್ಞಾತಿಶಬ್ದಗಳನ್ನು ಚೌಕಕಂಸದಲ್ಲಿ ಸೂಚಿಸಲಾಗಿದ್ದು, ಅವುಗಳನ್ನು ಸೂಚಿಸದೆ ಬಿಟ್ಟ ಶಬ್ದಗಳನ್ನು ದೇಶ್ಯವೆಂದು ಸುಲಭವಾಗಿ ತಿಳಿಯಬಹುದಾಗಿದೆ. ಈ ನಿಘಂಟಿನ ಬಹುತೇಕ ಪದಗಳು ದೇಶ್ಯ ಪದಗಳಾಗಿವೆ.

### ೪.೩.೧.೨. ಸಂಸ್ಕೃತ ಪದಗಳು

ಕನ್ನಡ ಭಾಷೆಗೆ ಪ್ರೇರಣೆ ಸಂಸ್ಕೃತ ಭಾಷೆ. ನಮ್ಮ ಭಾಷೆಯ ಬಹುತೇಕ ಪದಗಳು ಸಂಸ್ಕೃತ ಮೂಲದವು. ಸಂಸ್ಕೃತ ಶಬ್ದಭಂಡಾರದಿಂದ ಅಪಾರವಾದ ಶಬ್ದಗಳನ್ನು ತೆಗೆದುಕೊಂಡಿದ್ದು, ಕನ್ನಡದಲ್ಲಿ ಸಂಸ್ಕೃತ ಪದಗಳು ಹೆಚ್ಚಿನ ಪ್ರಮಾಣದಲ್ಲಿರುವುದನ್ನು ಕಾಣುತ್ತೇವೆ. ಅದೇ ರೀತಿ ಕನ್ನಡ ನಿಘಂಟಿನಲ್ಲಿ ಶೇಕಡ ಐವತ್ತಕ್ಕೂ ಅಧಿಕ ಪದಗಳು ಸಂಸ್ಕೃತದ ಪದಗಳಾಗಿದ್ದು, ಈ ನಿಘಂಟಿನಲ್ಲಿ ಸಂಸ್ಕೃತ ಶಬ್ದಗಳ ರಚನೆಯಲ್ಲಿ ಸೇರಿರುವ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರಿಸುವುದಿಲ್ಲ: ಸಿದ್ಧವಾದ ಶಬ್ದರೂಪವನ್ನು ಮಾತ್ರ ಕೊಡಲಾಗಿದೆ. ನಿಷೇಧರೂಪಗಳನ್ನು ಉಪಸರ್ಗ ಸೇರಿದ ರೂಪಗಳನ್ನು ಬಿಡಿಸಿ ತೋರಿಸಿಲ್ಲ. ಕನ್ನಡದಲ್ಲಿ ಬಳಕೆಯಿರುವ ರೂಪಕ್ಕೂ, ಸಂಸ್ಕೃತದ ಶಬ್ದರೂಪಕ್ಕೂ ಯಾವ ವ್ಯತ್ಯಾಸವೂ ಇಲ್ಲದ ಪಕ್ಷದಲ್ಲಿ (ಸಂ.) ಎಂದು ಸೂಚಿಸಲಾಗುತ್ತದೆ. ವ್ಯತ್ಯಾಸವಿದ್ದಲ್ಲಿ 'ಸಂ' ಎಂಬ ಸಂಕೇತದ ಜೊತೆಗೆ ಸಂಸ್ಕೃತದ ಶಬ್ದರೂಪವನ್ನೂ ತೋರಿಸಲಾಗಿದೆ.

೧. ರೂಪಭೇದವಿಲ್ಲದ ಶಬ್ದಗಳು : ಫಲ (ಸಂ.), ಗಣಿತ (ಸಂ), ಪ್ರಯತ್ನ (ಸಂ).

೨. ಅಂತ್ಯದಲ್ಲಿ ಸ್ವಲ್ಪ ಮಾತ್ರ ವ್ಯತ್ಯಾಸವಿರುವ ಶಬ್ದಗಳು : ಅಭಿಮಾನಿ (ಸಂ. ಅಭಿಮಾನಿನ್), ಗಂಗೆ (ಸಂ. ಗಂಗಾ)

೩. ಹೆಚ್ಚು ವ್ಯತ್ಯಾಸವಿರುವ ಶಬ್ದಗಳು : ವಿದ್ವಾಂಸ (ಸಂ. ವಿದ್ವಸ್), ಹನುಮಂತ (ಸಂ. ಹನುಮತ್)

೪. ನಞ ಸಮಾಸ ರೂಪದ ಶಬ್ದಗಳು : ಅನನ್ತ (ಸಂ.); ಅನನ್ತರ (ಸಂ.), ಅಜ್ಞಾನ (ಸಂ.)

೫. ಉಪಸರ್ಗ ಸೇರಿದ ರೂಪಗಳು: ದುರಭಿಮಾನ (ಸಂ.); ನಿಷ್ಕಾರಣ (ಸಂ.)

ಒಟ್ಟಾರೆಯಾಗಿ ಕನ್ನಡ ನಿಘಂಟಿನಲ್ಲಿರುವ ಪದಗಳಲ್ಲಿ ಅತಿಹೆಚ್ಚು ಸಂಸ್ಕೃತ ಭಾಷೆಯಿಂದ ಬಂದ ಪದಗಳಾಗಿದ್ದು, ಎಷ್ಟರಮಟ್ಟಿಗೆ ಕನ್ನಡ ಭಾಷೆ ಸಂಸ್ಕೃತ ಭಾಷೆಯಿಂದ ಪ್ರಭಾವಿತಗೊಂಡಿದೆ ಎನ್ನುವುದು ಇದರಿಂದ ತಿಳಿಯುತ್ತದೆ.

೧. ಅಗ್ರೇಸರ (ಗು). ೧. ಮುಂದೆ ಹೋಗುವ. ೨. ಶ್ರೇಷ್ಠ; ಅತ್ಯುತ್ತಮ (ನಾ). ೩. ಮುಂದಾಳು; ನಾಯಕ. [ಸಂ.] [೧-೯೦]

೨. ಕಿರಾತಕ (ನಾ). = ಕಿರಾತ. [ಸಂ.] [೨-೧೮೧೪]

೩. ಗೋವಿಂದ (ನಾ). ೧.ಗೋವುಗಳನ್ನು ಹೊಂದಿರುವವನು; ಗೊಲ್ಲ; ಗೋವಳ: [ಸಂ.] [೩-೨೬೫೨]

೪. ತ್ರಯಸ್ಥ (ಗು). ೧. ತಟಸ್ಥವಾದ; ಪಕ್ಷಾತೀತವಾದ: [ಸಂ.] [೪-೩೭೨೫]

೫. ನೃತ್ಯಜ್ಞ (ನಾ). ನಾಟ್ಯವನ್ನು ಬಲ್ಲವನು: [ಸಂ.] [೫-೪೮೮೬]

೬. ಪ್ರತಿಮುಖರ (ನಾ). ನಾಯಕ; ಮುಂದಾಳು: [ಸಂ.] [೬- ೬೦೫೦]

೭. ಭದ್ರಾಕರಣ (ನಾ). ಕ್ಷೌರ; ಮುಂಡನ: [ಸಂ.] [೭-೬೭೦೩]

೮. ವಿಖ್ಯಾತಿ (ನಾ). ಹೆಸರುವಾಸಿ; ಪ್ರಖ್ಯಾತಿ; ಪ್ರಸಿದ್ಧಿ: [ಸಂ.] [೮-೭೮೭೭]

ಸಂಸ್ಕೃತ ಶಬ್ದಗಳು, ತತ್ಸಮ ರೂಪದಲ್ಲಿ, ಭಾಷಾಂತರ ಸ್ವೀಕರಣ ರೂಪದಲ್ಲಿ, ಪ್ರತ್ಯಯಗಳನ್ನು ಸೇರಿಸಿ ಹೊಸ ಪದಗಳ ನಿರ್ಮಾಣದ ರೂಪದಲ್ಲಿ ಹೀಗೆ ಹಲವು ಬಗೆಯಲ್ಲಿ ಕನ್ನಡ ನಿಘಂಟಿನಲ್ಲಿ ಸ್ಥಾನ ಪಡೆದಿರುವುದನ್ನು ಇದರಲ್ಲಿ ದಾಖಲಿಸಿರುವುದರಿಂದ ಕನ್ನಡ-ಸಂಸ್ಕೃತ ಭಾಷಾ ಸಂಬಂಧ ತಿಳಿಯಲು ಈ ನಿಘಂಟು ಬಹುಉಪಯುಕ್ತವಾಗಿದೆ.

**೪.೩.೧.೩. ತದ್ಭವಗಳು**

ತತ್ ಎಂದರೆ ಅದರಿಂದ ಎಂದರೆ ಮೂಲಪದದಿಂದ (ಸಂಸ್ಕೃತದಿಂದ) ಭವ ಎಂದರೆ ಹುಟ್ಟಿದ ಅಥವಾ ನಿಷ್ಪನ್ನವಾದ ಎಂದು ಅರ್ಥವಿದೆ. ಸಂಸ್ಕೃತದಿಂದ ಕನ್ನಡಕ್ಕೆ ಬರುವಾಗ ಅಲ್ಪಸ್ವಲ್ಪ ವಿಕಾರವನ್ನಾಗಲಿ, ಪೂರ್ಣ ವಿಕಾರವನ್ನಾಗಲಿ, ಹೊಂದಿ ಬಂದಿರುವ ಶಬ್ದಗಳನ್ನು ತದ್ಭವಗಳೆಂದು ಕರೆಯುವರು. ಕನ್ನಡ ನಿಘಂಟಿನಲ್ಲಿ ಸಂಸ್ಕೃತದಿಂದ ಅಥವಾ ಪ್ರಾಕೃತದಿಂದ ಬಂದ ಶಬ್ದಗಳನ್ನು ಮಾತ್ರ ತದ್ಭವ ಎಂದು ಪರಿಗಣಿಸಲಾಗಿದೆ. ತದ್ಭವಗಳಿಗೆ ಅವುಗಳ ಮೂಲಭಾಷೆಯನ್ನು ನಿಷ್ಪತ್ತಿಚಿಹ್ನೆ(<)ಯ ಮೂಲಕ ಸೂಚಿಸಿ ತೋರಿಸಲಾಗಿದೆ. ಬಕುತಿ (<ಸಂ. ಭಕ್ತಿ); ಜತನ(<ಸಂ. ಯತ್ನ). ಕನ್ನಡದಲ್ಲಿ ಬಳಕೆ ಇರುವ ಶಬ್ದರೂಪ ಮೂಲಭಾಷೆಯಿಂದ ನೇರವಾಗಿ ಬರದೆ ಬೇರೊಂದು ಭಾಷೆಯ ಮೂಲಕ ಬಂದಿರುವ ಸಂದರ್ಭದಲ್ಲಿ ನೇರ ಸಂಪರ್ಕವುಳ್ಳ ಭಾಷೆಯನ್ನು ನಿಷ್ಪತ್ತಿಚಿಹ್ನೆಯಿಂದ ಸೂಚಿಸಿ ಆ ಭಾಷೆಯ ಶಬ್ದರೂಪದ ಮುಂದೆ ಓರೆಯಾದ ಲಂಬಗೆರೆಯನ್ನು (/) ಕೊಟ್ಟು

ಮೂಲಭಾಷೆಯನ್ನು ಸೂಚಿಸಲಾಗುತ್ತದೆ. ಪ್ರಾಕೃತ ಭಾಷೆಯು ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿದ್ದು, ಸಂಸ್ಕೃತದ ಮೂಲಕ ಕನ್ನಡಕ್ಕೆ ಬಂದಿವೆ. ಈ ಭಾಷೆಯ ಹಲವು ಪದಗಳನ್ನು ಹಾಗೂ ಪ್ರಾಕೃತದಿಂದ ಸಂಸ್ಕೃತಕ್ಕೆ, ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ ಹಲವಾರು ಪದಗಳನ್ನು ಈ ನಿಘಂಟಿನಲ್ಲಿ ನೀಡಲಾಗಿದೆ.

ಉದಾ. ೧. ಒಡ್ಡ೧, ಒಟ್ಟ೧, (ನಾ). ೧. ಕಲ್ಲು, ಮಣ್ಣಿನ ಕೆಲಸಗಳನ್ನು ಮಾಡುವವನು; ಒಡ್ಡುವವನು [ಪ್ರಾ. ಓಡ್ಡ (< ಸಂ. ಓಡ್ರ).] [೧–೧೨೧೫]

೨. ಕಾಕಂಬಿ, ಕಾಕವಿ, ಕಾಕಿವೆ (ನಾ). ಬೆಲ್ಲವಾಗುವುದಕ್ಕೆ ಸ್ವಲ್ಪ ಮುಂಚೆ ತೆಗೆದ ಕಬ್ಬಿನ ಹಾಲಿನ ಪಾಕ: [ಪ್ರಾ. ಕಕ್ಕಬ] [೨–೧೬೭೯]

೩. ಕಯ್ರ, ಕಯಿರ್೨, ಕೈರ್೧, ಖೈರ್೧ (ನಾ). ೧. ಒಂದು ಜಾತಿಯ ಮರ; ಕಗ್ಗಲಿ; ಖದಿರವೃಕ್ಷ. ೨. ಕಾಚು; ಖದಿರ [< ಪ್ರಾ. ಖಇರ. (<ಸಂ. ಖದಿರ)] [೨–೧೫೨೬]

೪. ಚುಂಚು೧ ಜುಂಜು೧ (ನಾ). ೧. ಜುಟ್ಟು; ಕೂದಲು: [<ಪ್ರಾ. ಚುಂಚುಅ = ತಲೆಗೆ ಧರಿಸುವ ಒಂದು ಬಗೆಯ ಆಭರಣ; ಶಿರೋಭೂಷಣ.] [೩–೨೮೬೧]

೫. ಜೋಗಿಣಿ (ನಾ). ತಪಸ್ವಿನಿ; ಯೋಗಿನಿ: [< ಪ್ರಾ. ಜೋಗಿಣೀ, ಜೋಯಿಣೀ. /ಸಂ. ಯೋಗಿನೀ] [೩–೩೧೧೦]

೬. ದಾದಿ, ದಾಯಿ (ನಾ). ೧. ಸಾಕುತಾಯಿ; ಮಕ್ಕಳನ್ನು ಸಾಕುವವಳು: [<ಸಂ.ಧಾತ್ರೀ./ಪ್ರಾ. ಧಾತೀ. /ಪಾರ. ದಾಯಹ್] [೪–೩೮೬೧]

೭. ನಿರ್ಬುದ (ನಾ). [ಗಣಿತ] ಒಂದು ದೊಡ್ಡ ಸಂಖ್ಯೆ ; ಹತ್ತು ಅರ್ಬುದ: [< ಸಂ. ನ್ಯರ್ಬುದ] [೫–೪೬೮೯]

೮. ಬಾಗುಟೆ (ನಾ). ಬಲೆ; ಜಾಲ: [< ಸಂ. ವಾಗುರಾ] [೬–೬೩೫೮]

೯. ಮುಂಡಣ೧ (ನಾ). = ಮುಂಡನ [< ಪ್ರಾ. ಮಂಡಣ] [೭–೬೮೧೯]

೧೦. ಸಕ್ಕರೆ, ಸಖರೆ, ಸಖ್ಖರೆ, ಸರ್ಕರೆ (ನಾ). ಕಬ್ಬು ಮೊದಲಾದವುಗಳ ರಸವನ್ನು ಕುದಿಸಿ ಹರಳಿನಂತೆ ಮಾಡಿದ ಸಿಹಿಯಾದ ಪದಾರ್ಥ; [< ಪ್ರಾ. ಸಕ್ಕರಾ] [೮–೮೨೮೨]

### ೪.೩.೧.೪. ಅನ್ಯದೇಶ್ಯ ಪದಗಳು

ಪ್ರತಿಯೊಂದು ಜೀವಂತ ಭಾಷೆಯೂ ಅನ್ಯಭಾಷೆಗಳ ಪದಗಳನ್ನು ತನ್ನಲ್ಲಿ ಸೇರಿಸಿಕೊಂಡು ತನ್ನ ಶಬ್ದಭಂಡಾರವನ್ನು ಬೆಳೆಸಿಕೊಳ್ಳುತ್ತಲೇ ಇರುತ್ತದೆ. ಹೀಗೆ ಕನ್ನಡದಲ್ಲಿ ಸೇರಿರುವ ಬೇರೆ ಭಾಷೆಯ ಪದಗಳಿಗೆ 'ಅನ್ಯದೇಶ್ಯ'ಗಳೆಂದು ಕರೆಯುತ್ತೇವೆ. ನಮ್ಮ ಭಾಷೆ ಬೆಳೆಯಲು ಬೇರೆ

ಭಾಷೆಯ ಪದಗಳ ಸ್ವೀಕಾರ ಅಗತ್ಯವೂ ಅನಿವಾರ್ಯವಾಗಿದೆ. ಇವು ಮಾತಿನಲ್ಲಿ ಸಹಜವೆಂಬಂತೆ ಬಳಕೆಯಾಗುತ್ತವೆ. ಕನ್ನಡ ಭಾಷೆಯಲ್ಲಿ ಸಂಸ್ಕೃತ, ಪ್ರಾಕೃತ, ಹಿಂದೂಸ್ತಾನಿ, ಪೋರ್ಚುಗೀಸ್, ಇಂಗ್ಲಿಶ್, ಫ್ರೆಂಚ್, ಅರೇಬಿಕ್ ಶಬ್ದಗಳು ಹೇರಳವಾಗಿ ಸೇರಿಕೊಂಡಿವೆ. ಉದಾ: ಭೂಮಿ, ರಾತ್ರಿ, ಕಛೇರಿ, ಸಲಾಮು, ಬ್ಯಾಂಕ್, ಸ್ಕೂಲ್, ಸಾಬೂನು, ಮೇಜು ಮುಂತಾದವು.

ಬದಲಾವಣೆ ನಿರಂತರವಾಗಿರುವಂತಹದು. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳ ಬದಲಾವಣೆಯಂತೆ ಭಾಷಾ ಬೆಳವಣಿಗೆಯೂ ಆಗುತ್ತದೆ. ಭಾಷೆಯ ಅಂಗಗಳಾದ ವ್ಯಾಕರಣ, ಉಚ್ಚಾರಣೆ, ಶಬ್ದರೂಪ, ಅರ್ಥ ಮೊದಲಾದವುಗಳಲ್ಲಿ ಬದಲಾವಣೆ ನಿರಂತರವಾಗಿರುತ್ತದೆ. ಇಂತಹ ಬದಲಾವಣೆಗಳಲ್ಲಿ ಅನ್ಯದೇಶ್ಯ ಪದಗಳು ಸೇರುವಂತಹದ್ದು ಪ್ರಮುಖವಾಗಿದೆ. ಹಿಂದಿ, ಮರಾಠಿ, ಇಂಗ್ಲಿಶ್, ಪೋರ್ಚುಗೀಸ್, ಪರ್ಶಿಯನ್, ಅರೇಬಿಕ್, ಫ್ರೆಂಚ್ ಮೊದಲಾದ ಭಾಷೆಯ ಅನ್ಯದೇಶ್ಯ ಪದಗಳು ಕನ್ನಡಕ್ಕೆ ಸೇರಿವೆ. ಈ ರೀತಿ ಕಾಲದಿಂದ ಕಾಲಕ್ಕೆ ಭಾಷೆಯಲ್ಲಾಗುವ ಬದಲಾವಣೆಗಳನ್ನು ಅರ್ಥ ಮಾಡಿಕೊಳ್ಳಲು ನಮಗೆ ನಿಘಂಟುಗಳು ಸಹಾಯಕವಾಗಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಹ ಕನ್ನಡ ಭಾಷೆಯಲ್ಲಿರುವ ಹಲವಾರು ಅನ್ಯದೇಶ್ಯ ಪದಗಳನ್ನು ದಾಖಲಿಸಿದೆ. ಅವುಗಳನ್ನು ಉದಾಹರಣೆ ಮೂಲಕ ನೋಡಬಹುದು.

೧. ಅಮಾನತ್ತು, ಅಮಾನತು (ನಾ). ೧. ಜಮಾ ಖರ್ಚುಗಳ ಲೆಕ್ಕಕ್ಕೆ ಸೇರಿಸದೆ ಹಾಗೆಯೇ ಇಟ್ಟಿರುವ ವಸ್ತು; ಬಳಸದೆ ಭದ್ರವಾಗಿಡುವ ವಸ್ತು; ನ್ಯಾಸ: [<- ಹಿಂ. ಪಾರ. ಅಮಾನತ್, ಅನಾಮತ್; ಮರಾ. ಅಮಾನತ್] [೧-೩೪೫]

೨. ಕೋಮು (ನಾ). ಜಾತಿ; ಪಂಗಡ: [<- ಹಿಂ. ಅರ. ಕೌಮ್] [೨-೨೨೪೧]

೩. ಕೋಟು, ಕೋಟ್(ನಾ). ಇಸ್ಪೀಟು ಆಟದಲ್ಲಿ ಒಂದು ಬಗೆ. [<- ಇಂ. Quote ] [೨-೨೨೨೫]

೪. ಗರ್ಕು, ಗರಕ (ಗು). (ಕೆಲಸ ಮೊದಲಾದವುಗಳಲ್ಲಿ) ಮುಳುಗಿದ; ಮಗ್ನನಾದ; ತಲ್ಲೀನನಾದ: [<-ಅರ. ಗರಕ್; ಮರಾ. ಗರಕ್, ಗರ್ಕ್] [೨-೨೪೩೭]

೫. ಜಮಾದಾರ, ಜಮೇದಾರ (ನಾ). ೧. ಸೇವಕರ ತಂಡದ ಮುಖ್ಯಸ್ಥ; ಅಂಗರಕ್ಷಕ ದಳದ ಮುಖ್ಯಸ್ಥ [<- ಅರ. ಪಾರ. ಹಿಂ. ಮರಾ. ಜಮಾದಾರ್] [೩-೨೯೮೫]

೬. ತೋರಮಲ್ಲಿ, ತೋರ್ಮಲ್ಲಿ (ನಾ). ಒಂದು ಬಗೆಯ ಹರಳು, -ರತ್ನ; ಗಂಧರ್ವಮಣಿ: [ದೇ.॥ ತಮಿ. ತೋರಮಲ್ಲಿ, ತೋರಾಮಲ್ಲಿ; ತೆಲು. ತೋರಮಲ್ಲಿ, ತೋರಮಲ್ಲೆ./ಮರಾ. ತೋರಮಲೀ, ತೋರಮಲ್ಲೀ./ ಇಂ. Tourmaline ಸಿಂಹಳೀ. ತೋರಮೊಲ್ಲಿ] [೪-೩೭೧೧]

೭. ಪಡೋಸಿ (ನಾ). ಪಕ್ಕದ ಮನೆಯವನು; ನೆರೆಮನೆಯಾತ; [<-ಹಿ. ಮರಾ. ಪಡೋಸೀ] [೫-೫೧೬೫]

೮. ಫಿಕೀರು, ಪಿಕೀರು (ನಾ). ೧. ಆಸ್ಥೆ; ಆಸಕ್ತಿ [<- ಅರ. ಫಿಕ್ರ್; ಹಿ. ಫಿಕರ್, ಫಿಕ್ರ್ ಮರಾ. ಫಿಕರ್]
[೬-೬೧೫೫]

೯. ಬಾಂಕು$_೨$, ಬಂಕ$_೩$, ಬಾಕು$_೩$ (ನಾ). [<- ಇಂ. Bank = ಬೆಂಚು. / ತುಳು. ಬಾಂಕು./ ಪೋರ್ಚು ಬಂಕೋ; ಸ್ವೀಡಿಶ್. ಜರ್ಮನ್. ಬಾಂಕ್. /ಮರಾ. ಬಾಂಕ್]
[೬-೬೩೫೧]

೧೦. ಬಾದೂಷಾ (ನಾ). ಒಂದು ಬಗೆಯ ಸಿಹಿತಿಂಡಿ: [<- ಹಿಂ. ಬಾಲೂಸಾಹೀ, ಬಾಲೂಶಾಹೀ]
[೬-೬೩೭೩]

೧೧. ಮೇಕೂಫ್ (ನಾ). ೧. ತೆಗೆದುಹಾಕುವಿಕೆ; ವಜಾ; ರದ್ದು: [<- ಅರ. ಮವಕುಫ್, ಮೌಕಫ್; ಹಿಂ. ಮೌಕಫ್; ಮರಾ. ಮೇಕೂಫ್, ಮೋಕೂಬ್, ಮೋಹಕೂಬ್. /ತುಳು.ಮುಕೂಬ್] [೭-೭೪೭೭]

೧೨. ಶಾಮಲ (ನಾ) ತಲೆಗೆ ಧರಿಸುವ ವಸ್ತ್ರವಿಶೇಷ: (<- ಬಂಗಾಳಿ. ಶಾಮಲಾ) [೮-೮೧೦೨]

೧೩. ಸವಾರಿ (ನಾ). ೧. ಪ್ರಾಣಿ, ವಾಹನ ಇತ್ಯಾದಿಗಳ ಮೇಲೆ ಕುಳಿತು ಸಂಚರಿಸುವುದು: [<- ಪಾರ. ಸವಾರೀ, ಸುವಾರೀ, ಹಿಂ. ಸವಾರೀ, ಸ್ವಾರೀ; ಮರಾ. ಸವಾರೀ, ಸುವಾರೀ, ಸ್ವಾರೀ./ ತಮಿ. ಚಾರಿ]
[೮-೮೪೧೯]

೧೪. ಹಂಗಾಮಿ (ಗು). ೧. ತಾತ್ಕಾಲಿಕ; ಖಾಯಂ ಅಲ್ಲದ:[<- ಪಾರ. ಹಿಂ. ಹಂಗಾಮೀ] [೮-೮೭೯೩]

ಈ ನಿಘಂಟನಲ್ಲಿ ಅನ್ಯದೇಶ್ಯ ಪದಗಳಿಗೆ ಅರ್ಥವನ್ನು ನೀಡಿ ಅವುಗಳ ಮೂಲವನ್ನು ನೀಡಲಾಗಿದೆ. ಒಂದು ಪದ ಬೇರೆ ಬೇರೆ ಭಾಷೆಯಲ್ಲಿ ಯಾವ ರೀತಿ ಬಳಕೆಯಾಗುತ್ತದೆ ಎನ್ನುವುದನ್ನು ಈ ನಿಘಂಟು ತಿಳಿಸುತ್ತದೆ.

**೪.೩.೧.೫. ಜ್ಞಾತಿಪದಗಳು**

ಒಂದು ಮೂಲದ ಭಾಷಾ ಪರಿವಾರಕ್ಕೆ ಸೇರಿದ ಪದಗಳನ್ನು ಜ್ಞಾತಿಪದಗಳೆಂದು ಕರೆಯಲಾಗುತ್ತದೆ. ಕನ್ನಡ ದ್ರಾವಿಡ ಭಾಷೆಯಾಗಿದ್ದು, ಈ ವರ್ಗಕ್ಕೆ ಸೇರಿದ ತಮಿಳು, ತೆಲುಗು, ಮಲಯಾಳಿ, ತುಳು ಮೊದಲಾದ ಭಾಷೆಗಳು ಈ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರುತ್ತವೆ. ಈ ಭಾಷೆಯ ಪದಗಳು ಒಂದೇ ಮೂಲದಿಂದ ಹುಟ್ಟಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ನಿಘಂಟಿನಲ್ಲಿ ಜ್ಞಾತಿ ಪದಗಳನ್ನು ನೀಡಿರುವುದನ್ನು ಗಮನಿಸಲಾಗಿದೆ. ಪ್ರತಿ ಪದದ ಜ್ಞಾತಿ ಸಂಬಂಧಿ ಪದಗಳನ್ನು ಗಮನಿಸಲು ಅನುಕೂಲವಾಗಿದ್ದು, ಜ್ಞಾತಿ ಭಾಷೆಗಳಲ್ಲಿನ ಪದರಚನೆ ಬಗೆಗೂ ಮಾಹಿತಿಯನ್ನು ಪಡೆಯಲು ಇದು ಸಹಕಾರಿಯಾಗಿದೆ.

೧. ಅಯ್ಯ$_೫$, ಅಯ್ಯ$_೧$, ಐಯ, ಐಯ್ಯ$_೫$, (ನಾ). ೧. ತಂದೆ; ಅಪ್ಪ: [ದೇ. ॥ ತಮಿ. ಅಯ್ಯನ್, ಐಯ್ಯನ್, ಅಯ್ಯಾ; ಮಲ. ಅಯ್ಯನ್; ಕೊಡ. ಅಯ್ಯೆ; ತುಳು. ಅಯೆಯ; ತೆಲು. ಅಯ, ಅಯ್ಯ; ಕೊಲಾ. ಅಯ್ಯಾ = ತಾಯಿಯ ತಂದೆ, ಅಯ್ಯಾಕ್ = ದೇವರು. / ಸಂ. ಆರ್ಯ = ಗೌರವಾರ್ಹ ವ್ಯಕ್ತಿ ; ಪಾಲಿ. ಅಯ್ಯ = ಶ್ರೇಷ್ಠವ್ಯಕ್ತಿ]
[೧-೩೬೧]

೨. ಕಮ್ಮು (ಕ್ರಿ). ಉಸಿರು ಸುಗಂಧವಾಗಿರು; ಗಮಗಮಿಸು : [ದೇ.॥ ತಮಿ. ಕಮ್; ತೆಲು. ಕಮ್ಮು]
[೨–೧೫೨೩]

೩. ನಿಲವು, ನಿಲ, ನಿಲ್ವು, ನಿಲುವು (ನಾ). ೧. ನಿಂತಿರುವಿಕೆ; ನಿಂತುಕೊಳ್ಳುವಿಕೆ: [ದೇ.॥ ತಮಿ. ನಿಲುವೈ; ಮಲ. ನಿಲವು, ನಿಲ; ತುಳು. ನಿಲುವು, ನಿಲಾವು, ನಿಲೆವು; ತೆಲು. ನಿಲವ, ನಿಲುವ, ನಿಲುವು, ನಿಲ್ವ]
[೫–೪೭೧೮]

೪. ಬಾಗ್ಗೆ, ಬಾಗ್ಗಿ (ನಾ). ೧. ಒಂದು ಬಗೆಯ ಮರ; ಶಿರೀಷ; ಸಿರಿಸಲ ಮರ: [ದೇ.॥ ತಮಿ. ವಾಕೈ; ಮಲ. ವಾಕ; ತುಳು. ಬಾಗೆ] [೬–೬೩೫೯]

೫. ಮಾಱು, ಮಾರು (ಕ್ರಿ). ೧. ಯಾವುದಾದರೊಂದು ವಸ್ತುವನ್ನು ಕೊಟ್ಟು ಹಣವನ್ನು ಪಡೆದುಕೊಳ್ಳು; ವಿಕ್ರಯಿಸು; [ದೇ.॥ ತಮಿ. ಮಾಱು, ಮಲ. ತೆಲು. ಮಾಱು; ತುಳು. ಮಾರು; ಕೊಡ. ಕೋತ. ಮಾರ್; ತೊದ. ಮೋಱ್] [೭–೭೧೧೯]

೬. ಸರಿವು, ಸರವು, ಸರಹು, ಸರ್ರು, ಸರುವ್ವು, ಸರುಹ್ಹು (ನಾ). ೧. (ಮಳೆಯ) ಧಾರೆ; ಸುರಿತ: [ದೇ.॥ ತಮಿ. ಚರಿವು. ಚರುವು; ಮಲ. ಚರಿವು; ತೆಲು. ಚಱಿ, ಚಱಿಯ] [೮–೮೩೮೯]

ಈ ನಿಘಂಟಿನಲ್ಲಿ ದೇಶ್ಯ ಶಬ್ದಗಳಿಗೆ ಇತರ ಸೋದರ ಭಾಷೆಗಳಲ್ಲಿ ದೊರೆಯುವ ಜ್ಞಾತಿಶಬ್ದಗಳನ್ನು ಕೊಟ್ಟಿದೆ. ಅರ್ಥ ಭೇದವಿದ್ದಲ್ಲಿ ಮಾತ್ರ ಅರ್ಥವನ್ನು ಬರೆದು ತೋರಿಸಿದೆ. ಜ್ಞಾತಿ ಶಬ್ದಗಳನ್ನು ತಮಿ. (ತಮಿಳು); ಮಲ. (ಮಲಯಾಳಿ); ತುಳು; ಕೊಡ. (ಕೊಡಗು); ತೆಲು. (ತೆಲುಗು); ಕೊಲಾ. (ಕೊಲಾಮಿ); ನಾಯ್ಕಿ. ಪರ್ಜಿ. ಗಡಬ, ಗೊಂಡಿ. ಕುಇ. ಕುವಿ. ಕುರುಖ್. ಮಲ್ತೊ. ಬ್ರಾಹುಈ. ಈ ಅನುಕ್ರಮದಲ್ಲಿ ನೀಡಲಾಗಿದೆ.

ತಮಿಳು ಶಬ್ದಗಳನ್ನು ಕನ್ನಡ ಅಕ್ಷರಗಳಲ್ಲಿ ಬರೆದು ತೋರಿಸುವಾಗ ತಮಿಳು ನಿಘಂಟಿನಲ್ಲಿರುವ ಕೊಟ್ಟಿರುವ ಕಾಗುಣಿತಗಳನ್ನು ಕೊಡಲಾಗಿದೆ. ಪದಗಳಿಗೆ ನಿಷ್ಪತ್ತಿಯನ್ನು ನೀಡಿದ ಮೇಲೆ ಜ್ಞಾತಿ ಅಥವಾ ಸಂವಾದಿ ಶಬ್ದಗಳನ್ನು ನೀಡಲಾಗಿದೆ. ಜ್ಞಾತಿಶಬ್ದಗಳನ್ನು ಪ್ರಾರಂಭಿಸುವ ಮೊದಲು ಎರಡು ಲಂಬರೇಖೆ(॥)ಗಳಿಂದ ಭೇದವನ್ನು ಸೂಚಿಸಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

**೪.೩.೧.೬. ಪ್ರತ್ಯಯಗಳು**

ನಾಮಪ್ರಕೃತಿ ಅಥವಾ ಕ್ರಿಯಾಪ್ರಕೃತಿಯ ಮುಂದೆ ಯಾವುದಾದರೊಂದು ಅರ್ಥವನ್ನು ತಿಳಿಸುವುದಕ್ಕಾಗಿ ಸೇರುವ ಅಕ್ಷರ ಅಥವಾ ಪದಾಂಶವನ್ನು ಪ್ರತ್ಯಯವೆಂದು ಕರೆಯಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಪ್ರತ್ಯಯಗಳನ್ನು ಇತರ ಶಬ್ದಗಳಂತೆ ಮುಖ್ಯ ಉಲ್ಲೇಖಗಳಾಗಿ ಕೊಟ್ಟಿದೆ. ಪ್ರತ್ಯಯಗಳಲ್ಲಿ ಶಬ್ದದ ಆದಿಯಲ್ಲಿ ಸೇರುವುದಕ್ಕೆ ಪೂರ್ವಪ್ರತ್ಯಯವೆಂದೂ, ಮಧ್ಯದಲ್ಲಿ ಸೇರುವುದಕ್ಕೆ ಮಧ್ಯಪ್ರತ್ಯಯವೆಂದೂ, ಅಂತ್ಯದಲ್ಲಿ ಸೇರುವುದಕ್ಕೆ ಪರಪ್ರತ್ಯಯವೆಂದೂ ನಿರ್ದೇಶಿಸಿದೆ.

ಈ ಪ್ರತ್ಯಯಗಳಲ್ಲಿ ಆಖ್ಯಾತ ಮತ್ತು ವಿಭಕ್ತಿ ಪ್ರತ್ಯಯಗಳನ್ನೂ ಅವುಗಳ ಸಂಬಂಧವಾಗಿ ಸೇರುವ ಆಗಮಗಳನ್ನೂ ಈ ನಿಘಂಟಿನಲ್ಲಿ ಸ್ವತಂತ್ರ ಉಲ್ಲೇಖಗಳಾಗಿ ತೋರಿಸಿಲ್ಲ. ಆದರೆ ಕೃತ್, ತದ್ಧಿತನಾಮ ಪ್ರತ್ಯಯಗಳನ್ನೂ ಧಾತುಸಾಧಕ – ಇಸು, –ಸು, –ಚು ಪ್ರತ್ಯಯಗಳನ್ನೂ ಪ್ರತ್ಯೇಕವಾಗಿ ಕೊಟ್ಟಿದೆ.

ಪ್ರತ್ಯಯಗಳು ಪ್ರಕೃತಿ ರೂಪಗಳ ಅರ್ಥವನ್ನು ಬದಲಾಯಿಸುತ್ತವೆ ಹಾಗೂ ಪ್ರತಿಯೊಂದು ಪದಕ್ಕೆ ವಾಕ್ಯದಲ್ಲಿನ ಉಳಿದ ಪದಗಳೊಡನೆ ಇರುವ ಸಂಬಂಧವನ್ನು ನಿರ್ದೇಶಿಸುವ ಕಾರ್ಯವನ್ನು ಪ್ರತ್ಯಯಗಳು ಮಾಡುತ್ತವೆ.

೧. ಅ₁ (ಪ್ರ). ಕೆಲವು ಧಾತುಗಳಿಂದ ಭಾವನಾಮ ಅನ್ವರ್ಥನಾಮ ಮುಂತಾದವನ್ನು ಸಾಧಿಸಲು ಹತ್ತುವ ಪ್ರತ್ಯಯ : (i) ಭಾವನಾಮಕ್ಕೆ – ಆಟ, ಊಟ, ಎಱಕ, ನಡುಕ, ಸಾಲ, ಸೋಲ ಇತ್ಯಾದಿ: (ii) ಅನ್ವರ್ಥನಾಮಕ್ಕೆ – ಕಳ್ಳ, ಕುಂಟ, ಕೂನ, ಜಱುಕ ಇತ್ಯಾದಿ:

[೧–೧]

೨. ಅ₂ (ಪ್ರ). ಕೆಲವು ಬಹುವ್ರೀಹಿ ಸಮಾಸಗಳ ಅಂತ್ಯದಲ್ಲಿ ಹತ್ತುವ ಪ್ರತ್ಯಯ : ಉದಾ– ಅಂಚೆದೇರ, ಮುಕ್ಕಣ್ಣ ಇತ್ಯಾದಿ.

[೧–೧]

೩. ಉ₁ (ಪ್ರ). ಕೆಲವು ನಾಮವಾಚಕಗಳಿಂದ ಭಾವನಾಮಗಳನ್ನು ಸಾಧಿಸಿಕೊಳ್ಳಲು ಸೇರಿಸುವ ಪ್ರತ್ಯಯ. ಉದಾ :– ಕಿವುಡು, ಕುರುಡು, ತಳಾಱು, ಪರದು:

[೧–೮೪೨]

೪. ಎ₃ (ಪ್ರ). ಸ್ತ್ರೀಲಿಂಗ ಪ್ರತ್ಯಯ :

೫. ಎ₄ (ಪ್ರ) ೧. ನಾಮವಾಚಕ, ಕ್ರಿಯಾವಾಚಕಗಳ ಕೊನೆಯಲ್ಲಿ ಪ್ರಶ್ನಾರ್ಥದಲ್ಲಿ ಸೇರುವ ಪ್ರತ್ಯಯ :

[೧–೧೦೩೭]

೬. ಎ₅ (ಪ್ರ). ಅವಧಾರಣಾರ್ಥದಲ್ಲಿ ಬರುವ ಪ್ರತ್ಯಯ:

[೧–೧೨೬೨]

೭. ಒಳ್₁ (ಪ್ರ). ಸ್ತ್ರೀಲಿಂಗ ಸಾಧಕ ಪ್ರತ್ಯಯ :

ಕನ್ನಡ ನಿಘಂಟಿನಲ್ಲಿ ವಿಭಕ್ತಿಪ್ರತ್ಯಯ, ಆಖ್ಯಾತ ಪ್ರತ್ಯಯ, ಕೃತ್ಪ್ರತ್ಯಯ, ತದ್ಧಿತಪ್ರತ್ಯಯ ಮೊದಲಾದವುಗಳ ಮಾಹಿತಿ ಇದ್ದು, ಪೂರ್ವಪ್ರತ್ಯಯ, ಮಧ್ಯಪ್ರತ್ಯಯ ಹಾಗೂ ಪರಪ್ರತ್ಯಯಗಳು ಈ ನಿಘಂಟಿನಲ್ಲಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

೪.೩.೧.೭. ಅವ್ಯಯಗಳು

ಕನ್ನಡ ನಿಘಂಟಿನಲ್ಲಿ ದಾಖಲಾದ ವಿಶಿಷ್ಟ ಶಬ್ದಗಳಲ್ಲಿ ಅವ್ಯಯಗಳು ಪ್ರಮುಖವಾದವು. ಮೊದಲ ಸಂಪುಟದಲ್ಲಿ ವಿವರಿಸಿರುವಂತೆ 'ಅವ್ಯಯ' ಎನ್ನುವ ಪದಕ್ಕೆ ಸಾಮಾನ್ಯಾರ್ಥದಲ್ಲಿ ವ್ಯಯವಿಲ್ಲದ; ನಷ್ಟ ಹೊಂದದ; ವಿಕಾರ ಹೊಂದದ; ಒಂದೇ ಪ್ರಕಾರ ಇರುವಂಥ ಎನ್ನುವ ಅರ್ಥಗಳಿವೆ. ವ್ಯಾಕರಣದ ಪ್ರಕಾರ 'ಲಿಂಗವಚನ ವಿಭಕ್ತಿಗಳಿಗಾಗಿ ರೂಪಭೇದ ಹೊಂದದ ಶಬ್ದ' ಎನ್ನುವ ಅರ್ಥವಿದೆ. ಅವ್ಯಯಗಳು ನಾಮಪದ, ಕ್ರಿಯಾಪದಗಳಂತೆ ಲಿಂಗ, ವಚನ, ವಿಭಕ್ತಿಗಳಿಂದ ಯಾವುದೇ ರೀತಿಯ ರೂಪಾಂತರವನ್ನೂ ಹೊಂದದೆ ಏಕರೂಪವಾಗಿರುತ್ತವೆ.

ಅವ್ಯಯಗಳನ್ನು ಎಂಟು ಬಗೆಗಳಾಗಿ ವಿಂಗಡಿಸಲಾಗಿದೆ.

೧. ಸಾಮಾನ್ಯಾವ್ಯಯ : ಕ್ರಿಯೆಯ ಸ್ಥಾನ, ರೀತಿ, ಕಾಲ ಮುಂತಾದವುಗಳನ್ನು ತಿಳಿಸುವ ಅವ್ಯಯಗಳನ್ನು ಸಾಮಾನ್ಯಾವ್ಯಯ ಎಂದು ಕರೆಯಲಾಗಿದೆ. ಇವುಗಳಲ್ಲಿ ಕಾಲಸೂಚಕ ಅವ್ಯಯ, ಸ್ಥಾನಸೂಚಕ ಅವ್ಯಯ ಹಾಗೂ ರೀತಿ ಸೂಚಕಗಳೆಂಬ ವಿಧಗಳಿವೆ. ಉದಾ:– ಆನಂತರ, ಆಮೇಲೆ, ಕೂಡಲೆ, ಆನಂತರ ಇವು ಕಾಲಸೂಚಕ ಅವ್ಯಯಗಳು, ಹಾಗೆ, ಅತ್ತ, ಇತ್ತ, ಎತ್ತ ಇವು ಸ್ಥಾನ ಸೂಚಕ ಅವ್ಯಯಗಳು ಮೆಲ್ಲನೆ, ತೆಳ್ಳಗೆ, ಸುಮ್ಮನೆ, ಹಾಗೆ ಇವು ರೀತಿಸೂಚಕ ಅವ್ಯಯಗಳು. ಸಾಮಾನ್ಯವಾಗಿ ಕ್ರಿಯೆಗೆ ವಿಶೇಷಣಗಳಾಗಿರುತ್ತವೆ.

ಉದಾ: ರಾಮನು 'ಚೆನ್ನಾಗಿ' ಹಾಡುತ್ತಾನೆ.

ಉಪನ್ಯಾಸಕರು 'ಸೊಗಸಾಗಿ' ಮಾತನಾಡಿದರು.

ಮೇರಿಯು 'ಸುಮ್ಮನೆ' ಕುಳಿತಿದ್ದಾಳೆ.

ಅವರು 'ಮೆಲ್ಲಗೆ' ಮಾತನಾಡುತ್ತಾರೆ.

೨. ಅನುಕರಣಾವ್ಯಯ : ಕಿವಿಗೆ ಕೇಳಿಸಿದ ಅರ್ಥವಿಲ್ಲದ ಧ್ವನಿಗಳನ್ನು ಪುನಃ ಅದೇ ರೀತಿ ಅನುಕರಣ ಮಾಡಿ ಹೇಳುವ ಅವ್ಯಯಗಳಿಗೆ 'ಅನುಕರಣಾವ್ಯಯ' ಎಂದು ಹೆಸರು.

ಉದಾ : ಹಾವು 'ಸರಸರ' ಹೋಯಿತು.

ಮಳೆಯು 'ರಪರಪ' ಸುರಿಯಿತು.

ಮಾತನಾಡುವಾಗ ವಿಶೇಷಾರ್ಥ ಕೊಡಲಿಕ್ಕೆ, ಕಾವ್ಯ ಸೌಂದರ್ಯ ಹೆಚ್ಚಿಸಲಿಕ್ಕೆ (ಸಾಹಿತ್ಯದಲ್ಲಿ ವಿಶಿಷ್ಟ ವಾತಾವರಣ ನಿರ್ಮಿಸಲು) ಅನುಕರಣ ಪದಗಳು ತುಂಬ ನೆರವಾಗುತ್ತವೆ. ವ್ಯಂಗ್ಯ, ನಿಂದೆ, ಕಟಕಿ, ತಿರಸ್ಕಾರ, ಅಣಕ, ಕೋಪ ಇತ್ಯಾದಿ ಭಾವನೆಗಳನ್ನು ವ್ಯಕ್ತಪಡಿಸಲು ಅನುಕರಣ ವಾಚಕಗಳು ಒಳ್ಳೆಯ ಮಾಧ್ಯಮ ಅರ್ಥ ಅಥವಾ ನಿಯೋಗದ ದೃಷ್ಟಿಯಿಂದ ಅವು ಭಾಷೆಯಲ್ಲಿ ಮುಖ್ಯವಲ್ಲದಿದ್ದರೂ ಪ್ರಮುಖ ಪಾತ್ರವನ್ನು ವಹಿಸುತ್ತವೆಂಬುದನ್ನು ಗಮನಿಸಬೇಕು.

೩. ಭಾವಸೂಚಕಾವ್ಯಯ : ಮನಸ್ಸಿನಲ್ಲಿ ಉಂಟಾಗುವ – ಆಕ್ಷೇಪ, ಕೋಪ, ತಿರಸ್ಕಾರ, ದುಃಖ, ಮೆಚ್ಚುಗೆ, ಹರ್ಷ – ಇತ್ಯಾದಿ ಭಾವಗಳನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಬಳಸುವ ಅರ್ಥವಿಲ್ಲದ ಶಬ್ದಗಳಿಗೆ 'ಭಾವಸೂಚಕಾವ್ಯಯ'ಗಳೆಂದು ಕರೆಯುತ್ತಾರೆ. ಇವುಗಳಿಗೆ ನಿಪಾತಾವ್ಯಯಗಳೆಂದು ಕರೆಯಲಾಗಿದೆ.

ಉದಾ : ಅಬ್ಬಬ್ಬಾ! ಅಯ್ಯೋ!ಅಯ್ಯಯ್ಯೋ!ಅರೆರೆ! ಅಹಹ! ಆಹಾ! ಎಲಾ! ಛಿ! ಛೆ! ಥತ್!
ಥೂ! ಭಲೇ! ಅಕಟಕಟಾ! ಅಕ್ಕಟಾ! ಅಬ್ಬಾ! ಭಳಿರೇ! ಇತ್ಯಾದಿ.

೪. ಕ್ರಿಯಾರ್ಥಕಾವ್ಯಯ : ಕೆಲವೊಮ್ಮೆ ವಾಕ್ಯಗಳಲ್ಲಿ ಕ್ರಿಯಾಪದದ ಅರ್ಥವನ್ನು ಕೊಡುವ ಅಲ್ಲ, ಇಲ್ಲ, ಉಂಟು, ಬೇಕು, ಬೇಡ, ಸಾಕು, ಹೌದು – ಎನ್ನುವ ಅವ್ಯಯಗಳು ಬಳಕೆಯಾಗುತ್ತವೆ ಇವುಗಳನ್ನು 'ಕ್ರಿಯಾರ್ಥಕಾವ್ಯಯ'ಗಳೆಂದು ಕರೆಯಲಾಗುತ್ತದೆ.

ಉದಾ : ೧. ಅವನಲ್ಲಿ ದುರಭ್ಯಾಸ 'ಉಂಟು'

೨. ಅವನಿಗೆ ವಿವೇಕ 'ಇಲ್ಲ'.

೩. ನನಗೆ ಒಂದು ಹಣ್ಣು 'ಬೇಕು'.

ಸಾಮಾನ್ಯವಾಗಿ ಇಂತಹ 'ಕ್ರಿಯಾರ್ಥಕಾವ್ಯಯಗಳು' ಕೆಲವೊಮ್ಮೆ ತಮ್ಮ ಹಿಂದೆ ಅಥವಾ ಮುಂದೆ ಇನ್ನೊಂದು ಕ್ರಿಯಾಪದದಿಂದ ಕೂಡಿಯೂ ಅಥವಾ ಕೆಲವೊಮ್ಮೆ ಸ್ವತಂತ್ರವಾಗಿಯೂ ಪ್ರಯೋಗವಾಗುತ್ತವೆ.

ಇವು ಪದಗಳು ಕ್ರಿಯಾಪದಗಳ ಹಾಗೆಯೇ ಒಂದು ವಾಕ್ಯದ ಅರ್ಥವನ್ನು ಪೂರ್ಣಗೊಳಿಸುತ್ತವೆ.

೫. ಸಂಬಂಧಾರ್ಥಕಾವ್ಯಯ : ವಾಕ್ಯಗಳಲ್ಲಿ ಬರುವ ಪದಗಳನ್ನಾಗಲಿ, ಹಲವು ಪದಗಳನ್ನಾಗಲಿ ಅಥವಾ ವಾಕ್ಯಗಳನ್ನಾಗಲಿ ಜೋಡಿಸುವಂತಹ ಅಂದರೆ ಪರಸ್ಪರ ಸಂಬಂಧವನ್ನುಂಟುಮಾಡುವಂತಹ ಅವ್ಯಯಗಳಿಗೆ 'ಸಂಬಂಧಾರ್ಥಕಾವ್ಯಯ' ಎಂದು ಕರೆಯುತ್ತೇವೆ. ಉದಾ : ಊ, ಮತ್ತು, ಹಾಗೂ, ಅಥವಾ, ಆದರೆ, ಆದುದರಿಂದ, ಹಾಗಾದರೆ, ಅಲ್ಲದೆ . . . ಇತ್ಯಾದಿ.

೬. ಕೃದಂತಾವ್ಯಯ : ಅಪೂರ್ಣವಾದ ಕ್ರಿಯೆಯನ್ನು ಸೂಚಿಸುವಲ್ಲಿ ಧಾತುವಿನಿಂದ ಹುಟ್ಟಿ ಅವ್ಯಯದ ಗುಣವನ್ನು ಪಡೆದಂತಹ ಶಬ್ದರೂಪಗಳೇ 'ಕೃದಂತಾವ್ಯಯ'ಗಳು. ಇವು ಧಾತುಗಳಿಗೆ ಉತ, ಉತ್ತ, ಅದೆ, ದರೆ, ಅಲು, ಅಲಿಕ್ಕೆ, ಅ,ಇ, ದು – ಇತ್ಯಾದಿ ಪ್ರತ್ಯಯಗಳು ಸೇರಿ ಆದ ಶಬ್ದಗಳಾಗಿವೆ.

೭. ತದ್ಧಿಂತಾಂತಾವ್ಯಯ : ನಾಮಪದಗಳಿಗೆ ಇಂತ, ಮಟ್ಟಿಗೆ, ಅಂತೆ, ವೊಲ್, ವೊಲು, ವೋಲು, ತನಕ, ವರೆಗೆ, ಓಸ್ಕರ, ಸಲುವಾಗಿ, ಆಗಿ, ಓಸುಗ ಇತ್ಯಾದಿ ಪ್ರತ್ಯಯಗಳು ಸೇರಿ ಆದ ಶಬ್ದಗಳಿಗೆ 'ತದ್ಧಿತಾಂತಾವ್ಯಯ'ಗಳೆಂದು ಹೆಸರು.

೮. ಅವಧಾರಣಾರ್ಥಕಾವ್ಯಯ : ಒಂದು ನಿಶ್ಚಯಾರ್ಥದಲ್ಲಿ ಬರುವ ಅವ್ಯಯಕ್ಕೆ 'ಅವಧಾರಣಾರ್ಥಕಾವ್ಯಯ' ಎಂದು ಹೆಸರು. ಅಂದರೆ ಹಲವಾರು ವಸ್ತುಗಳಲ್ಲಿ ಒಂದನ್ನು ನಿಶ್ಚಯಿಸುವುದಕ್ಕೆ 'ಅವಧಾರಣೆ' ಎನ್ನಲಾಗಿದೆ ಅದನ್ನೇ 'ಅವಧಾರಣಾರ್ಥಕಾವ್ಯಯ' ಎಂದು ಕರೆಯಲಾಗುತ್ತದೆ.

ಕನ್ನಡ ನಿಘಂಟಿನಲ್ಲಿ ಮೇಲ್ಕಂಡ ಎಲ್ಲ ಅವ್ಯಯಗಳನ್ನು ದಾಖಲಿಸಿದ್ದು, ಅವುಗಳನ್ನು ಈ ಕೆಳಕಂಡಂತೆ ಗಮನಿಸಬಹುದಾಗಿದೆ.

ಉದಾ :

೧. ಅಂಜಸಾ (ಅ). ದಿಟವಾಗಿ; ನಿಜವಾಗಿ; ಸರಿಯಾಗಿ ಥಟ್ಟನೆ; ಕೂಡಲೇ [ಸಂ.] (೧-೨೩)

೨. ಅಂತುಟು (ಅ). ಹಾಗೆ ; ಆ ರೀತಿಯಲ್ಲಿ [< ಅಂತುಟು ] (೧-೩೮)

೩. ಅಂತೆ (ಅ). ಹಾಗೆಂದು ಹೇಳುತ್ತಾರೆ, ಹೀಗೆಂದು ಸುದ್ದಿಯಿದೆ ಎಂಬುದನ್ನು ಸೂಚಿಸುವ ಶಬ್ದ (೧-೩೯)

೪. ಘೊಳ್ಳನೆ (ಅ). ಒಂದು ಅನುಕರಣಾವ್ಯಯ; [ಘೊಳ್+ಅನ್ನೆ] (೩-೨೭೦೧)

೫. ದಳದಳನೆ (ಅ). ದಳದಳ ಎಂದು : ಸರಸರನೆ; ವೇಗವಾಗಿ 'ದಡಬಡನೆ', 'ಧಳಧಳನೆ' ಪರಾ. [ದಳದಳ+ಅನ್ನೆ] (೪-೩೮೪೫)

೬. ನಿಟಂಬ (ಅ) ಉದ್ದಕ್ಕೆ ; ಸಾಷ್ಟಾಂಗವಾಗಿ: (೫-೪೫೭೧)

೭. ಮಡುಮಡನೆ (ಅ) ಮಡುಮಡು ಎಂದು (೬-೫೬೬೯)

೮. ಪುರ್ರನೆ (ಅ). ಒಂದು ಅನುಕರಣ ಪದ (೭-೫೭೯)

೯. ಭೋಂಕನೆ (ಅ). ಒಂದು ಅನುಕರಣಾವ್ಯಯ ; ತಟ್ಟನೆ; ಬೇಗನೆ (೭-೬೭೮೯)

೧೦. ಶಿರಂಬರಂ (ಅ). ತಲೆಯವರೆಗೂ; ತಲೆಮಟ್ಟ : [ಶಿರ +ಬರಂ(<ವರಂ)] (೮-೮೧೧೮)

೧೧. ಸ್ವತಃ (ಅ). ತಾನೇ; ಖುದ್ದಾಗಿ; ಸ್ವಯಂ: [ಸಂ. ಸ್ವತಸ್], (೮-೮೭೭೮)

೧೨. ಗಾಡನೆ (ಅ). ಬೇಗನೆ; ಶೀಘ್ರವಾಗಿ; ಜಾಗ್ರತೆಯಾಗಿ [< ಗಡನೆ] (೨-೨೪೭೨)

ಈ ಮೇಲೆ ಉದಾಹರಣೆ ನೀಡಿದ ಅವ್ಯಯಗಳು ಹಲವು ವೈಶಿಷ್ಟ್ಯಗಳನ್ನು ಹೊಂದಿದ್ದು, ಅವುಗಳನ್ನು ಹೀಗೆ ಗುರುತಿಸಬಹುದು. ಕನ್ನಡ ನಿಘಂಟಿನಲ್ಲಿ ಎಲ್ಲ ವಿಧದ ಅವ್ಯಯಗಳು ಕಂಡುಬಂದರೂ ಅನುಕರಣಾವ್ಯಯಗಳ ದಾಖಲಾತಿ ಹೆಚ್ಚಿದೆ. ಅನುಕರಣಾವ್ಯಯದ ಒಂದು ಪದಕ್ಕೆ ಹಲವು ರೂಪಗಳನ್ನು ಇದರಲ್ಲಿ ಗುರುತಿಸಬಹುದು.

೧. ಅನುಕರಣಾವ್ಯಯಗಳಲ್ಲಿ ಕೆ.ವಿ.ನಾರಾಯಣ ಅವರು ಎರಡು ಬಗೆಗಳನ್ನು ಗುರುತಿಸಿದ್ದಾರೆ.[೧೪] ಉದಾ: ಮಿರಿಮಿರಿ, ಥಳಥಳ, ಫಳಫಳ ಇತ್ಯಾದಿ. ಇವು ಕಣ್ಣಿನ ಅನುಭವವನ್ನು ಹೇಳುವ ಅನುಕರಣವಾಚಿಗಳು. ಮತ್ತೊಂದು ಬಗೆಯವು ಕಿವಿಯ ಅನುಭವವನ್ನು ಸೂಚಿಸುವಂತಹವು. ಉದಾ: ದರದರ, ಸರಸರ, ಕಟಕಟ, ರಪರಪ. ಕನ್ನಡ ನಿಘಂಟು ಎರಡು ರೀತಿಯ ಅನುಕರಣಾವ್ಯಗಳನ್ನು ಹೊಂದಿದೆ.

೨. ಅವ್ಯಯಗಳ ಎಲ್ಲ ವಿಧಗಳನ್ನು ಕನ್ನಡ ನಿಘಂಟು ಒಳಗೊಂಡಿದೆ. ಆದರೆ ಅವುಗಳನ್ನು ನಮೂದಿಸುವಾಗ ಕೇವಲ ಅವ್ಯಯ ಎಂದು ಮಾತ್ರ ಸೂಚಿಸಿದೆ.

೩. ಕನ್ನಡ ನಿಘಂಟಿನಲ್ಲಿ ಅನುಕರಣಾವ್ಯಯಗಳು ಅಧಿಕ ಪ್ರಮಾಣದಲ್ಲಿದ್ದು, ಪ್ರತ್ಯೇಕವಾಗಿ ವ್ಯಾಕರಣಾಂಶಗಳ ಹಿನ್ನೆಲೆಯಲ್ಲಿ ಇವುಗಳ ಅಧ್ಯಯನ ಮಾಡಬಹುದಾಗಿದೆ.

**೪.೩.೨. ಅರ್ಥ**

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಪದಗಳಿಗೆ ಅರ್ಥ ನೀಡುವಾಗ ಒಂದು ಪದಕ್ಕಿರುವ ಎಲ್ಲ ಅರ್ಥಸಾಧ್ಯತೆಗಳನ್ನು ನೀಡಲಾಗಿದೆ. ಪ್ರಸ್ತುತ ಭಾಗದಲ್ಲಿ ಈ ನಿಘಂಟಿನಲ್ಲಿ ದಾಖಲಾದ ಸಮಾನಾರ್ಥಕಗಳು, ನಾನಾರ್ಥಕಗಳು, ನಿಷೇಧಾರ್ಥಕಗಳ ಬಗೆಗೆ ವಿವರಿಸಲಾಗಿದೆ. ಅವುಗಳಲ್ಲದೇ ವಾಚ್ಯಾರ್ಥ, ವ್ಯಂಗ್ಯಾರ್ಥ, ಆಲಂಕಾರಿಕ ಅರ್ಥಗಳನ್ನು ಸಂದರ್ಭಕ್ಕನುಸಾರವಾಗಿ ನೀಡಿರುವುದರಿಂದ ಇದೊಂದು ಶಬ್ದಾರ್ಥ ಕೈಪಿಡಿಯಾಗಿದೆ. ಈ ಭಾಗದಲ್ಲಿ ಸಮಾನಾರ್ಥಕ, ನಾನಾರ್ಥಕ, ನಿಷೇಧಾರ್ಥಕಗಳನ್ನು ಗಮನಿಸಲಾಗಿದೆ.

**೪.೩.೨.೧. ಸಮಾನಾರ್ಥಕಗಳು**

ಒಂದು ಭಾಷೆಯನ್ನು ಕಲಿಯಬೇಕಾದರೆ ಆ ಭಾಷೆಯ ಶಬ್ದಸಂಪತ್ತನ್ನು ನಮ್ಮದಾಗಿಸಿಕೊಳ್ಳಬೇಕು. ಪದಸಂಪತ್ತನ್ನು ಶ್ರೀಮಂತವಾಗಿಸಿಕೊಂಡಷ್ಟೂ ಭಾಷೆಯ ಮೇಲಿನ ನಮ್ಮ ಪ್ರಭುತ್ವ ಬಲಗೊಳ್ಳುತ್ತದೆ. ಭಾಷೆಯಲ್ಲಿ ಒಂದು ಅರ್ಥವನ್ನು ಸೂಚಿಸುವ ಹಲವು ಪದಗಳು ಚಲಾವಣೆಯಲ್ಲಿರುತ್ತವೆ. ಇವುಗಳನ್ನು ಸಮಾನಾರ್ಥಕಗಳು ಎಂದು ಕರೆಯುತ್ತಾರೆ. ಹಲವಾರು ಸಲ ಒಂದೇ ಅರ್ಥದ ಛಾಯೆಯನ್ನು ಅಥವಾ ಸಣ್ಣ ವ್ಯತ್ಯಾಸವನ್ನು ಸೂಚಿಸಲು ಇಂಥ ಪದಗಳು ಸೃಷ್ಟಿ ಆಗಿರುತ್ತವೆ. ಇವು ಆಯಾ ಭಾಷೆಯ ಶ್ರೀಮಂತಿಕೆಯ, ಸೃಜನಶೀಲತೆಯ ಪ್ರತೀಕವಾಗಿವೆ.

"ಅರ್ಥ ಸಮಾನತೆ ಮತ್ತು ಸಾದೃಶ್ಯ ಕಂಡುಬರುವ ನುಡಿಗಳನ್ನು ಸಮಾನಾರ್ಥಕ ರೂಪಗಳೆನ್ನುವರು ಅಥವಾ ಎರಡು ಭಿನ್ನ ಶಬ್ದಗಳು ಒಂದೇ ಅರ್ಥ ಪಡೆದುಕೊಂಡಿದ್ದರೆ ಅವು ಸಮಾನಾರ್ಥಕ ರೂಪಗಳೆನಿಸಿಕೊಳ್ಳುತ್ತವೆ. ಅವು ಮುಖ್ಯವಾಗಿ ಒಂದು ಶಬ್ದದ ಅರ್ಥವನ್ನೇ ಹೇಳುತ್ತವೆ."[೩] ಉದಾ: ಬಂಗಾರ: ಚಿನ್ನ, ಸುವರ್ಣ, ಹೊನ್ನು, ಅಪರಂಜಿ, ಕಡವರ, ಕಸವರ, ಕಾಂಚನ, ಮಿಸುನಿ, ಪೊನ್ ಇತ್ಯಾದಿ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ನೀಡಿರುವ ಸಮಾನಾರ್ಥಕ ಪದಗಳಲ್ಲಿ ಕೆಲವನ್ನು ಉದಾಹರಣೆಯಾಗಿ ನೀಡಲಾಗಿದೆ.

ಉದಾ :

೧. ಅಂಕಣ (ನಾ). ೧. ಮನೆಯ ಎರಡು ಕಂಬಗಳ ಅಥವಾ ಎರಡು ತೊಲೆಗಳ ನಡುವೆ ಇರುವ ಪ್ರದೇಶದ ಪರಿಮಿತಿ (೧-೦೩)

೨. ಆಸಾಮಿ (ನಾ) ೧. ವ್ಯಕ್ತಿ; ಮನುಷ್ಯ (೧-೯೯೬)

೩. ಕಂಟಕ (ನಾ) ೧. ವಿಘ್ನ; ವಿಪತ್ತು (೨-೧೩೩೩)

೪. ಗಾವುದ (ನಾ) ೧. ದೂರವನ್ನು ಅಳೆಯುವ ಒಂದು ಅಳತೆ; ಎರಡು ಹರಿದಾರಿ; ಸುಮಾರು ಆರು ಮೈಲಿ (೩-೨೪೮೮)

೫. ಚಂದಿರ (ನಾ) ೧. ಚಂದ್ರ; ತಿಂಗಳು (೩-೨೭೧೫)

೬. ತತ್ತರ (ನಾ) ೧. ನಡುಕ;ಕಂಪನ;ಕಕ್ಕಾಬಿಕ್ಕಿ; ತಬ್ಬಿಬ್ಬು; ಗಾಬರಿ (೩-೩೨೬೪)

೭. ತೀಕ್ಷ್ಣ (ಗು) ೧. ಚೂಪಾದ; ಹರಿತವಾದ (೪-೩೫೧೫)

೮. ನಾಯಕ (ನಾ) ೧. ಮುಂದಾಳು; ಮುಖಂಡ; ಅಗ್ರೇಸರ; (೫-೪೪೯೮)

೯. ನಿಘಂಟು (ನಾ) ೧. ಶಬ್ದಾರ್ಥಗಳ ಕೋಶ; ಶಬ್ದಕೋಶ; ಅರ್ಥಕೋಶ (೫-೪೩೫೮)

೧೦. ಪಿಟುಗುಟ್ಟು (ಕ್ರಿ) ೧. ಪಿಟಿಪಿಟಿ ಎಂದು ಶಬ್ದ ಮಾಡು; ಗೊಣಗುಟ್ಟು (೬-೫೬೦೪)

೧೧. ಮನೋಹರ (ಗು) ೧. ಸೊಗಸಾದ; ರಮಣೀಯವಾದ; ಚೇತೋಹಾರಿಯಾದ(೭-೯೩೪)

೧೨. ಸಿರಿ (ನಾ) ೧. ಸಂಪತ್ತು; ವೈಭವ; (೮-೮೫೪೭)

ಈ ಮೇಲೆ ಉದಾಹರಣೆ ನೀಡಿದ ಸಮಾನಾರ್ಥಕಗಳು ಹಲವು ವೈಶಿಷ್ಟ್ಯಗಳನ್ನು ಹೊಂದಿದ್ದು, ಅವುಗಳನ್ನು ಹೀಗೆ ಗುರುತಿಸಬಹುದು.

೧. ಈ ನಿಘಂಟಿನಲ್ಲಿ ಒಂದೇ ಅರ್ಥ ನೀಡುವ ಹಲವು ಪದಗಳಿದ್ದು, ವಾಕ್ಯ ರಚನೆಯ ಸಂದರ್ಭಕ್ಕೆ ತಕ್ಕಂತೆ ಇವುಗಳ ಬಳಕೆ ನಿಂತಿರುತ್ತದೆ.

೨. ಕನ್ನಡ ನಿಘಂಟಿನಲ್ಲಿ ದಾಖಲಾದ ಒಂದೇ ಅರ್ಥವಿರುವ ಸಮಾನಾರ್ಥಕ ಪದಗಳಿಂದ ಬೇರೆ ಬೇರೆ ಪದಗಳನ್ನು ಬೇಕೆನಿಸಿದಾಗ ಬಳಸಲು ಅನುಕೂಲವಾಗುತ್ತದೆ. ಇದರಿಂದ ಪದಬಳಕೆಯ ಶಕ್ತಿ ಹೆಚ್ಚುತ್ತದೆ. ಉದಾ : ವ್ಯಕ್ತಿ; ಮನುಷ್ಯ; ನರ; ಮನುಜ ಇತ್ಯಾದಿ

೩. ಇಲ್ಲಿ ನೀಡಿರುವ ಸಮಾನಾರ್ಥಕಗಳು ನಾಮಪದ, ಕ್ರಿಯಾಪದ, ಗುಣವಾಚಕ ಮೊದಲಾದ ವ್ಯಾಕರಣಾಂಶಗಳಿಗೆ ಸಂಬಂಧಿಸಿದ್ದು, ಅರ್ಥ ಖಚಿತತೆಗೆ ವಿಪುಲವಾದ ಪ್ರಯೋಗಗಳನ್ನು

ನೀಡಿರುವುದರಿಂದ ಒಂದೇ ಪದಕ್ಕಿರುವ ಸಮಾನ ಅರ್ಥಗಳನ್ನು ಯಾವ ಸಂದರ್ಭಗಳಲ್ಲಿ ಬಳಸಬಹುದು ಎನ್ನುವ ತಿಳಿವಳಿಕೆ ಬರುತ್ತದೆ.

೪. ಈ ನಿಘಂಟಿನಲ್ಲಿರುವ ಸಮಾನಾರ್ಥಕ ಪದಗಳು ಬಳಸುವ ಸಂದರ್ಭಕ್ಕೆ ಅನುಗುಣವಾಗಿ ಖಚಿತ ಅರ್ಥವನ್ನು ನೀಡುವುದರಿಂದ ಪದಗಳನ್ನು ಅಗತ್ಯಕ್ಕೆ ತಕ್ಕಂತೆ ಬಳಸಲು ಅನುಕೂಲವಾಗುತ್ತದೆ.

೫. ಭಾಷೆಯ ಬಳಕೆಯ ಬಗೆಗೆ ಖಚಿತತೆ ಉಂಟಾಗಲು ಸಮಾನಾರ್ಥಕ ಪದಗಳು ಪ್ರಮುಖವಾದ ವ್ಯಾಕರಣ ಘಟಕಗಳಾಗಿವೆ.

**೪.೩.೨.೨. ನಾನಾರ್ಥಕಗಳು**

ಭಾಷೆಯ ಪದರೂಪಗಳಲ್ಲಿ ನಾನಾರ್ಥಗಳಿಗೆ ವಿಶಿಷ್ಟ ಸ್ಥಾನವಿದೆ. ಒಂದು ಪದಕ್ಕೆ ಕ್ರಿಯಾಪದ, ನಾಮಪದ, ಗುಣವಾಚಕ ಮೊದಲಾದ ಭಾಷಿಕಾಂಶಗಳ ಹಿನ್ನೆಲೆಯಲ್ಲಿ ಹಲವು ಅರ್ಥಗಳಿರುತ್ತವೆ. ಇವುಗಳನ್ನೇ ನಾನಾರ್ಥಕಗಳು ಎಂದು ಕರೆಯಲಾಗಿದೆ. ಉದಾಹರಣೆಗೆ 'ಕರಿ' ಎನ್ನುವ ಪದವನ್ನು ಗಮನಿಸಿದಾಗ ನಾಮಪದದ ಅರ್ಥವಾಗಿ 'ಆನೆ', ಕ್ರಿಯಾಪದದ ಅರ್ಥವಾಗಿ 'ಕೂಗು', ಗುಣವಾಚಕದ ಅರ್ಥವಾಗಿ 'ಕಪ್ಪು ಬಣ್ಣ' ಎನ್ನುವ ವಿವಿಧ ಅರ್ಥಗಳು ಒಂದೇ ಪದಕ್ಕಿವೆ. ಇದು ಭಾಷೆಯ ಶಕ್ತಿಯಾಗಿದ್ದು, ಪ್ರತಿಯೊಂದು ಭಾಷೆಗಳಲ್ಲಿ ಬಳಕೆಯಾಗುವ ಕೆಲವು ಪದಗಳಿಗೆ ಬಗೆಬಗೆಯ ಅರ್ಥಗಳಿರುತ್ತವೆ. ಇವು ಸಮಾನಾರ್ಥ-ವಿರುದ್ಧಾರ್ಥಗಳಾಗಿರದೆ ನಾನಾ ಬಗೆಯ ಅರ್ಥವನ್ನು ಸ್ಫುರಿಸುವನಾನಾರ್ಥ ಪದಗಳಾಗಿರುತ್ತವೆ. ಕನ್ನಡ ಭಾಷೆಯಲ್ಲಿ ಹಲವು ನಾನಾರ್ಥಗಳನ್ನು ಕೊಡುವ ಸಾಕಷ್ಟು ಪದಗಳಿವೆ.

ಒಂದೇ ಪದವನ್ನು ಬೇರೆ ಬೇರೆಯದೇ ಆದ ಅರ್ಥಗಳಲ್ಲಿ ಬಳಸುತ್ತೇವೆ. ಉದಾಹರಣೆಗೆ: ಅಗ್ಗ ಎಂಬ ಪದಕ್ಕೆ ಮೂರು ಅರ್ಥಗಳಿವೆ. ೧. ಕಡಮೆ ಬೆಲೆ, ಇಳಿತಾಯದ ಬೆಲೆ, ೨. ಬೆಲೆ ೩. ತುದಿ (ಸಂ.೧, ಪು.೮೦-೮೧) ಎಂಬ ಎಂಬ ಅರ್ಥಗಳಿವೆ. ಈ ಎಲ್ಲ ಅರ್ಥಗಳು ನಾಮಪದಗಳಿಗೆ ಸೇರಿರುವುವು. ಭಾಷಾಜ್ಞಾನ ವೃದ್ಧಿಸಿಕೊಳ್ಳಲು ಇವು ಸಹಾಯಕವಾಗುತ್ತವೆ. ನಿತ್ಯ ಬಳಸುವ ಪದಗಳ ನಾನಾರ್ಥವನ್ನು ಅರಿತುಕೊಳ್ಳುವುದರಿಂದ ಭಾಷಾ ಕೌಶಲ ಮತ್ತು ಶಬ್ದ ಸಂಪತ್ತು ವೃದ್ಧಿಸುತ್ತದೆ. ಒಂದು ಶಬ್ದಕ್ಕೆ ವಿಶಿಷ್ಟ ಸಂದರ್ಭ, ಸನ್ನಿವೇಶಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ಅರ್ಥಗಳು ಹೊಮ್ಮುತ್ತವೆ. ಹೀಗಾಗಿ ಅನೇಕ ಸಲ ಒಂದು ಪದದ ನಿರ್ದಿಷ್ಟ ಅರ್ಥವನ್ನು ಸಂದರ್ಭ ವಿಶೇಷವನ್ನು ಗಮನಿಸಿಯೇ ಹೇಳಬೇಕಾಗುತ್ತದೆ. ಭಾಷಾ ಪರಿಣತಿ ಹಾಗೂ ಭಾಷೆಯ ತಿಳಿವಳಿಕೆಯನ್ನು ಈ ಪದಗಳು ಸಾಬೀತುಪಡಿಸುತ್ತವೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸೇರಿದಂತೆ ಎಲ್ಲ ನಿಘಂಟುಗಳು ಒಂದು ಪದವು ಬೇರೆ ಬೇರೆ ಅರ್ಥಗಳನ್ನು ಹೊಂದಿರುವ ಸಾಧ್ಯತೆಗಳನ್ನು ಗುರುತಿಸುವ ಕೆಲಸ ಮಾಡಿವೆ. ಅಂದರೆ ಪ್ರತಿ ಪದವು ಹೊಂದಿರುವ ನಾನಾರ್ಥಗಳನ್ನೂ ಪಟ್ಟಿ ಮಾಡುತ್ತವೆ. ಈ ನಿಘಂಟಿನಲ್ಲಿ ದಾಖಲಾದ ಹಲವು ನಾನಾರ್ಥಕಗಳ ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದಾಗಿದೆ.

೧. ಅಂಘ್ರಿ (ನಾ) ೧. ಕಾಲು; ಹೆಜ್ಜೆ
(ನಾ) ೨. ಮರದ ಬೇರು
(ನಾ) ೩. ಪದ್ಯದ ಒಂದು ಪಾದ [೧–೧೯]

೨. ಕಿಟ್ಟ (ನಾ) ೧. ಗೋಲಿಯಾಡುವುದಕ್ಕೆ ಬಳಸುವ ಗಟ್ಟಿಯಾದ ಗಜ್ಜುಗ
(ನಾ) ೨. ಕಬ್ಬಿಣ ಮೊದಲಾದ ಲೋಹಗಳ ಜಂಗು
(ನಾ) ೩. ಕೃಷ್ಣ [೨–೧೮೦೩]

೩. ಕಿರಿ (ಕ್ರಿ) ಬೋಳಿಸು; ಕೂದಲನ್ನು ತೆಗೆ; ಕ್ಷೌರ ಮಾಡು:
ಕಿರಿ (ಕ್ರಿ) ಹಲ್ಲು ಕಿಸಿ, –ತೆರೆ
ಕಿರಿ (ನಾ) ದಾರದ ಗಂಟು
ಕಿರಿ (ನಾ) ಹಂದಿ; ವರಾಹ: [೨–೧೮೧೪]

೩. ಗುಡಿ (ನಾ). ೧. ಮಂಡಲ; ವೃತ್ತ; ಸುತ್ತು:
೨. ಮೊತ್ತ; ಗುಂಪು; ಸಮೂಹ
(ನಾ) ೧. ಬೆಟ್ಟದ ತುದಿ, – ಶೃಂತ; (ಕಿ) ೨. ಧ್ವಜ; ಬಾವುಟ; ಪತಾಕೆ
(ನಾ). ೧. ಮನೆ ; ಕುಟೀರ; ಗುಡಾರ: ೨. ದೇವಾಲಯ; ದೇವಸ್ಥಾನ
೩. ವಿತಾನ; ಮಂಟಪ: ೪. ಕೆತ್ತನೆ ಕೆಲಸ; ಕುಶಲ ಕೈಗಾರಿಕೆ ೫. ಬಣ್ಣದ ಕೆಲಸ; ವರ್ಣ
(ನಾ) ಮುಖವಾಡ; ಮುಸುಕು. [೩–೨೫೩೪]

೪. ತೊಲೆ (ಕ್ರಿ). ತೊಲಗು; ದೂರ ಸರಿ
(ಕ್ರಿ) ೧. ತೂಗಾಡು; ಜೋಲಾಡು; ಒಲೆದಾಡು: [೪–೩೬೮೫]

೫. ನಿಗರ (ನಾ). ೧. ಮನೋಹರತೆ; ಚೆಲುವು:
(ನಾ) ೨. ಗುಂಪು; ಸಮೂಹ [೫–೪೫೫೧]

೬. ಪುಟ್ಟಿ (ನಾ). ೧. ತೆಂಗು, ತಾಳೆಗಳ ಗರಿ ಅಥವಾ ಬಿದಿರಿನಿಂದ ಹೆಣೆದು ಮಾಡಿದ ಗೂಡೆ, ಮಂಕರಿ ಮುಂತಾದವು. ೨. ಬಿದಿರಿನ ಬುಟ್ಟಿಯಾಕಾರದ ನಾವೆ.
ಪುಟ್ಟಿ (ನಾ). ೧. ಚಿಕ್ಕವಳು; ಚಿಕ್ಕವಯಸ್ಸಿನವಳು ೨. ಹೆಣ್ಣು ಮಗು
ಪುಟ್ಟಿ (ನಾ). ಒಂದು ಅಳತೆಯ ಪ್ರಮಾಣ

ಪುಟ್ಟಿ (ನಾ). (ವಿಶೇಷವಾಗಿ) ಜೇನಿನ ಗೂಡು

ಪುಟ್ಟಿ (ನಾ). ಬಟ್ಟೆ, ವಸ್ತ್ರ [೬-೫೬೬೩]

೭. ಭಾವ (ನಾ).೧. ಸೋದರಿಯ ಗಂಡ; ಅಕ್ಕ ಅಥವಾ ತಂಗಿಯ ಪತಿ

೨. ಗಂಡನ ಅಣ್ಣ

೩. ಸೋದರಮಾವನ ಮಗ

೪. ಹೆಂಡತಿಯ ಅಣ್ಣ

೫. ಸೋದರತ್ತೆಯ ಮಗ

೬. ಬಂಧುತ್ವವಿಲ್ಲದಿದ್ದರೂ ಆತ್ಮೀಯತೆಯನ್ನು ಸೂಚಿಸಲು ಬಳಸುವ ಶಬ್ದ

ಭಾವ (ನಾ).೧. ಇರುವಿಕೆ; ಇರುವುದು; ಅಸ್ತಿತ್ವ; ಸತ್ತೆ:

೨. ಆಗುವುದು; ಸಂಭವಿಸುವುದು; ಉಂಟಾಗುವಿಕೆ

೩. ಹುಟ್ಟು; ಜನ್ಮ

೪. ನಿಜಸ್ಥಿತಿ; ಸತ್ಯ

೫. ಪರಮಾತ್ಮ

೬. ಮನಸ್ಸು; ಅಂತರಂಗ; ಚಿತ್ತ

೭. ಪ್ರಾಣಿಗಳ ಸ್ವಭಾವ, –ಪ್ರಕೃತಿ; ಜೀವಗಳ ನೈಸರ್ಗಿಕ ಗೂನ,

೮. ಮನೋಧರ್ಮ; ಭಾವನೆ; ಚಿತ್ತವೃತ್ತಿ; ಸಂವೇದನೆ

೯. ಅಭಿಪ್ರಾಯ; ಆಶಯ; ಇಂಗಿತ

೧೦. ಕಣ್ಣಿಗೆ ಗೋಚರಿಸುವ ವಸ್ತು; ಪ್ರತ್ಯಕ್ಷ ವಿಷಯವಾಗುವ ಪದಾರ್ಥ

೧೧. ಸ್ವರೂಪ; ಚರ್ಯೆ; ತೋರಿಕೆ:

೧೨. ಆಂಗಿಕ ಚಲನೆ, –ಕ್ರಿಯೆ

೧೩. ಅರವತ್ತು ಸಂವತ್ಸರಗಳಲ್ಲಿ ಎಂಟನೆಯದು:

೧೪. [ವ್ಯಾಕ] ಕ್ರಿಯೆ ನಡೆಯುವುದರಿಂದ ಉಂಟಾಗುವ ಸ್ಥಿತಿ:

೧೫. ಭಾವನಾಮ

೧೬. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ

೧೭. [ನಾಟ್ಯ] ಸೂತ್ರಧಾರನನ್ನು ಸಂಬೋಧಿಸುವಾಗ ಪ್ರಯೋಗಿಸುವ ಶಬ್ದ:

೧೮. [ಕಾವ್ಯಮೀ] ಶೃಂಗಾರ ಮೊದಲಾದ ರಸಗಳನ್ನುಂಟುಮಾಡುವ ರತಿ, ಶೋಕ ಮೊದಲಾದ ಚಿತ್ತವೃತ್ತಿ;

೧೯. (ಪ್ರಾಚೀನರ ಮತದಂತೆ) ಅರ್ಥಾಲಂಕಾರಗಳಲ್ಲಿ ಒಂದು; ಒಬ್ಬರು ಹೇಳಿದ ಮಾತಿಗೆ ಸಂದರ್ಭ ಪರ್ಯಾಲೋಚನೆಯಿಂದ ಬೇರೊಂದರ್ಥವು ತೋರುವುದು

೨೦. [ಜ್ಯೋತಿ] ಜಾತಕನಿಗೆ ಸಂಭವಿಸುವ ಫಲವಿಚಾರವನ್ನು ತಿಳಿಸುವ ಸ್ಥಾನ:

೨೧. [ಜೈನ] ಜೀವನ ಪರಿಣಾಮ; ಔಪಶಾಮಿಕ, ಕ್ಷಾಮಿಕ, ಕ್ಷಯೋಪಶಮಿಕ, ಔದಯಿಕ ಮತ್ತು ಪಾರಿಣಾಮಿಕ ಎಂಬ ಮುಖ್ಯವಾದ ಐದು ಭೇದಗಳುಳ್ಳದು [೭-೬೭೩೬]

೮. ವಸ (ನಾ). ೧. ಅಧೀನವಾದುದು; ಅಂಕೆಗೆ ಸಿಕ್ಕಿದುದು:

(ನಾ). ಬಟ್ಟೆ; ವಸ್ತ್ರ [೮-೭೮೧೦]

ಈ ಮೇಲೆ ಉದಾಹರಣೆ ನೀಡಿದ ನಾನಾರ್ಥಕಗಳು ಹಲವು ವೈಶಿಷ್ಟ್ಯಗಳನ್ನು ಹೊಂದಿದ್ದು, ಅವುಗಳನ್ನು ಹೀಗೆ ಗುರುತಿಸಬಹುದು.

೧. ಈ ನಿಘಂಟಿನಲ್ಲಿರುವ ಪದಗಳಿಗೆ ಹಲವು ಅರ್ಥಗಳಿದ್ದಾಗ, ಆ ಶಬ್ದದ ವರ್ಗವನ್ನು ಅನುಸರಿಸಿ ಸುಲಭವಾಗಿ ಪದದ ನಾನಾರ್ಥಕಗಳನ್ನು ಗಮನಿಸಬಹುದು.

೨. ಪದಗಳಿಗಿರುವ ನಾನಾರ್ಥಗಳ ತಿಳಿವಳಿಕೆಯಿಂದ ನಮ್ಮ ಭಾಷಾ ಪರಿಜ್ಞಾನ ಹೆಚ್ಚುತ್ತದೆ. ಪದಗಳನ್ನು ಬಳಸುವಾಗ ಅರ್ಥ ಕೆಡದಂತೆ, ಆಭಾಸವಾಗದಂತೆ ಎಚ್ಚರಿಕೆಯಿಂದ ಬಳಸಲು ಅವಕಾಶವಾಗುತ್ತದೆ.

೩. ಈ ನಿಘಂಟಿನಲ್ಲಿ ಬೇರೆ ಬೇರೆ ಕ್ಷೇತ್ರಕ್ಕೆ ಸಂಬಂಧಿಸಿದ ನಾನಾರ್ಥಗಳು ಪದಗಳ ಅರ್ಥವನ್ನು ಬದಲಾಯಿಸುವ ಸಾಮರ್ಥ್ಯವನ್ನು ಹೊಂದಿವೆ.

೪. ವ್ಯಾಕರಣದ ಎಲ್ಲಾ ಸಾಧ್ಯತೆಗಳ ಹಿನ್ನೆಲೆಯಲ್ಲಿ ಒಂದು ಪದಕ್ಕೆ ನಾನಾರ್ಥಗಳನ್ನು ನೀಡಲಾಗಿದೆ. ಉದಾ:- ಕನ್ನಡ ನಿಘಂಟಿನ ಮೊದಲ ಸಂಪುಟದ ಮೊದಲ ಅಕ್ಷರದ ವಿವಿಧ ಅರ್ಥಗಳನ್ನು ನೀಡಿರುವುದನ್ನು ಕಾಣಬಹುದು.

ಅ೧ (ನಾ). ಕನ್ನಡ ವರ್ಣಮಾಲೆಯ ಮೊದಲನೆಯ ವರ್ಣ; ಅಕಾರ

ಅ೨ (ಅ). ಸಂಸ್ಕೃತದ 'ಕಿಲ' ಎಂಬುದರ ಅರ್ಥದಲ್ಲಿ ಬರುವ ಭಾವಸೂಚಕ ಅವ್ಯಯ.

ಅ$_{೩}$ (ಅ). ವಿಧಿರೂಪದ ಧಾತುವಿನ ಮೇಲೆ ಅನುನಯ ಸೂಚನೆಗಾಗಿ ಸೇರುವ ಅವ್ಯಯ:

ಅ$_{೪}$ (ಅ). ಪ್ರಶ್ನಾರ್ಥದಲ್ಲಿ ಕ್ರಿಯಾರೂಪದ ಕೊನೆಗೆ ಹತ್ತುವ ಅವ್ಯಯ:

ಅ$_{೫}$ (ಅ). ನೀನ್, ಆನ್, ತಾನ್ – ಇವುಗಳ ಷಷ್ಠೀ ವಿಭಕ್ತಿಯ ರೂಪಗಳ ಮೇಲೆ ಅವಧಾರಣಾರ್ಥದಲ್ಲಿ ಹತ್ತುವ ಅವ್ಯಯ:

ಅ$_{೬}$ (ಪ್ರ). ಕೆಲವು ಧಾತುಗಳಿಂದ ಭಾವನಾಮ ಅನ್ವರ್ಥನಾಮ ಮುಂತಾದವನ್ನು ಸಾಧಿಸಲು ಹತ್ತುವ ಪ್ರತ್ಯಯ:

ಅ$_{೭}$ (ಪ್ರ). ಕೆಲವು ಬಹುವ್ರೀಹಿ ಸಮಾಸಗಳ ಅಂತ್ಯದಲ್ಲಿ ಹತ್ತುವ ಪ್ರತ್ಯಯ:

ಅ$_{೮}$ (ನಾ). ವಿಷ್ಣು. [ಸಂ.]

ಹೀಗೆ ಒಂದು ಅಕ್ಷರದ ನಾನಾರ್ಥಕಗಳ ಜೊತೆ ಪದಗಳ ನಾನರ್ಥಕಗಳು ಈ ನಿಘಂಟಿನಲ್ಲಿರುವುದು ಇದರ ವೈಶಿಷ್ಟ್ಯವಾಗಿದೆ.

**೪.೩.೨.೩. ನಿಷೇಧಾರ್ಥಕಗಳು**

ಭಾಷೆಯಲ್ಲಿರುವ ಪದಗಳಿಗೆ ಮತ್ತೊಂದು ಪದಗಳನ್ನು, ಉಪಸರ್ಗಗಳನ್ನು ಸೇರಿಸಿ ಹೊಸಪದಗಳನ್ನು ಸೃಷ್ಟಿಸುವ ವಿಧಾನವಿದೆ. ಇದರಿಂದ ಹಲವಾರು ಹೊಸ ಪದಗಳು ಸೃಷ್ಟಿಯಾಗಿ ಭಾಷೆ ಬೆಳೆಯುತ್ತದೆ. ನಿಷೇಧಾರ್ಥಕ ಪದಗಳು ಈ ವಿಧಾನದಲ್ಲಿ ರಚನೆಯಾಗುತ್ತವೆ. 'ನಿಷೇಧ' ಇದೊಂದು ನಾಮಪದವಾಗಿದ್ದು, ನಿರಾಕರಣೆ; ಅಲ್ಲಗಳೆಯುವಿಕೆ; ಇಲ್ಲವೆಂದು ಹೇಳುವಿಕೆ ಎನ್ನುವ ಅರ್ಥಗಳಿವೆ. ಈಗಾಗಲೇ ಭಾಷೆಯಲ್ಲಿರುವ ಇರುವ ಪದಗಳಿಗೆ ಉಪಸರ್ಗಗಳನ್ನೋ, ಪದರೂಪಗಳನ್ನೋ ಬಳಸಿ ಮೂಲ ಪದಕ್ಕೆ ವಿರುದ್ಧ ಅರ್ಥವನ್ನು ಉಂಟುಮಾಡುವುದು ನಿಷೇಧ ಪದಗಳ ಲಕ್ಷಣವಾಗಿದೆ.

ಭಾಷೆಯಲ್ಲಿರುವ ಪದಕ್ಕೆ ಕನ್ನಡ ಅಥವಾ ಇತರೆ ಭಾಷೆಗಳ ಉಪಸರ್ಗಗಳನ್ನು, ಪದಗಳನ್ನು ಸೇರಿಸಿ ವಿರೋಧಾರ್ಥ ಬರುವಂತೆ ಹೊಸ ಪದಗಳನ್ನು ರಚಿಸುವ ಭಾಷಿಕಾಂಶಗಳಿಗೆ ನಿಷೇಧಾರ್ಥಕಗಳೆಂದು ಕರೆಯಬಹುದು.

"ಒಂದು ಪದಕ್ಕೆ ನಿಷೇಧ ತರುವುದೆಂದರೆ ಮೂಲಾರ್ಥಕ್ಕೆ ವೈರುದ್ಧವನ್ನೋ, ವೈಷಮ್ಯವನ್ನೇ ತರುವುದು. ಸಂಸ್ಕೃತದಲ್ಲಿ ಬಳಕೆಯಲ್ಲಿರುವ ನಿಷೇಧ ಉಪಸರ್ಗಗಳು ಸಾದೃಶ್ಯ, ಅಭಾವ, ಅನ್ಯತ್ವ, ಅಲ್ಪತ್ವ, ಅಪ್ರಾಶಸ್ತ್ಯ, ವಿರೋಧ ಎಂಬ ಆರು ಅರ್ಥಗಳಲ್ಲಿ ಬಳಕೆಯಲ್ಲಿವೆಯೆಂದು ಹೇಳಲಾಗಿದೆ".[೪]

"ಪ್ರತಿಯೊಂದು ಭಾಷೆಯೂ ತನ್ನದೇ ಆದ ನಿಷೇಧ ರೂಪಗಳನ್ನು ಹೊಂದಿರುತ್ತವೆ. ಕನ್ನಡದಲ್ಲಿ ನಿಷೇಧದ ಬಗ್ಗೆ ಹೇಳುವಾಗ ವಾಕ್ಯ ನಿಷೇಧ, ಪದ ನಿಷೇಧ ಎಂದು ಎರಡು ಬಗೆಯನ್ನು ಮಾಡಿಕೊಳ್ಳಬಹುದು. 'ಇಲ್ಲ', 'ಅಲ್ಲ', 'ಬಾರದು', 'ಕೂಡದು', '–ಅದೆ', '–ಅದ' ಇತ್ಯಾದಿಗಳಲ್ಲಿ ಒಂದು ನಿಷೇಧವನ್ನು ಸೂಚಿಸುತ್ತವೆ. ಇವುಗಳಲ್ಲಿ 'ಇಲ್ಲ', 'ಅಲ್ಲ', 'ಬಾರದು',

'ಕೂಡದು' ಮುಕ್ತರೂಪವಾಗಿ ಸ್ವತಂತ್ರವಾಗಿಯೂ '-ಅದೆ', '-ಅದ' ಬದ್ಧರೂಪಗಳಾಗಿಯೂ ಬರುತ್ತವೆ. ಕನ್ನಡದಲ್ಲಿ ಬಹುತೇಕ ಸಂಸ್ಕೃತದ ಪದಗಳೇ ಹೆಚ್ಚಿರುವುದರಿಂದ ಸಂಸ್ಕೃತದ ನಿಷೇಧ ಪೂರ್ವ ಪ್ರತ್ಯಯಗಳೇ (ಉಪಸರ್ಗ) ಬಳಕೆಯಲ್ಲಿವೆ. ಅನ್, ನಿ, ನಿರ್, ನಿಷ್ ಇತ್ಯಾದಿ. ಪರ್ಸೋ-ಅರೇಬಿಕ್‌ನಿಂದ ಬಂದಿರುವ 'ಬೇ', ಉಪಸರ್ಗದ ಬಳಕೆಯೂ ಇದೆ".[೫]

"ನಿಷೇಧಪದಗಳು ಪದರಚನೆಯ ನೆಲೆಯಲ್ಲಿ ರೂಪುಗೊಳ್ಳುತ್ತವೆ. ಅವುಗಳಲ್ಲಿ ಒಂದು ಮೂಲಪದವಾಗಿದ್ದು ಇನ್ನೊಂದನ್ನು ಗೊತ್ತುಪಡಿಸಿದ ನಿಯಮದ ಮೂಲಕ ನಾವು ರಚಿಸಿಕೊಳ್ಳುತ್ತೇವೆ. ಮೇಲೆ ನೀಡಿದ ಪದಜೋಡಿಗಳನ್ನು ಕೊಂಚ ಎಚ್ಚರಿಕೆಯಿಂದ ಗಮನಿಸಿದರೆ ಹೀಗೆ ನಿಷೇಧ ಪದಗಳನ್ನು ರಚಿಸುವಾಗ ಎರಡು ವಿಧಾನಗಳನ್ನು ನಾವು ಅನುಸರಿಸುವುದು ಗೊತ್ತಾಗುತ್ತದೆ. ಒಂದು ವಿಧಾನದಲ್ಲಿ ಮೂಲ ವಸ್ತು ಅಥವಾ ಗುಣ 'ಇಲ್ಲದಿರುವ' ಸ್ಥಿತಿಯನ್ನು ಸೂಚಿಸಲು ನಿಷೇಧ ರೂಪವನ್ನು ರಚಿಸುತ್ತೇವೆ. ಉದಾಹರಣೆಗೆ ಈ ಮುಂದಿನ ಪದಗಳ ಜೋಡಿಯನ್ನು ಗಮನಿಸಿ. ಚಿಂತೆ-ನಿಶ್ಚಿಂತೆ, ಫಲ-ನಿಷ್ಫಲ, ಜಲ-ನಿರ್ಜಲ, ಚಲ-ನಿಶ್ಚಲ, ಶೇಷ-ನಿಶ್ಶೇಷ ಇತ್ಯಾದಿ. ಇವುಗಳಲ್ಲಿ ಮೊದಲ ಪದ ಸೂಚಿಸುವ ಗುಣ ಇಲ್ಲವೇ ಸ್ಥಿತಿಯು 'ಇಲ್ಲದಿರುವುದನ್ನು, ಎರಡನೆಯ ಪದ ಸೂಚಿಸುತ್ತದೆ. ಇನ್ನೊಂದು ನಿಷೇಧ ರಚನೆಯ ಬಗೆಯಲ್ಲಿ ಒಂದು ಪದ ಸೂಚಿಸುವ ಗುಣ ಇಲ್ಲವೇ ಸ್ಥಿತಿಯು 'ಅಲ್ಲದಿರುವುದನ್ನು' ನಿಷೇಧ ಪದದ ಮೂಲಕ ಸೂಚಿಸುತ್ತೇವೆ. ಈ ಮುಂದಿನ ಪದಜೋಡಿಗಳನ್ನು ಗಮನಿಸಿ. ಹಿಂಸೆ-ಅಹಿಂಸೆ, ಹಿತ-ಅಹಿತ, ಕಾಲ-ಅಕಾಲ, ವೇಳೆ-ಅವೇಳೆ, ಉದಾರ-ಅನುದಾರ, ಧೈರ್ಯ-ಅಧೈರ್ಯ, ನೀತಿ-ಅನೀತಿ ಇತ್ಯಾದಿ. ಇಲ್ಲೆಲ್ಲ ಮೊದಲ ಪದದಲ್ಲಿ ಸೂಚಿತವಾಗುವುದನ್ನು ಎರಡನೆಯ ಪದ ಅಲ್ಲಗಳೆಯುತ್ತದೆ. ಕನ್ನಡದ 'ಇಲ್ಲ' ಮತ್ತು 'ಅಲ್ಲ' ಎಂಬ ಪದಗಳ ಕೆಲಸವನ್ನು ಮೇಲೆ ಹೇಳಿದ ನಿಷೇಧ ರೂಪಗಳನ್ನು ಮಾಡುತ್ತಿವೆ. ಹಾಗೆ ನೋಡಿದರೆ ಹೀಗೆ ಪದರಚನೆಯ ಮೂಲಕ ನಿಷೇಧ ರೂಪಗಳನ್ನು ರಚಿಸುವ ವಿಧಾನ ಕನ್ನಡದಲ್ಲಿ ಇಲ್ಲ. ನಾವು ಈ ಪದ ಜೋಡಿಗಳನ್ನು ನೇರವಾಗಿ ಸಂಸ್ಕೃತದಿಂದ ಪಡೆದುಕೊಂಡಿದ್ದೇವೆ. ಕನ್ನಡದ್ದೇ ಆದ ನಿಷೇಧ ರೂಪರಚನೆಯ ನಿಯಮಗಳು ಇಲ್ಲ"[೬] ಎಂದು ಭಾಷಾವಿಜ್ಞಾನಿಗಳಾದ ಕೆ.ವಿ.ನಾರಾಯಣರವರು ನಿಷೇಧಾರ್ಥಕ ಪದಗಳ ರಚನಾ ಸ್ವರೂಪವನ್ನು ಕುರಿತು ವಿವರಿಸಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಅ, ನ, ನಾ, ನಿ, ಬೇ ಎನ್ನುವ ಉಪಸರ್ಗ ನಿಷೇಧ ರೂಪಗಳು, ಗೈರು, ವಿನಾ, ಇತರ, ರಹಿತ, ಶೂನ್ಯ, ಹೀನ ಎನ್ನುವ ಪದನಿಷೇಧ ರೂಪಗಳಿಂದ ಆದ ನಿಷೇಧಾರ್ಥಕ ಪದಗಳನ್ನು ದಾಖಲಿಸಲಾಗಿದೆ.

೧. ಅಕಂಟಕ (ಗು).೧. ಮುಳ್ಳಿಲ್ಲದ. ೨. ವಿಘ್ನವಿಲ್ಲದ; ಶತ್ರುಗಳಿಲ್ಲದ; ನಿಷ್ಕಂಟಕ. (ಸಂ) [೧-೩೨]

೨. ಅಕ್ಷೀಣ (ಗು). ೧. ಕ್ಷೀಣವಾಗದ; ಬಡವಾಗದ. ೨. ನಾಶವಿಲ್ಲದ; ಶಾಶ್ವತವಾದ [೧-೬೮]

೩. ಗೈರುಹಾಜರಿ (ನಾ). ಹಾಜರಾಗದಿರುವಿಕೆ; ಅನುಪಸ್ಥಿತಿ: [೩-೨೬೦೪]

೪. ನಗಣ್ಯ (ನಾ). ೧. ಗಣನೆಗೆ ಬಾರದುದು; ಗಣನೆಗೆ ಯೋಗ್ಯವಲ್ಲದುದು [೪-೪೨೯೬]

೫. ನಾಪತ್ತೆ (ನಾ). ಕಾಣೆಯಾಗುವುದು; ಕಳೆದುಹೋಗಿ ಕಂಡುಹಿಡಿಯಲು ಆಗದಿರುವುದು [೪-೪೪೪೮]

೬. ನಿರಪೇಕ್ಷ (ಗು). ೧. ಅಪೇಕ್ಷೆಯಿಲ್ಲದ; ಅನ್ಯ ಸಹಾಯ ಬೇಕಿಲ್ಲದ; ಸ್ವತಂತ್ರವಾದ: [೫-೪೬೪೭]

೭. ನಿಷ್ಪ್ರಯೋಜಕ (ನಾ). ೧. ಉಪಯೋಗಕ್ಕೆ ಬಾರದುದು; ಅಪ್ರಯೋಜಕವಾದುದು[೫-೪೭೬೩]

೮. ಬೇಜವಾಬುದಾರಿ, ಬೇಜವಾಬ್ದಾರಿ (ಗು). ೧. ಜವಾಬ್ದಾರಿ ಇಲ್ಲದ; ಹೊಣೆಗೇಡಿತನದ: [೭-೬೬೨೭]

ಈ ನಿಘಂಟಿನಲ್ಲಿ ದಾಖಲಾದ ನಿಷೇಧಾರ್ಥಕ ಪದಗಳ ವೈಶಿಷ್ಟ್ಯಗಳನ್ನು ಕೆಳಕಂಡಂತೆ ಗುರುತಿಸಬಹುದು.

೧. ನಿಷೇಧಾರ್ಥಕ ರೂಪಗಳು ವೈರುಧ್ಯ ಅರ್ಥವನ್ನು ಹೊಂದಿರುತ್ತವೆ.

೨. ಈ ನಿಘಂಟಿನಲ್ಲಿ ಉಪಸರ್ಗ ಮತ್ತು ಪದಗಳಿಂದ ಈ ಎರಡು ರೂಪಗಳಿಂದ ನಿಷೇಧಾರ್ಥಕ ಪದಗಳು ರಚನೆಯಾಗಿವೆ.

೩. ಒಂದು ನಿಷೇಧ ಪದಕ್ಕೆ ಹಲವು ಅರ್ಥಸಾಧ್ಯತೆಗಳನ್ನು ಇಲ್ಲಿ ನೀಡಲಾಗಿದೆ.

೪. ಪರ್ಸೋ-ಅರೇಬಿಕ್ ಮೂಲದ 'ಬೇ' ಎನ್ನುವ ಉಪಸರ್ಗವೂ ಬಳಕೆಯಾಗಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

**೪.೩.೩. ನುಡಿಗಟ್ಟುಗಳು**

ಭಾಷೆಯ ಶ್ರೀಮಂತಿಕೆಯು ಜನಪದ ಪದಸಂಪತ್ತು, ಗಾದೆಗಳು, ನುಡಿಗಟ್ಟುಗಳು ಮೊದಲಾದ ಘಟಕಗಳ ಮೇಲೆ ನಿಂತಿದೆ. ಇವುಗಳಲ್ಲಿ ಒಂದಾದ ನುಡಿಗಟ್ಟುಗಳು ಭಾಷೆಯ ವಿಶಿಷ್ಟವಾದ ಭಾವಾಭಿವ್ಯಕ್ತಿಯ ಬಗೆಗಳಾಗಿದ್ದು, ಒಂದು ಭಾಷೆಯ ಜೀವಂತಿಕೆಯನ್ನು ತೋರಿಸುವ ಭಾಷಿಕ ಘಟಕಗಳಾಗಿವೆ. ಇವು ಭಾಷೆಗೆ ಕಸುವನ್ನು ತುಂಬಿ ನಾವು ಬಳಸುವ ಭಾಷೆಯ ಬಂಧ, ಸೊಗಸು ಹೆಚ್ಚಾಗುವಂತೆ ಮಾಡುತ್ತವೆ. ವಿಶೇಷಾರ್ಥದ ಜೊತೆಗೆ ನಮ್ಮ ಮಾತಿನ ಅರ್ಥವ್ಯಾಪ್ತಿಯನ್ನು ವಿಸ್ತರಿಸುವ ಶಕ್ತಿ ನುಡಿಗಟ್ಟುಗಳಿಗಿದೆ. ಯಾವುದೇ ಜೀವಂತ ಭಾಷೆಗಳಲ್ಲೂ ಇವು ಸಮೃದ್ಧವಾಗಿ ವ್ಯಾಪಿಸಿಕೊಂಡಿರುವುದನ್ನು ಗಮನಿಸಬಹುದು.

ಮಾತಿನಲ್ಲಿ ಹಾಸ್ಯ, ವ್ಯಂಗ್ಯಗಳನ್ನು ತೋರ್ಪಡಿಸುವುದು, ನೇರವಾಗಿ ಹೇಳಲಾರದೆ ಬೇರೆ ಬೇರೆ ವಿಧಾನದಿಂದ, ಬುದ್ಧಿವಂತಿಕೆಯಿಂದ ಹೊಸೆಯುವ ವಿಶಿಷ್ಟ ರೀತಿಯ ಪದಪ್ರಯೋಗಗಳೇ ನುಡಿಗಟ್ಟುಗಳು. ಜನರು ಮಾತನಾಡುವಾಗ ಅಭಿಪ್ರಾಯ ಅನಿಸಿಕೆಗಳನ್ನು ಅಭಿವ್ಯಕ್ತಿಸಲು ಇವುಗಳನ್ನು ಬಳಸುತ್ತಾರೆ. ನುಡಿಗಟ್ಟುಗಳು ವಿಶೇಷಾರ್ಥವನ್ನು ಕೊಡುವ, ಅರ್ಥವ್ಯಾಪ್ತಿಯನ್ನು ವಿಸ್ತರಿಸುವ,

ವಿಶೇಷ ಬಗೆಯ ಪದ ಸಮುಚ್ಚಯಗಳಾಗಿವೆ. ಇವು ಭಾಷೆ ಮತ್ತು ಅರ್ಥವನ್ನು ಹಗುರವಾಗಿ ಮಾತನಾಡದೇ, ಕಾಲವನ್ನು ವ್ಯಯಮಾಡದೇ ನಮ್ಮ ಪೂರ್ವಜರ ಜೀವಾನುಭವಗಳನ್ನು ಮತ್ತು ವಿಶಿಷ್ಟ ಅರ್ಥವನ್ನು ಒಂದೇ ನುಡಿಯಲ್ಲಿ ಸಮಸ್ತವನ್ನು ಕಟ್ಟಿ ಹೇಳುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ನುಡಿಗಟ್ಟುಗಳು ಹೇರಳವಾಗಿ ಬಳಕೆಯಾಗಿರುವುದನ್ನು ಗುರುತಿಸಲಾಗಿದೆ. ಪ್ರಧಾನ ಪದದ ಜೊತೆ, ಅದಕ್ಕೆ ಸಂಬಂಧಪಟ್ಟ ನುಡಿಗಟ್ಟುಗಳನ್ನೆಲ್ಲ ಅಲ್ಲಿ ವ್ಯವಸ್ಥಿತವಾಗಿ ಜೋಡಿಸಲಾಗಿದೆ. ಒಟ್ಟಾರೆಯಾಗಿ ಕನ್ನಡ ನಿಘಂಟಿನಲ್ಲಿ ನುಡಿಗಟ್ಟುಗಳು ವಿಶೇಷವಾಗಿ ದೊರಕುತ್ತವೆ. ವಿಭಿನ್ನಾರ್ಥಗಳನ್ನು ಹೊಂದಿರುವ ಈ ನುಡಿಗಟ್ಟುಗಳ ರಚನಾ ವೈಖರಿ ಅವುಗಳನ್ನೆಲ್ಲ ಈ ನಿಘಂಟಿನಲ್ಲಿ ದಾಖಲಿಸಿದ ರೀತಿ ಬೆರಗುಗೊಳಿಸುತ್ತದೆ.

ನುಡಿಗಟ್ಟು ಎಂಬ ಪದಕ್ಕೆ ಸಾಮಾನ್ಯವಾಗಿ Idiom ಎಂಬ ಪದವನ್ನು ಹೇಳಲಾಗುತ್ತದೆ. ಇದು ಫ್ರೆಂಚ್ ಭಾಷೆಯಲ್ಲಿ Idiome ಎಂಬುದಾಗಿದ್ದು, ಇದಕ್ಕೆ an Idiom or proper form of speech ಎಂಬ ಅರ್ಥವಿದೆ.

ನುಡಿಗಟ್ಟುಗಳು ಮತ್ತು ಪಡೆನುಡಿಗಳು ಎರಡೂ ಒಂದೇ ಅಥವಾ ಬೇರೆ ಬೇರೆಯವೇ ಎಂಬ ಭಿನ್ನಾಭಿಪ್ರಾಯಗಳಿವೆ. ಕನ್ನಡ ರತ್ನಕೋಶ (ಪು.೧೫೩)ದಲ್ಲಿ ನುಡಿಗಟ್ಟು = ವಿಶೇಷಾರ್ಥವುಳ್ಳ ಪದಪುಂಜ – ಎಂದು ಹೇಳಿದೆ. ಪಡೆನುಡಿ = ಅಲಂಕಾರಿಕ ಅರ್ಥವನ್ನು ನೀಡುವ ನುಡಿಗಟ್ಟು – ಎನ್ನಲಾಗಿದೆ. ಎರಡೂ ಭಿನ್ನವಲ್ಲ ಎಂಬರ್ಥವನ್ನು ಮೇಲಿನ ವಿವರಣೆಯಲ್ಲಿ ಕಾಣಬಹುದು.

ನುಡಿ + ಕಟ್ಟು = ನುಡಿಗಟ್ಟು = ನುಡಿಗಳ ಕಂತೆ. ಪಡೆನುಡಿ > ನುಡಿಯ ನಡೆ = ನುಡಿಗಳ ಸಮೂಹ – ಎರಡರ ಅರ್ಥವೂ ಅಭಿನ್ನವಾಗಿದೆ. 'ಅವಳಿ ಪಡೆನುಡಿ ಕೋಶ'ದ ಸಂಪಾದಕರು ನುಡಿಗಟ್ಟು–ಪಡೆನುಡಿಗಳ ವಿಷಯವನ್ನು ಕುರಿತು "ಪಡೆನುಡಿ ಎಂಬುದು ನುಡಿಗಟ್ಟಿಗೆ ಸಮಾನಾರ್ಥಕವಾದುದು. ಎರಡು, ಮೂರು, ನಾಲ್ಕು ಅಥವಾ ಐದು ನುಡಿಗಳು ಒಟ್ಟುಗೂಡಿ ಒಂದು ನುಡಿಗಟ್ಟಾಗುತ್ತದೆ. ಇಂತಹ ನುಡಿಗಟ್ಟುಗಳಿಗೆ ಅನುಗುಣವಾಗಿ ಬರುವ ಲಾಕ್ಷಣಿಕ ಅಥವಾ ಅಲಂಕಾರಿಕ ಅರ್ಥ ಕೊಡುವ ಸಮಸ್ತಪದ–ಸಮುಚ್ಚಯಗಳನ್ನು ಪಡೆನುಡಿಗಳೆನ್ನಬಹುದು" ಎಂದಿದ್ದಾರೆ.

ಉದಾಹರಣೆಗೆ: 'ಆಕಾಶ ಪಾತಾಳ ಒಂದು ಮಾಡು' ಎಂದರೆ ಆಕಾಶ ಪಾತಾಳಗಳನ್ನು ಒಟ್ಟಿಗೆ ಸೇರಿಸು ಎಂಬುದು ಅರ್ಥವಲ್ಲ. ಅಸಾಧ್ಯವಾದ ಒಂದು ಕಾರ್ಯದ ಸೂಚ್ಯಾರ್ಥವಾಗಿ 'ಶಕ್ತಿಮೀರಿ ಪ್ರಯತ್ನಿಸು' ಎಂಬ ಅಲಂಕಾರಿಕ ಅರ್ಥವನ್ನು ಈ ಮಾತು ಬಿಂಬಿಸುತ್ತದೆ. ಹಲವು ಪದಗಳು ಒಟ್ಟು ಸೇರಿ ನುಡಿಗಟ್ಟುಗಳಾಗಿ ಲಾಕ್ಷಣಿಕ ಅಥವಾ ಅಲಂಕಾರಿಕ ಅರ್ಥಗಳನ್ನು ನೀಡುತ್ತವೆಯಾದರೂ ಕೆಲವು ವೇಳೆ ಒಂದೊಂದೇ ಪದವೂ ಈ ಕಾರ್ಯವನ್ನು ನಿರ್ವಹಿಸುತ್ತವೆ.

ಉದಾಹರಣೆಗೆ:

ಗಾಂಧಿ = ನಿರಾಡಂಬರ ವ್ಯಕ್ತಿ (ಅವನೊಬ್ಬ ಗಾಂಧಿ ಕಣ್ರೀ...)

ಗೂಳಿ = ಚೆನ್ನಾಗಿ ತಿಂದು ಕೊಬ್ಬಿರುವ ವ್ಯಕ್ತಿ (ಒಳ್ಳೇ ಗೂಳಿ ತರಹ ಇದ್ದಾನೆ)

ಛತ್ರಿ = ಕಿಲಾಡಿ (ನೀನು ಬಿಡು ಮಹಾ ಛತ್ರಿ)

ತೋಳ = ಹೊಟ್ಟೆಬಾಕ (ತೋಳದ ಹಾಗೆ ತಿನ್ನುವುದು)

ನರಿ = ಕುಟಿಲವ್ಯಕ್ತಿ (ನೀನು ನರಿ ಇದ್ದ ಹಾಗೆ)

ಇಲ್ಲಿ ನುಡಿಗಟ್ಟುಗಳ ಅರ್ಥ ವಿಶೇಷತೆಯನ್ನು ಗ್ರಹಿಸುವುದು ಅತಿಮುಖ್ಯ. ನುಡಿಗಟ್ಟುಗಳು ಪ್ರಯೋಗಗೊಂಡಿರುವ ಸಂದರ್ಭಕ್ಕೆ ತಕ್ಕಂತೆ ಅರ್ಥಗಳಲ್ಲೂ ವ್ಯತ್ಯಾಸವುಂಟಾಗುವುದನ್ನು ಗಮನದಲ್ಲಿಸಿಕೊಳ್ಳಬೇಕು.

ಉದಾಹರಣೆಗೆ: 'ತಲೆಬಾಗು' ಎಂಬುದಕ್ಕೆ ಶರಣಾಗು, ಒಪ್ಪು ಎಂಬ ಭಿನ್ನ ಅರ್ಥಗಳಿವೆ.

ದೇವರಿಗೆ ತಲೆಬಾಗುತ್ತೇವೆ. (ಶರಣಾಗು)

ಗುರುಗಳ ಮಾತಿಗೆ ತಲೆಬಾಗಿದೆವು (ಒಪ್ಪಿಗೆ ಸೂಚಿಸು)

ಕನ್ನಡ ನಿಘಂಟಿನಲ್ಲಿ ದಾಖಲಾದ ವೈವಿಧ್ಯಮಯವಾದ, ಅರ್ಥವಿಸ್ತಾರವನ್ನು ಹೊಂದಿರುವ 'ನುಡಿಗಟ್ಟು'ಗಳ ಮಾಹಿತಿಯನ್ನು ಪ್ರಾತಿನಿಧಿಕವಾಗಿ ಕೊಡಲಾಗಿದೆ.

೧. ಅರ್ಧಚಂದ್ರಪ್ರಯೋಗ ಮಾಡು = ಕುತ್ತಿಗೆ ಹಿಡಿದು ಹೊರಗೆ ನೂಕು. [ಅರ್ಧ+ಚಂದ್ರ}

೨. ಅಲಗಣಸಾಗು = ಮೀರು, ಸ್ಪರ್ಧಿಸು

೩. ಆಟಂದಲೆ = ಆಕ್ರಮಿಸಿ ಹಿಂಸಿಸು ; ಮೇಲೆಬಿದ್ದು ಪೀಡಿಸು.

೪. ಈಡಾಗು = ಸಮನಾಗು; ಸಾಕಾಗು; ಸಾಲು.

೫. ಈಡುಮಾಡು = ಸರಿಹೊಂದಿಸು; ಪೂರೈಸು; ಒದಗಿಸು.

೬. ಉಗಿಬಗಿಮಾಡು = ೧. ಸೀಳಿ ಚೂರು ಮಾಡು ; ಛಿದ್ರಗೊಳಿಸು; ಭೇದಿಸು.
೨. ಕಲಕು; ಕದಡು; ಮಿಶ್ರ ಮಾಡು
೩. ಪರವಶಗೊಳಿಸು ; ಕಕ್ಕಾಬಿಕ್ಕಿಯಾಗಿಸು ; ಅಸ್ತವ್ಯಸ್ತವಾಗಿಸು

೭. ಉಗಿಬಗಿಯಾಗು = ೧. ಹೊಯ್ದಾಡು; ಅಸ್ಥಿರವಾಗು; ಕಕ್ಕಾಬಿಕ್ಕಿಯಾಗು.
೨. ಆತುರಗೊಳ್ಳಲು ತ್ವರೆಮಾಡು.

೮. ಎತ್ತಾಡು, ಎತ್ತಿ ಆಡು = ದೋಷಾರೋಪ ಮಾಡು ; ಹಂಗಿಸು

೯. ಎತ್ತಿಕಟ್ಟು = ೧. ವಿರುದ್ಧವಾಗಿ ನಿಲ್ಲಿಸು ; ಪ್ರಚೋದನೆ ಮಾಡು
೨. ಏರಿಸಿಕಟ್ಟು
೩. ಹೋಗಾಡಿಸು; ಒಳಸರಿ ; ಕುಗ್ಗು

೧೦. ಎತ್ತಿಎಣಿಸು = ದೋಷಾರೋಪಣೆ ಮಾಡು; ತಪ್ಪುಗಳನ್ನು ತೋರಿಸು

೧೧. ಎತ್ತಿಕಳೆ = ತೊಲಗಿಸು ; ಹೋಗುವಂತೆ ಮಾಡು; ಕಳೆ.

೧೨. ಎತ್ತಿಕೊಳ್ = ತೆಗೆದುಕೋ ; ಅಂಗೀಕರಿಸು.

೧೩. ಎತ್ತಿತರ್ = ವಸೂಲ್ಮಾಡು

೧೪. ಎತ್ತಿತೋರಿಸು = ಎದ್ದು ಕಾಣುವಂತೆ ಮಾಡು; ಸ್ಪಷ್ಟಪಡಿಸು

೧೫. ಎತ್ತಿದಕ್ಕೆ = ೧. ಚತುರ; ಪ್ರವೀಣ; ಶ್ರೇಷ್ಠ

೨. ಶ್ರೇಷ್ಠತೆ

೧೬. ಎತ್ತಿನಡೆ = ಅಭಿಮುಖವಾಗಿ ಹೋಗು ; ದಂಡೆತ್ತಿ ಹೋಗು ; ಮುತ್ತು

೧೭. ಎತ್ತಿಪೋಗು = ಎತ್ತಿನಡೆ

೧೮. ಎತ್ತಿಬಡಿ = ೧. ಅಪಹರಿಸು

೨. ಕುಕ್ಕು

೧೯. ಎತ್ತಿಬರ್ = ಮೇಲೇರಿ ಬರು; ಮೇಲೆಬೀಳು

೨೦. ಎತ್ತಿಬರೆ = ಪ್ರತಿಯಲ್ಲಿ ಇದ್ದಂತೆ ಬರೆ ; ನಕಲು ಮಾಡು; ಉದ್ಧರಿಸು

೨೧. ಎತ್ತಿಮಾರು = ಹರಾಜು ಮಾಡು; ಲಿಲಾವು ಮಾಡು ; ಏಲಂ ಹಾಕು

೨೨. ಎತ್ತಿಹಾಕು = ೧. ಅಪಹರಿಸು; ಲಪಟಾಯಿಸು ; ಹೊಡೆ

೨. ಮೀರು ; ಉಪೇಕ್ಷೆಮಾಡು

೨೩. ಎತ್ತಿಹಿಡಿ = ೧. ಸರಿಯೆಂದು ಪ್ರತಿಪಾದಿಸು; ಸಮರ್ಥಿಸು; ಬೆಂಬಲಿಸು

೨. ಉದ್ಧರಿಸು

೩. ಎತ್ತಿಕಟ್ಟು

೨೪. ಎತ್ತಿಹೋಗು =೧. ದಂಡೆತ್ತಿ ಹೋಗು

೨. ನಾಶವಾಗು ; ಹಾಳಾಗು

೩. ಸಂಪೂರ್ಣವಾಗಿ ಹೋಗು ; ಗುಳೇಹೋಗು; ವಲಸೆಹೋಗು.

೨೫. ಒತ್ತಿಕಟ್ಟು = ಅದುಮಿ ಕಟ್ಟು; ಬಿಗಿಯಾಗಿ ಕಟ್ಟು

೨೬. ಒತ್ತಿಕೊಳ್ = ಅಪ್ಪಿಕೊ ; ಹಿಡಿದುಕೊ; ಅವಚಿಕೊ

೨೭. ಒತ್ತಿಡು = ಅದುಮಿ ಇದು; ಹತ್ತಿಕ್ಕು

೨೮. ಒತ್ತಿತೆಗೆ = ಅದುಮಿ ತೆಗೆ

೨೯. ಒತ್ತಿನುಡಿ = ಸ್ವರಭಾರ ಹಾಕಿ ಮಾತನಾಡು, ಹೇಳು

೩೦. ಒತ್ತಿನೋಡು = ಪರೀಕ್ಷಿಸು

೩೧. ಒತ್ತಿಪಿಡಿ = ಒತ್ತಿತೆಗೆ

೩೨. ಒತ್ತಿಬರು = ಮೇಲೇರಿ ಬರು, ಮುನ್ನುಗ್ಗಿ ಬರು ; ಆಕ್ರಮಿಸು ; ಮುತ್ತು

೩೩. ಒತ್ತಿಹಾಕು = ಅದುಮಿಹಾಕು

೩೪. ಒತ್ತಿಹೇಳು = ೧. ಸ್ಪಷ್ಟಪಡಿಸಿ ಹೇಳು ; ಮನಸ್ಸಿಗೆ ನಾಟುವಂತೆ ಹೇಳು

೨. ಸ್ವರಭಾರಹಾಕಿ ಉಚ್ಚರಿಸು

೩೫. ಒತ್ತಾಗು = ದಟ್ಟವಾಗು; ಗುಂಪಾಗು.

೩೬. ಒಂತಾಗು = ೧. ಒಂತಾಗು

೨. ಬೆಂಬಲವಾಗು; ಸಹಾಯವಾಗು

೩೭. ಒತ್ತಿಗಿರು, ಒತ್ತಿಲಿರು = ಪಕ್ಕದಲ್ಲಿರು; ಮಗ್ಗುಲಲ್ಲಿರು

೩೮. ಒತ್ತಿಗೆ ಹಾಕು = ಅಡೆ ಹಾಕು; ಮಾಗಲು ಹಾಕು

೩೯. ಒತ್ತೊತ್ತೆ = ೧. ಒತ್ತಾಗಿರುವಿಕೆ; ಗುಂಪು; ಸಮ್ಮರ್ದ; ಸಮೂಹ

೪೦. ಒತ್ತೊತ್ತೆಯಾಗು = ಗುಂಪುಗುಂಪಾಗು

೪೧. ಕಟ್ಟುಪಾಡು = ಬಂಧನಕ್ಕೆ ಒಳಗಾಗು

೪೨. ಕಟ್ಟುಮಾಡು = ೧. ಕಟ್ಟಿಹಾಕು; ಕೈಕೋಳ ತೊಡಿಸು; ಸೆರೆಯಿಡು

೨. ನಿರ್ಬಂಧಿಸು; ಒತ್ತಾಯಪಡಿಸು

೩. ಅಪ್ಪಣೆ ಮಾಡು; ನಿಯಮಿಸು

೪೩. ಕೈಮಾಟಕೆಬರು = ಅಧೀನವಾಗು; ವಶವಾಗು; ಪ್ರಭಾವಕ್ಕೆ ಒಳಗಾಗು

೪೪. ಗಂಟಲತೀಟೆ = ಮಾತಿನ ಚಾಪಲ್ಯ

೪೫. ಗಜಬಜವಾಗು = ಗದ್ದಲವಾಗು; ಗಲಭೆಯಾಗು

೪೬. ಗರಗರನಾಗು = ಚೆಲುವಾಗು; ಸೊಗಸಾಗು

೪೭. ಗೋಣುಮಾಡು = ಕೊರಳನ್ನು ಕೊಂಕಿಸು ; ಒಯ್ಯಾರ ಮಾಡು

೪೮. ಚಳವಾಗು = ತಡವರಿಸು; ಕ್ರಮತಪ್ಪು

೪೯. ಥಲ್ಲಿಮಾಡು = ನರ್ತನ ಮಾಡು; ನಾಟ್ಯ ಮಾಡು

೫೦. ಜರಿದಾಡು = ಬಯ್ಯು, ಮೂದಲಿಸು

೫೧. ಜಾರಿಕೊಳ್ಳು = ತಪ್ಪಿಸಿಕೊಳ್ಳು ; ಪಾರಾಗು

೫೨. ತಂತ್ರ ಮಾಡು = ಉಪಾಯ ಮಾಡು

೫೩. ತದ್ಗದಮಾಗು = ಐಕ್ಯವಾಗು ; ಲೀನವಾಗು

೫೪. ತಿಂದು ತೇಗು = ೧. ಹೊಟ್ಟೆ ತುಂಬಿ ತೇಗು; ಸಂತೋಷಪಡು

೨. ನಾಶ ಮಾಡು ; ಹಾಳು ಮಾಡು

೫೫. ತಿರುಪತಿ ಆಗು = ನಷ್ಟಹೊಂದು; ಕಳೆದುಕೊಳ್ಳು; ಮೋಸ ಹೋಗು

೫೬. ದಂದಣ ದತ್ತಣ ಎನ್ನು = ಬೇಡಿಕೊಳ್ಳು ; ದಮ್ಮಯ್ಯಾ ಎನ್ನು.

೫೭. ದರವುರಮಾಗು = ಕ್ಷೀಣವಾಗು; ಕಡಿಮೆಯಾಗು

೫೮. ದಡಬಡಮಾಡು = ೧. ಅಬ್ಬರ ಮಾಡು; ಗದ್ದಲ ಮಾಡು

೨. ಪ್ರಯತ್ನ ಮಾಡು ; ಶ್ರಮ ಪಡು

೫೯. ದಿಂಗಾಗು = ರೀವಿಯಿಂದ ಕೂಡಿರು; ಜೋರಾಗಿರು

೬೦. ದುಸುಮುಸುಗುಟ್ಟು = ಸಿಡಿಮಿಡಿಗೊಳ್ಳು

೬೧. ನಖಬಣ್ಣವ ಕಾಣು = ಋತುಮತಿಯಾಗು ; ಬಹಿಷ್ಠೆಯಾಗು

೬೨. ನಸಿದಾಡು = ಹಾಳಾಗು; ಕೆಡು

೬೩. ನಶೀಬು ತೆಗೆ = ಅದೃಷ್ಟ ಖುಲಾಯಿಸು ; ದೈವ ಕಣ್ಣುಬಿಡು

೬೪. ನಿಚ್ಚಳಾಗು = ಸ್ಪಷ್ಟವಾಗು

೬೫. ನಿಗಿತುಕೊಳ್ಳು = ೧. ನೆಟ್ಟಗಾಗು

೨. ಸೆಟೆದುಕೊಳ್ಳು

೬೬. ನುಂಗಲಾರದ ಗುಳಿಗೆ = ಸಹಿಸಲಾಗದುದು

೬೭. ನೂರಾಗು = ಅನೇಕವಾಗು; ಬಹಳವಾಗು

೬೮. ಹೊಣಕೆಮಾಡು = ಸಂಗಡಿಸು; ಅಣಿಗೊಳಿಸು

೭೦. ಹೊಣೆಯಾಗು = ಜವಾಬ್ದಾರಿಯನ್ನು ಹೊರು; ಭಾರವನ್ನು ವಹಿಸಿಕೊಳ್ಳು

೭೧. ಹೊರತುಪಡಿಸು = ಬೇರೆ ಮಾಡು ; ಪ್ರತ್ಯೇಕಿಸು

೭೨. ಬಂದೋಬಸ್ತು ಮಾಡು = ಭದ್ರ ಮಾಡು ; ಜೋಪಾನಗೊಳಿಸು

೭೩. ಬಡವಾಗು = ೧. ಕೃಶವಾಗು ; ಸಣ್ಣನಾಗು; ಸೊರಗು

೨. ನಿರ್ಗತಿಕನಾಗು ; ದಾರಿದ್ರ್ಯವನ್ನು ಹೊಂದು

೭೪. ಬಲಿ ಬೀಳು = ತುತ್ತಾಗು ; ಈಡಾಗು

೭೫. ಬಲಿಯಾಗು = ೧. ಆಹುತಿಯಾಗು; ಮರಣವನ್ನು ಹೊಂದು

೨. ಈಡಾಗು; ಗುರಿಯಾಗು

೭೬. ಬಲಕೆಯಾಗು = ೧. ಗಟ್ಟಿಯಾಗು; ಬಿರುಸಾಗು

೨. ಬಿಗಿಯಾಗು; ಬಲವಾಗು; ಭದ್ರವಾಗು

೭೭. ಬಾಧ್ಯಪಡು = ಸಂಬಂಧಪಡು ; ನೆಂಟತನವನ್ನು ಹೊಂದು

೭೮. ಬಾಸೆಯ ಕೊಡು = ಮಾತು ಕೊಡು ; ವಚನ ಕೊಡು

೭೯. ಬಿಡುವಾಗು = ಅವಕಾಶವುಂಟಾಗು; ಆಸ್ಪದವಾಗು

೮೦. ಬೆಲ್ಲತೂಗು = ತೂಕಡಿಸು; ಜೂಗರಿಸು

೮೧. ಬೇರುಮಟ್ಟ ಕೀಳು = ಮೂಲೋತ್ಪಾಟನ ಮಾಡು

೮೨. ಬೇಳಾಗು = ೧. ಕಕ್ಕಾಬಿಕ್ಕಿಯಾಗು ; ತಬ್ಬಿಬ್ಬಾಗು

೨. ಹುಚ್ಚಾಗು; ಮರುಳಾಗು; ಮೋಹಗೊಳ್ಳು

೩. ಮೂರ್ಖನಾಗು

೪. ತಳಮಳಗೊಳ್ಳು ; ಕಳವಳಿಸು

೮೩. ಭೂಗತ ಮಾಡು = ೧. ನೆಲದೊಳಗೆ ಮುಚ್ಚಿಡು ; ಹೂತಿಡು

೨. ಹಾಳು ಮಾಡು

೮೪. ಮಂದಿಗೆ ಬರಿಸು = ಎಲ್ಲರಿಗೂ ತಿಳಿಯುವಂತೆ ಮಾಡು ; ಬಹಿರಂಗಗೊಳಿಸು

೮೫. ಮುಗಿಲು ಮುಟ್ಟು = ೧. ಮೇಲೇರು; ಉಚ್ಛ್ರಾಯ ಸ್ಥಿತಿಯನ್ನು ತಲುಪು

೨. ಆಕಾಶವನ್ನು ತಲುಪು; ಗಗನಕ್ಕೇರು

೮೬. ಮುಷ್ಕರ ಹಿಡಿ = ೧. ಹಟಹಿಡಿ; ಆಗ್ರಹಪಡಿಸು

೨. ಸಂಪು ಹೂಡು ; ಸತ್ಯಾಗ್ರಹವನ್ನು ಆರಂಭಿಸು

೩. ಕಾರ್ಯವನ್ನು ನಿಲ್ಲಿಸು ; ಅಸಹಕಾರವನ್ನು ಸೂಚಿಸು

೮೭. ಜತನ ಮಾಡು = ಭದ್ರಪಡಿಸು; ಜೋಕೆಯಾಗಿರಿಸು

೮೮. ರಂಗಾಗು = ೧. ಬಣ್ಣವೇರು; ಕಾಂತಿಯಿಂದ ಕೂಡು

೨. ಉತ್ಸಾಹ ಪಡು

೮೯. ರದ್ದಾಗಿಸು = ತೆಗೆದುಹಾಕುವಂತೆ ಮಾಡು ; ವಜಾಮಾಡು

೯೦. ರೇಕೆಮಾಡು = ಶುದ್ಧ ಮಾಡು ; ಹಸನುಮಾಡು

೯೧. ಲಗತ್ತಾಗು = ಹೊಂದಿಕೆಯಾಗು ; ಜೋಡಣೆಯಾಗು ; ಸೇರಿಕೆಯಾಗು

೯೨. ಲೀಲಾಜಾಲವಾಗಿ = ಅತಿ ಸುಲಭವಾಗಿ ; ನಿರಾಯಾಸವಾಗಿ

೯೩. ವಾಕರಿಕೆಯಾಗು = ಜುಗುಪ್ಸೆಯಾಗು ; ಅಸಹ್ಯವುಂಟಾಗು

೯೪. ವಿವೇಕಬೃಹಸ್ಪತಿ = ಜ್ಞಾನದಲ್ಲಿ ಬೃಹಸ್ಪತಿಗೆ ಸಮಾನನಾದವನು; ಬಹಳ ಬುದ್ಧಿವಂತ

೯೫. ವ್ಯಥೆಯಾಗು = ವ್ಯರ್ಥವಾಗು; ನಿರರ್ಥಕವಾಗು; ದಂಡವಾಗು

೯೬. ವ್ಯರ್ಥ ಮಾಡು = ನಿರರ್ಥಕಗೊಳಿಸು; ನಿಷ್ಪ್ರಯೋಜಕವನ್ನಾಗಿ ಮಾಡು

೯೭. ಶರಣಾಗು = ೧. ಆಶ್ರಯ ನೀಡು ; ಕಾಪಾಡು

೨. ಒಪ್ಪಿಸು; ಸಮರ್ಪಿಸು

೯೮. ಶಿಫಾರಸು ಮಾಡು = ವಶೀಲಿ ಮಾಡು ; ಪ್ರಭಾವವನ್ನು ಬೀರು

೯೯. ಚಳ್ಳೆಹಣ್ಣು ತಿನ್ನಿಸು = ೧. ಮೋಸ ಮಾಡು; ವಂಚಿಸು

೨. ಸತಾಯಿಸು

೧೦೦. ಹುಡದಿಯಾಡು = ಗದ್ದಲಮಾಡು; ಗೊಂದಲಮಾಡು

ಈ ನಿಘಂಟಿನಲ್ಲಿ ದಾಖಲಾದ ನುಡಿಗಟ್ಟುಗಳಿಗೆ ವಾಚ್ಯಾರ್ಥ, ಲಕ್ಷಣಾರ್ಥ, ವಿರೋಧಾರ್ಥಗಳು, ವ್ಯಂಗ್ಯಾರ್ಥಗಳನ್ನು ಗಮನಿಸಬಹುದು. ಅಲ್ಲದೇ ಒಂದೇ ನುಡಿಗಟ್ಟಿಗೆ ಪ್ರಾಸಂಗಿಕವಾಗಿ ಹಲವಾರು ಅರ್ಥಗಳಿರುವುದನ್ನು ಗಮನಿಸಬಹುದು.

ಉದಾ : ೧. 'ಸಂತೆ' ಎನ್ನುವ ಪದವನ್ನು ವಿವರಿಸುವಾಗ

ಸಂತೆಕಟ್ಟು = ೧. ವ್ಯಾಪಾರಕ್ಕಾಗಿ ಸಂತೆಯು ಸೇರು : (ಕ್ರಿ) ೨. ಪರಿಷೆಯನ್ನು ಏರ್ಪಡಿಸು;

ಸಂತೆಯನ್ನು ಏರ್ಪಾಡುಮಾಡು:

ಸಂತೆಕಟ್ಟೆ = ವ್ಯಾಪಾರಕ್ಕಾಗಿ ಜನರು ಸೇರುವ ಸ್ಥಳ

ಸಂತೆನೆರೆ = ಸಂತೆಕೂಡು

ಸಂತೆಯ ಕಟ್ಟಿಸು = ಪರಿಶೆಯನ್ನು ಏರ್ಪಾಟು ಮಾಡು; ಸಂತೆಯನ್ನು ಏರ್ಪಡಿಸು

ಸಂತೆಯ ಮಂದಿ = ಸಂತೆಯ ದಿನದಂದು ವ್ಯಾಪಾರಕ್ಕಾಗಿ ಸೇರಿ ಅನಂತರ ಚದುರುವ ಜನ

ಸಂತೆಯ ಸುದ್ದಿ = ಗುಂಪಿನಲ್ಲಿ ಒಬ್ಬರಿಂದೊಬ್ಬರಿಗೆ ಹರಡುವ ಮಾತು, ಗಾಳಿಮಾತು, ವದಂತಿ

೨. ಪಿತೂರಿ ಎನ್ನುವ ಪದಕ್ಕೆ ದಾಖಲಿಸಿದ ನುಡಿಗಟ್ಟುಗಳು

೧. ಪಿತೂರಿ ನಡೆ = ಒಳಸಂಚು ಆಗು; ತಂತ್ರಕ್ಕೆ ಎಡೆಯಾಗಿರು:

೨. ಪಿತೂರಿ ನಡೆಸು = ಒಳಸಂಚನ್ನು ಹೂಡು

೩. ಪಿತೂರಿ ಮಾಡು = ಪಿತೂರಿ ನಡೆಸು

೪. ಪಿತೂರಿ ಹೂಡು = ಪಿತೂರಿ ನಡೆಸು

೫. ಫಿತೂರಿಯಾಗು = ಒಳಸಂಚಿನಲ್ಲಿ ಭಾಗಿಯಾಗು

೩. ದಿನ ಎನ್ನುವ ಪದಕ್ಕೆ ನಿಘಂಟಿನಲ್ಲಿ ದಾಖಲಾದ ನುಡಿಗಟ್ಟುಗಳು

ದಿನ ಎಣಿಸು = ಸಾವಿನ ದಿನವನ್ನು ಎದುರು ನೋಡು. ಕಡೆಗಾಲವನ್ನು ನಿರೀಕ್ಷಿಸು

ದಿನಂತಪ್ಪದೆ = ಒಂದು ದಿನವನ್ನೂ ಬಿಡದೆ; ಪ್ರತಿನಿತ್ಯವೂ

ದಿನಂಪ್ರತಿ = ಪ್ರತಿದಿನ; ಪ್ರತಿನಿತ್ಯ

ದಿನ ಕೂಡಿಬರು = ಒಳ್ಳೆಯ ಸಮಯ ಹೊಂದಿಬರು; ಅದೃಷ್ಟ ಒದಗು

ದಿನ ಕೂಡು = (ಶುಭಕಾರ್ಯ ಮುಂತಾದುವಕ್ಕೆ) ದಿನ ಹೊಂದಿಕೆಯಾಗು, -ಸೇರು

ದಿನ ಕೇಳು = ಒಳ್ಳೆಯ ದಿನವನ್ನು ವಿಚಾರಿಸು; ತಿಥಿ ನಕ್ಷತ್ರಗಳನ್ನು ವಿಚಾರಿಸು

ದಿನಕ್ರಮೇಣ = ದಿನದಿಂದ ದಿನಕ್ಕೆ; ದಿನ ಕಳೆದಂತೆ

ದಿನಗಟ್ಟಲೆ, ದಿನಗಟ್ಲೆ = ಪ್ರತಿದಿನ, ದಿನನಿತ್ಯ

ದಿನಗಳ ಮೇಲೆ ಬೀಳು = ಹಲವು ದಿನಗಳ ಗೊತ್ತು ಮಾಡು

ದಿನತುಂಬು = ಗರ್ಭಿಣಿಗೆ ನವಮಾಸ ಪೂರ್ಣವಾಗು; ಹೆರಿಗೆ ಕಾಲ ಸಮೀಪವಾಗು

ದಿನನೂಕು = (ನೆಮ್ಮದಿಯಿಲ್ಲದೆ) ಜೀವನವನ್ನು ಸಾಗಿಸು

ದಿನಬರು = ಕಾಲ ಒದಗು; ಸಮಯ ಸನ್ನಿಹಿತವಾಗು

ದಿನಮೇಕು ಮಾಡು = ಕಾಲವನ್ನು ತಳ್ಳು; ತಡ ಮಾಡು; ಕಾಲವಂಚನೆ ಮಾಡು:

ದಿನವಿಳಿ = ಹೊತ್ತು ಇಳಿ

ದಿನ ಸರಿ = ಕಾಲ ಹೋಗು; ಸಮಯ ಕಳೆ

ದಿನ ಹಾಕು = ಕಾಲ ತಳ್ಳು, ಬದುಕು ಸಾಗಿಸು

ದಿನ ಹೇಳು = ಪಂಚಾಂಗ ಹೇಳು; ಜ್ಯೋತಿಷವನ್ನು ಹೇಳು

ನುಡಿಗಟ್ಟಿನಲ್ಲಿ ಸಾಕಷ್ಟು ಅರ್ಥಗಳಿದ್ದಾಗ ಅವುಗಳಿಗೆ ಅನುಕ್ರಮವಾದ ಅರ್ಥವನ್ನು ಕನ್ನಡ ನಿಘಂಟಿನಲ್ಲಿ ನೀಡಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪುಟಗಳು ಹಲವು ನುಡಿಗಟ್ಟುಗಳನ್ನು ದಾಖಲಿಸಿದ್ದು, ಕನ್ನಡ ಸಾಹಿತ್ಯ, ಸಂಸ್ಕೃತಿ, ಪರಂಪರೆಯ ಶಬ್ದಪಾಂಡಿತ್ಯದ ಹೆಗ್ಗುರುತುಗಳಾಗಿದ್ದು, ಇವುಗಳ ಬಗ್ಗೆ ವಿಶೇಷ ಅಧ್ಯಯನಗಳಾಗಬೇಕಿದೆ.

**೪.೩.೪. ದ್ವಿರುಕ್ತಿಗಳು**

ಒಂದು ವಿಶೇಷಾರ್ಥವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಪದವನ್ನೋ, ಒಂದು ವಾಕ್ಯವನ್ನೋ ಎರಡೆರಡು ಸಲ ಪ್ರಯೋಗ ಮಾಡುವುದಕ್ಕೆ ದ್ವಿರುಕ್ತಿ ಎನ್ನುತ್ತೇವೆ.

ನಿಘಂಟಿನಲ್ಲಿ ಕ್ರಿಯಾವಿಶೇಷಣ, ನಾಮವಿಶೇಷಣ, ಅವ್ಯಯ ಪದಗಳನ್ನು, ವಾಕ್ಯಭಾಗಗಳನ್ನು ವಿಶೇಷವಾಗಿ ಅವಸರ, ಆಕ್ಷೇಪ, ಉತ್ಸಾಹ, ಕೋಪ, ಸಂಭ್ರಮ, ಹರ್ಷ ಮುಂತಾದವುಗಳ ಸಂದರ್ಭದಲ್ಲಿ ಇವುಗಳನ್ನು ಉಲ್ಲೇಖಗಳನ್ನಾಗಿ ನೀಡಲಾಗಿದೆ.

ಇವು ಭಾಷೆಯ ವಿಶಿಷ್ಟ ಪ್ರಯೋಗಗಳಾಗಿದ್ದು, ಮಾತಿನ ಅಭಿವ್ಯಕ್ತಿಯಲ್ಲಿ ಪುಷ್ಟಿ ದೊರೆಯಲು, ಕೇಳುವವರ ಮನಸ್ಸಿನ ಮೇಲೆ ಹೆಚ್ಚು ಪರಿಣಾಮಕಾರಿಯಾಗಿರಲು ಮುಖ್ಯ ಉಲ್ಲೇಖಗಳನ್ನು ನೀಡುವಾಗ ದ್ವಿರುಕ್ತಿಗಳನ್ನು ದಾಖಲಿಸಲಾಗಿದೆ. ಕನ್ನಡದಲ್ಲಿ ಅಸಂಖ್ಯಾತ ದ್ವಿರುಕ್ತಿಗಳಿದ್ದು, ಕೆಲವು ವಿಶಿಷ್ಟವಾದ ದ್ವಿರುಕ್ತಿಗಳನ್ನು ಮಾತ್ರ ಉದಾಹರಣೆಯಾಗಿ ಕನ್ನಡ ನಿಘಂಟಿನಲ್ಲಿ ನೀಡಲಾಗಿದೆ.

ಉದಾ:- ೧. ಉಡುಗು₁ (ಕ್ರಿ). ೧. ಸಂಕೋಚಹೊಂದು; ಉಡುಗುಡುಗು (ದ್ವಿ) = ತಡೆ ತಡೆ [೧-೮೭೬]

೨. ಗರಮ್ (ಗು) ೧. ಬಿಸಿಯಾದ; ಉಷ್ಣವಾದ. **ಗರಮಾಗರಮ** (ದ್ವಿ) [೨-೨೪೨೭]

೩. ತರಂಬಿಡಿ, ತರವಿಡಿ, ಥರಂಬಿಡಿ, ಥರವಿಡಿ (ಕ್ರಿ). ೧. ಸಾಲುಹಿಡಿ; ಕ್ರಮವನ್ನು ಹೊಂದು:

**ತರತರಂಬಿಡಿ** (ದ್ವಿ) : ೧. ಸಾಲಾಗು; ಕ್ರಮವಾಗಿರು: ಒಳಿಗೊಳ್ಳು [೩-೩೩೧೨]

೪. ಥರ್ಗ, (ನಾ). ಒಂದು ಅನುಕರಣ ಶಬ್ದ. **ಥರಥರ್ಗ** (ದ್ವಿ) [೪-೩೭೫೩]

೫. ನುಲ್ಗಿ (ಕ್ರಿ). ೧. (ಹುರಿ, ಹಗ್ಗ ಮೊದಲಾದವುಗಳನ್ನು) ಹೊಸೆ: **ನುಲಿನುಲಿ** (ದ್ವಿ) [೫-೪೮೭೦]

೬. ಪೆಸರ್, ಹೆಸರು, (ನಾ). ೧. ನಾಮಧೇಯ; ಅಭಿಧಾನ: **ಪೆಸರ್ಪೆಸರ್**(ದ್ವಿ) [೬-೫೮೩೭]

೭. ಬಾಪ್ಪು, ಬಾಪು, ಬಾರ್ಪು, ಭಾಪು, ಭಾಪ್ಪು (ಅ). ಶೌರ್ಯ, ಸಾಹಸಗಳನ್ನು ಕುರಿತು ಮೆಚ್ಚುಗೆ, ಸಂತೋಷ, ಅಭಿನಂದನೆ ಮುಂತಾದವುಗಳನ್ನು ಸೂಚಿಸುವಾಗ ಬಳಸುವ ಒಂದು ಶಬ್ದ : **ಬಬಾಪ್ಪು,**

**ಭಾಪುಭಾಪು, ಭಾಪ್ಪುಭಾಪ್ಪು** (ದ್ವಿ) [೬-೬೩೭೮]

೮. ಬಿಸಿ (ನಾ). ೧. ಕಾವು; ಹೊಸ: **ಬಿಸಿಬಿಸಿ** (ದ್ವಿ) [೭-೬೪೮೫]

೯. ಸಿಲ್ಕು, ಸಿಕ್ಕು, ಸಿಗು, ಸಿರ್ಕು, ಸಿಲುಕು, (ಕ್ರಿ). ಸಿಕ್ಕ (ಭೂತಕೃ), ಸಿಕ್ಕು(ಭೂತನ್ಯೂ).೧. ಬಂಧನಕ್ಕೊಳಗಾಗು; ಸೆರೆಯಾಗು: **ಸಿಕ್ಕುಸಿಕ್ಕು, ಸಿಲುಕುಸಿಲುಕು, ಸಿಲ್ಕುಸಿಲ್ಕು** (ದ್ವಿ) [೮-೮೫೫೩]

ಕನ್ನಡ ನಿಘಂಟಿನಲ್ಲಿ ಸಾವಿರಾರು ವೈವಿಧ್ಯಮಯವಾದ ದ್ವಿರುಕ್ತಿಗಳಿದ್ದು, ಒಂದೇ ದ್ವಿರುಕ್ತಿಯ ಹಲವು ಬಗೆಗಳನ್ನು ನೀಡಿರುವುದು, ಅನುಕರಣ ಶಬ್ದಗಳಿಂದ ದ್ವಿರುಕ್ತಿಗಳಾಗಿರುವುದು ಮೊದಲಾದ ವೈಶಿಷ್ಟ್ಯಗಳನ್ನು ಹೊಂದಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

**೪.೩.೫. ಗಾದೆಗಳು**

ಭಾಷೆಯ ಅವಿಭಾಜ್ಯ ಅಂಗಗಳಲ್ಲಿ ಗಾದೆಗಳು ಪ್ರಮುಖವಾಗಿದ್ದು, ಒಂದು ಭಾಷೆಯನ್ನಾಡುವ ಜನಾಂಗದ ಅನುಭವದ ಸಂಪತ್ತು ಇವುಗಳಲ್ಲಿ ಸಂಗ್ರಹಗೊಂಡಿರುತ್ತದೆ. 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಗಾದೆ ಅವುಗಳ ಸಾರ್ವಕಾಲಿಕ ಮೌಲ್ಯವನ್ನು ಸೂಚಿಸುತ್ತದೆ. ಗಾದೆಗಳು ಜನರ ಅನುಭವಕ್ಕೆ, ವಸ್ತು ವೈವಿಧ್ಯತೆಗೆ, ಸಂಸ್ಕೃತಿಗೆ ಸಾಕ್ಷಿಯಾಗಿವೆ.

ಜನಪದರು ಕಟ್ಟಿದ ಈ ಗಾದೆಗಳಿಗೆ ಲೋಕೋಕ್ತಿ, ಅನುಭವದ ಮಾತು, ಗತಿಬದ್ಧ ನುಡಿ, ಸೂತ್ರ, ನಾಣ್ಣುಡಿ, ಜಾಣ್ಣುಡಿ ಎನ್ನುವ ಹಲವು ಹೆಸರುಗಳಿದ್ದು, ಇವು ಹಿರಿಯರ ಜೀವಾನುಭವದ ನುಡಿಮುತ್ತುಗಳಾಗಿದ್ದು, ಮಿತವಾದ ಶಬ್ದಗಳಲ್ಲಿ ಅಗಾಧ ಅರ್ಥವನ್ನು ಒಳಗೊಂಡ, ವಿವೇಕಪೂರ್ಣವಾದ, ತೀಕ್ಷ್ಣವಾದ ವಿಚಾರಗಳನ್ನು ಒಳಗೊಂಡಿರುತ್ತವೆ.

ಜೆ.ಎ.ಕೆಲ್ಲೊರವರು 'ಸಂಕ್ಷಿಪ್ತತೆ, ವಿವೇಕಪೂರ್ಣತೆ, ತೀಕ್ಷ್ಣತೆ ಮತ್ತು ಜನಪ್ರಿಯತೆ' ಎನ್ನುವವು ಗಾದೆಯ ನಾಲ್ಕು ಗುಣಗಳು ಎಂದು ಹೇಳಿದ್ದಾರೆ.[೬]

ಗಾದೆಗಳ ಬಗ್ಗೆ ವ್ಯಾಪಕವಾಗಿ ಅಧ್ಯಯನ ಮಾಡಿರುವ ರಾಗೌರವರು "ಗಾದೆಗಳೆಂದರೆ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದು, ಈಗಲೂ ಇರುವ, ಉಪದೇಶಾತ್ಮಕ ಅಥವಾ ಸಲಹೆಯನ್ನು ನೀಡುವ, ನಿಜವಾದ ಅರ್ಥವನ್ನು ಮರೆಯಿಸಿ, ಅಲಂಕಾರಿಕವಾಗಿ ವ್ಯಕ್ತವಾಗಿರುವ ರೂಪಕ ಅಥವಾ ನಿಗೂಢಾರ್ಥ ದ್ಯೋತಕವಾಗಿ ರೂಪ ಬದಲಿಸಿ ಕಾಣಿಸಿಕೊಳ್ಳುವ ಜನಾಂಗವೊಂದರ ಸೂಕ್ತಿಯಾಗಿದೆ."[೮] ಎಂದು ಗಾದೆಗಳ ಲಕ್ಷಣಗಳನ್ನು ಕುರಿತು ಹೇಳಿದ್ದಾರೆ.

ಇವು ಭಾಷೆಯ ಪ್ರಧಾನಾಂಶಗಳಾಗಿದ್ದು, ಕನ್ನಡ ನಿಘಂಟಿನಲ್ಲಿ ಮುಖ್ಯ ಶಬ್ದಗಳನ್ನು ದಾಖಲಿಸಿ, ಅದರ ಅರ್ಥದ ವಿಶದತೆಗೆ ಹಾಗೂ ಸ್ಪಷ್ಟೀಕರಣಕ್ಕೆ ಗಾದೆಗಳನ್ನು ಪೂರಕವಾಗಿ ಬಳಸಿದ್ದಾರೆ. ಪದಗಳಿಗೆ ಅರ್ಥವನ್ನು ಕೊಡುವಾಗ ಸಂದರ್ಭೋಚಿತವಾಗಿ ಗಾದೆಗಳನ್ನು ಕೊಟ್ಟು ಶಬ್ದಾರ್ಥ ಜ್ಞಾನ ಮತ್ತಷ್ಟು ಮನದಟ್ಟಾಗುವಂತೆ ಮಾಡಿದುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಗಾದೆಗಳಲ್ಲಿ ಭಾಷಿಕ, ಸಾಹಿತ್ಯಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಅಡಕವಾಗಿದ್ದು, ಈ ನಿಘಂಟಿನಲ್ಲಿ ದಾಖಲಾದ ಕೆಲವು ಗಾದೆಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

೧. ಅಂಕೆ- ಅಂಕೆ ತಿಳಿಯದವ ಮಂಕೆಗಿಂತ ಕಡೆ [೧-೦೭]

೨. ಅಂಬಟೆ – ದೂರದ ಮಾವಿಗಿಂತ ಹತ್ತಿರದ ಅಂಬಟೆ ಲೇಸು [೧-೪೩]

೩. ಅಂಬು – ಅಂಬು ಬಿಡಲಿಕ್ಕೆ ತಿಳಿಯದಿದ್ದರೆ ಚೆಂಬು ಮುಳುಗಿಸಲಿಕ್ಕೆ ತಿಳಿಯದೆ? [೧-೪೭]

೪. ಅಚ್ಚುಗಟ್ಟು – ಅಚ್ಚುಕಟ್ಟಾದ ಕೆಲಸ ಚೆಂದ, ಬಂದುಕಟ್ಟಾದ ಊಟ ಚಂದ. [೧-೧೦೦]

೫. ಅಪ್ಪ- ಅಪ್ಪನ್ನ ಅಪ್ಪಾ ಅನ್ನದವ ಚಿಕ್ಕಪ್ಪನ್ನ ಅಪ್ಪಾ ಅಂದಾನೆ. [೧-೨೯೯]

೬. ಅರ್ಘವಾಣಿ (ಅಗ್ಗಿಣಿ) – ಶೀಲವಂತೆ ತಂದ ಗಿಣಿ ಜಂಗಮಗೆ ಶಿವಾರ್ಚನೆಗಾಯಿತು. [೧-೪೦೦]

೭. ಅವುಟು – ಅವುಟು ಇದ್ದವನಿಗೆ ಸೌಟನಿಂದ ಹೊಡೆ ಹಾಗೆ. [೧-೪೬೫]

೮. ಅಳಗೆ (ಅಳಿಗೆ) – ಅಂಬಲಿ ಕುಡಿದವ ಅಳಿಗೆ ಹೊತ್ತುಕೊಂಡು ಹೋದಾನೆ. [೧-೫೧೭]

೯. ಆಗುಳಿಕೆ (ಆಕಳಿಕೆ) – ಅಜ್ಜಿಗೆ ಮೊಮ್ಮಗ ಆಕಳಿಕೆ ಕಲಿಸಿದನಂತೆ. [೧-೫೭೮]

೧೦. ಆಯತ – ಅಡಗೂಲಜ್ಜಿ ಮನೆಯಲ್ಲಿ ಅಟ್ಟಡಿಗೆ ಆಯತವಾಗಿರುವುದು. [೧-೬೪೨]

೧೧. ಆಳ್ (ಆಳು) – ಕಾಳಗಕೆ ಆಳು ಕಟ್ಟಿದವನೇ ಅರಸು, ಕೂಳು ಇಕ್ಕಿದವನೇ ದಾತ. [೧-೭೦೮]

೧೨. ಇಲಿ – ಇಲಿಗೆ ಹೆದರಿ ಹುಲಿಯ ಬಾಯಿಗೆ ಬಿದ್ದ. [೧-೮೦೪]

೧೩. ಈಚೆ – ಆಚೆ ಬೀದಿಯಲ್ಲಿ ಅವಮಾನವಾದರೆ ಈಚೆ ಬೀದಿಯಲ್ಲಿ ಹೊಸ ಆಳು.[೧-೮೨೮]

೧೪. ಉಡುಕೆ (ಉಡಿಕೆ) – ಉಡಿಕೆ ಗಂಡನಲ್ಲ ಗುಳ್ಳವ್ವ ದೇವರಲ್ಲ. [೧-೮೭೬]

೧೫. ಉಪಕಾರ – ಊರು ಉಪಕಾರವರಿಯದು, ಹೆಣ ಸಿಂಗಾರವರಿಯದು. [೧-೯೩೩]

೧೬. ಉಳಿ – ಉಳಿ ಸಣ್ಣದಾದರೆ ಮರ ಕಡಿಯದೆ ಬಿಡದು. [೧-೧೦೦೨]

೧೭. ಊಱು (ಊರು) – ನಾರಿ ಮೋರೆ ನೋಡಿ ಊರಿ ಕೂತರೆ ನೀರು ಸಿಕ್ಕೀತೆ?[೧-೧೦೨೯]

೧೮. ಎಂಜಲ್ (ಎಂಜಲು) – ಎಂಜಲು ಎತ್ತೊ ಗುಂಡಾ ಎಂದರೆ, ಉಂಡವರು ಎಷ್ಟು ಜನ ಅಂದ. [೧-೧೦೩೭]

೧೯. ಏತ (ಯಾತ) – ಯಾತ ತಲೆ ತೂಗಿದರೆ ಪಾತಾಳದ ನೀರು ಬಂತು, ತಾತ ತಲೆದೂಗಿದರೆ ಪಗಡಿ ಬಿತ್ತು. [೧-೧೧೫೫]

೨೦. ಒದಗು – ಓಡುವವನೂ ಬತ್ತಲೆ, ಒದಗಿಸಿಕೊಂಡು ಹೋಗುವವನೂ ಬತ್ತಲೆ.[೧-೧೨೩೦]

೨೧. ಕಚ್ಚೆ – ನಿವಾಳಿಗೆ ತಂದ ಬಟ್ಟೆ ಕಚ್ಚೆಗೆ ಆದರೆ ದಿವಾಳಿಗೆ ಏನು ಮಾಡ್ಯಾನು. [೨-೧೩೭೨]

೨೨. ಕನ್ನ – ಮಾರಿಯ ಮನೆಗೆ ಹೋತ ಕನ್ನ ಕೊರೆದ ಹಾಗೆ. [೨-೧೪೮೮]

೨೩. ಕರಂಟ (ಗರಟೆ) – ಗುಡ್ಡಗುಡ್ಡಕ್ಕೆ ಬೆಂಕಿ ಹಾಕಿ ತೂತು ಗರಟೇಲಿ ನೀರು ಹೊಯ್ದರು. [೨-೧೫೨೮]

೨೪. ಕಲಕಾಲ – ಕಲಕಾಲದಾಸಯ್ಯನಾದರೆ ತಿರುಮಂತ್ರ ಹೇಳ್ಯಾನು. [೨-೧೫೮೬]

೨೫. ಕಾಕುಮಾತು – ಕಾಕುಮಾತು ಆಡಬೇಡ, ಪೋಕ ವಿದ್ಯೆಗೆ ಹೋಗಬೇಡ. [೨-೧೬೮೪]

೨೬. ಕಾಲ್ವಾಯ್ (ಕಾಲಿವೆ) – ಊರ ಗುದ್ದಲಿ ತಂದು ನಾಡು ಕಾಲಿವೆ ತೆಗೆದ. [೨-೧೭೭೦]

೨೭. ಕೀರ್ತನೆ – ಪ್ರಾರ್ಥನೆ ಮಾಡಿದರೆ ಸಿಕ್ಕದ್ದು ಕೀರ್ತನೆ ಮಾಡಿದರೆ ಸಿಕ್ಕೀತೇ. [೨-೧೮೫೯]

೨೮. ಕುತ್ತಿಗೆ – ಕುತ್ತಿಗೆ ಕೊಯ್ಯುವ ಊರಲ್ಲಿ ಸುಲಿದು ಬಿಟ್ಟದ್ದೇ ಗುಣ. [೨-೧೯೨೨]

೨೯. ಕುರುಜು – ಬುರುಜು ಇಲ್ಲದಿದ್ದರೆ ಕುರುಜು ಆದರೂ ಕಟ್ಟಬಾರದೇ. [೨-೧೯೫೪]

೩೦. ಕುಱಿ (ಕುರಿ) – ನರಹತ್ಯಕ್ಕೆ ಹೆದರದವ ಕುರಿ ಹತ್ಯಕ್ಕೆ ಹೆದರಾನೆ. [೨-೧೯೯೩]

೩೧. ಕೆಂಡ – ಕಂಡದ್ದನ್ನಾಡಿದರೆ ಕೆಂಡದಂಥ ಕೋಪ. [೨-೨೦೪೬]

೩೨. ಕೆಂಪಗೆ – ಹೊಲ ಹಚ್ಚಗಾಯಿತು; ಒಡೆಯನ ಕಣ್ಣು ಕೆಂಪಗಾದವು. [೨-೨೦೪೯]

೩೩. ಕೆರಸಿ (ಗೆರಸಿ) – ಊರಬಾಯಿ ಮುಚ್ಚೀಯೇ ಗೆರಸಿ ಬಾಯಿ ಮುಚ್ಚೀಯೆ. [೨-೨೦೮೬]

೩೪. ಕೈಲಾಸ – ಅಮ್ಮನವರಿಗೆ ಪ್ರಾಯ ಬಂದಾಗ ಅಯ್ಯನವರಿಗೆ ಕೈಲಾಸ. [೨–೨೧೪೦]

೩೫. ಕೊಟ್ಟಿಗೆ – ಇಕ್ಕುವವಳು ನಮ್ಮಳಾದರೆ ಕೊಟ್ಟಿಗೆಯಲ್ಲಾದರೂ ಉಂಡೇನು. [೨–೨೧೬೪]

೩೬. ಕೊಯ್ (ಕೊಯ್ಯು) – ತೆಂಗಿನಮರ ಯಾಕೆ ಹತ್ತುತ್ತಿ ಅಂದರೆ ಬೆಕ್ಕಿಗೆ ಹುಲ್ಲು ಕೊಯ್ಯೊದಕ್ಕೆ ಅಂದಹಾಗೆ. [೨–೨೧೮೯]

೩೭. ಕೋಟಿ (ಕೋಳಿ) – ಕೋಳಿ ಕದ್ದೋನಿಗೆ ಸಜಾ; ತಲೆ ಹೊಡೆದೋನಿಗೆ ವಜಾ. [೨–೨೨೬೩]

೩೮. ಕ್ಷೌರ – ವೈರವಿದ್ದವನಿಂದ ಕ್ಷೌರ ಮಾಡಿಸಿಕೊಂಡ ಹಾಗೆ. [೨–೨೩೦೮]

೩೯. ಖರ್ಜೂರ – ಖರ್ಜೂರ ಹಣ್ಣಾಗುವಾಗೆ ಕಾಗೇ ಬಾಯಿಗೆ ಹುಣ್ಣು. [೨–೨೩೨೮]

೪೦. ಗಂಟುಗಳ್ಳ – ಸಂತೆ ನೆರೆಯುವುದಕ್ಕಿಂತ ಮುಂಚೆ ಗಂಟುಗಳ್ಳರ ಹಾವಳಿ. [೨–೨೩೫೯]

೪೧. ಗಾಣಿಗ – ಹಾರುವವನಿಗೆ ಆಳಾಗಬೇಡ, ಗಾಣಿಗನಿಗೆ ಎತ್ತಾಗಬೇಡ. [೩–೨೪೭೬]

೪೨. ಗುತ್ತಗೆ (ಗುತ್ತಿಗೆ) – ಗುತ್ತಿಗೆ ಕೊಟ್ಟು ಹೋಯಿತು, ಸುತ್ತಿಗೆ ಮುಣುಗಿ ಹೋಯಿತು. [೩–೨೫೫೦]

೪೩. ಗೊಟ್ಟಕೆರೆ – ಕೆಟ್ಟವರಿಗೂ ಅಳಿದವರಿಗೂ ಗೊಟ್ಟಕೆರೆ ತವರುಮನೆ. [೩–೨೬೧೩]

೪೪. ಘೋರ – ಭಾರವಾದ ಪಾಪಕ್ಕೆ ಘೋರವಾದ ನರಕ. [೩–೨೭೦೩]

೪೫. ಚಮಗಾರ (ಸಮಗಾರ) – ಹಲವು ಸಮಗಾರರು ಕೂಡಿ ತೊಗಲೆಲ್ಲಾ ಪದ ಕೆಡಿಸಿದರು. [೩–೨೭೫೯]

೪೬. ಚನಿವಾರ (ಚನ್ನಿವಾರ) – ಚನ್ನಿವಾರನ ಮನೇ ನಾಯಿಯಾದರೆ, ನಾಣ್ಯದ ನೋಟಾ ಬಲ್ಲುದೆ? [೩–೨೮೪೧]

೪೭. ಚೇಷ್ಟೆ – ಕುಂಟನಿಗೆ ಎಂಟು ಚೇಷ್ಟೆ, ಕುರುಡನಿಗೆ ನಾನಾ ಚೇಷ್ಟೆ. [೩–೨೮೯೬]

೪೮. ಛಟ್ಟಿ (ಚಟ್ಟಿ) – ಚಟ್ಟಿದಿನ ಬಿಟ್ಟಿಗೂ ಹೋಗಬೇಡ. [೩–೨೯೨೩]

೪೯. ಜಟಿ – ಜಗಣಿಯುಪದ್ರಾ ನೋಡಲೋ? ಜಟಿಯ ಹಾವಳೀ ನೋಡಲೋ? [೩–೨೯೫೮]

೫೦. ಜವರಾಯ – ಸಾಯುವವನ ಕಣ್ಣಿಗೆ ಸುಳಿದವನೇ ಜವರಾಯ. [೩–೩೦೧೨]

೫೧. ಜಾಪಾಳದ ಮಾತ್ರೆ – ಜಾಪಾಳಮಾತ್ರೆ ವೈಕುಂಠ ಯಾತ್ರೆ. [೩–೩೦೪೦]

೫೨. ಜಿಗುಟಿ (ಜಗಳೆ) – ಜಗಳವಿಲ್ಲದೆ ಹೊತ್ತಿದ್ದರೆ ಜಿಗಳೆ ಬಂದು ಕಚ್ಚಿದ ಹಾಗೆ ಆಗುತ್ತದೆ. [೩–೩೦೫೬]

೫೩. ಟವಳಿಕಾಜಿ (ಟವಳಿಗಾರ) – ಟವಳಿಗಾರನ ಮೈಮೇಲೆ ಗವುಳಿ ಬಿತ್ತು. [೩-೩೧೪೬]

೫೪. ಠೇಂಕಾರ – ಠೇವಣಿ ಹೋದರೂ ಠೇಂಕಾರ ಹೋಗದು. [೩-೩೧೬೫]

೫೫. ಡೋಲು (ದೋಳು) – ದೋಳು ಬಡಿದು ಗೆರಸಿ ಮುಚ್ಚಿದ ಹಾಗೆ. [೩-೩೧೯೭]

೫೬. ತಂಬುಗೆ (ತಂಬಿಗೆ) – ಗಂಗೆಗೆ ಹೋದರೂ ತಂಬಿಗೆ ಮೇಲೆ ಜ್ಞಾನ. [೩-೩೨೧೫]

೫೭. ತತ್ವಾರ – ಹೆಸರು ಕ್ಷೀರಸಾಗರ ಭಟ್ಟ ಮನೆಯಲ್ಲಿ ಮಜ್ಜಿಗೆಗೆ ತತ್ವಾರ. [೩-೩೨೭೦]

೫೮. ತಪಾಸಗೇಡಿ – ತಪಾಸಗೇಡಿಯನ್ನು ಉಪವಾಸ ಇಟ್ಟರೆ ಉಟ್ರ (ಉಟ್ಟದ್ದು) ಕಳೆದುಕೊಂಡು ಊಟಕ್ಕೆ ಕುಳಿತನಂತೆ. [೩-೩೨೯೨]

೫೯. ತಲೆ ಬೋಳಿಸು – ಗ್ರಾಮಶಾಂತಿಗೆ ತಳವಾರ ತಲೆ ಬೋಳಿಸಿಕೊಂಡ. [೩-೩೩೪೬]

೬೦. ತಾಪಾಳುಮರ – ತಾಪಾಳು ಮರದ ಮೇಲೆ ಗೋಪಾಳದ ದಾಸಯ್ಯ ಕೂತಿದ್ದಾನೆ. [೩-೪೩೩೦]

೬೧. ತಿರಿ – ತಿರಿಕೊಂಡು ಉಂಡರೂ ಕರಕೊಂಡ ಉಣ್ಣು. [೪-೩೪೮೫]

೬೨. ತುಚ್ಛ – ತುಚ್ಛನ ಸಂಗಡ ಬಾಳೋದಕ್ಕಿಂತ ಹುಚ್ಚನ ಸಂಗಡ ಬಾಳೋದು ವಾಸಿ. [೪-೪೫೩೬]

೬೩. ಉತ್ತು – ಉತ್ತು ಬರುವ ಮಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ. [೪-೩೬೧೨]

೬೪. ತೊವ್ವೆ (ತೋವೆ) – ಮದುವೆ ಮನೇಲಿ ತೋವೆಗತ್ತರು ಗೌರಿಹಬ್ಬದಲ್ಲಿ ಕಾಯಿಗತ್ತರು. [೪-೩೭೫೫]

೬೫. ಥೈಲಿ – ಪೋಲಿಯವನ ಕೈಯಲ್ಲಿ ಥೈಲಿ ಕೊಟ್ಟರೆ ಖಾಲಿಯಾಗದೇ. [೪-೩೭೫೫]

೬೬. ದಟ್ಟಿ – ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ. [೪-೩೭೬೮]

೬೭. ದೀನನ ಸಂಗಕ್ಕಿಂತಲೂ ದಾನಿಯ ಬಡಿದಾಟ ಲೇಸು [೪-೩೮೬೬]

೬೮. ದಿಣ್ಣೆ (ದಿನ್ನೆ) – ದಿನ್ನೆ ಮೇಲೆ ಮಳೆ ಹೊಯ್ದರೆ ಹಳ್ಳಕ್ಕೇ ಬರುವುದು. [೪-೩೯೦೮]

೬೯. ದುಗ್ಗಾಣಿ – ದುಗ್ಗಾಣಿಯ ಮುಂಡೇ ಹತ್ತಿರ ದುಡ್ಡಿನ ದೋಸೆಗೆ ಹೋದ. [೪-೩೯೬೫]

೭೦. ಧೂಷಣೆ – ದೋಷ ಮಾಡುವವನಿಗೆ ಧೂಷಣೆ ತಪ್ಪದು. [೪-೪೦೨೫]

೭೧. ದೊಂಬ – ದೊಂಬನ ಸಾವು ಗಣೆಯ ಮೇಲೆ, ಬಿಲ್ಲವನ ಸಾವು ಮರದ ಮೇಲೆ. [೪-೪೧೯೩]

೭೨. ದೌಲತ್ತು (ದವಲತ್ತು) – ದವಲತ್ತೇನೆ ಬೂಬಿ ಅಂದರೆ ಶೇಕದಾರ ನನ್ನ ಅಳಿಯ ಅದ್ಲಂತೆ. [೪-೪೧೨೯]

೭೩. ಧರ್ಮ – ಕೆಟ್ಟು ನಂತರ ಸೇರಬೇಡ, ಕೊಟ್ಟ ಧರ್ಮ ತಿರುಗಿ ಕೇಳಬೇಡ. [೪–೪೯೯೩]

೭೪. ಧೋತ್ರ (ದೋತ್ರ) – ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ. [೪–೪೨೬೦]

೭೫. ನಕ್ಷತ್ರ – ನಕ್ಷತ್ರ ತಿಳಿದವನ ಸಾವು ಕ್ಷಣ ಹೊತ್ತಾದರೂ ನಿಂತೀತೇ. [೪–೪೨೯೧]

೭೬. ನಟ್ಟಡವಿ – ನಟ್ಟಡವಿಯಲ್ಲಿದ್ದು ಕಟ್ಟಿಗೆ ತರುವವರು ಯಾರು ಅಂದ ಹಾಗೆ. [೪–೪೩೧೫]

೭೭. ನತ್ತು – ನತ್ತಿಗೆ ಯೋಗ್ಯಳಾದವಳು ಮುತ್ತು ಬಯಸಿದ ಹಾಗೆ. [೪–೪೩೪೩]

೭೮. ನಮಾಜು – ನಮಾಜು ಮಾಡುವುದಕ್ಕೆ ಹೋದಾಗ ಮಸೀದಿ ಮೇಲೆ ಬಿತ್ತು. [೪–೪೩೫೯]

೭೯. ನವರಾತ್ರೆ – ನವಮಾಸ ತುಂಬಿದ ಮೇಲೆ ನವರಾತ್ರಿ ಆಗಲಿ ಅಂದರೆ ನಿಂತೀತೆ?
[೪–೪೪೧೧]

೮೦. ನಾಟು – ನೀರು ಕಡೆಗೆ ನಾಟಿದ ಮರ ಚಿಗುರದೆ ಬಿಟ್ಟೀತೆ? [೪–೪೪೪೪]

೮೧. ನಾಶ – ನಾಶ ಮಾಡುವವನು ದಾಸನಾದರೆ ಲೇಸು ಮಾಡಿಯಾನೆ? [೫–೪೫೨೬]

೮೨. ನಿಗಾ – ನಿಗಾ ಇಡದ ಹೊಲ ಹೊಗೆಯಾಗಿ ಹೋದೀತು. [೫–೪೫೫೩]

೮೩. ನಿರಾಕಾರ – ನಿರಾಕಾರವಾದದ್ದು ಪ್ರತ್ಯಕ್ಷವಾದರೆ ಆಕಾರವಾದದ್ದು ಕಾಣದೆ ಹೋದೀತು
[೫–೪೬೫೪]

೮೪. ನಿಲುವು (ನಿಲ್) – ನಿಲವಿಲ್ಲದೆ ಹಲದಿಂದ ಹೊಲದ ಉಕ್ಕೆ, ನಿಲ ನೋಡಿ ಸಂಸಾರ.
[೫–೪೭೧೮]

೮೫. ನೀಗು –ನೀಗುವವನಿಗೆ ಭಾಗ ಸಿಕ್ಕಿದರೂ ಭೋಗಕ್ಕೆ ಬಾರದು. [೫–೪೭೮೯]

೮೬. ನೆಟ್ಟಗೆ – ನೋಡ ನೆಟ್ಟಗಿದ್ದರೆ ಕಾಟ ಹ್ಯಾಗೆ ಬಂದೀತು? [೫–೪೮೮೯]

೮೭. ನೆರೆಮನೆ – ನೆರೆಮನೆ ಹೋಳಿಗೆಗೆ ತುಪ್ಪ ಕಾಯಿಸಿದ ಹಾಗೆ. [೫–೪೯೨೨]

೮೮. ನೇಮ – ನಾಮವಿಲ್ಲದ ಅರಸನಿಗೆ ನೇಮವಿಲ್ಲದ ಪ್ರಧಾನಿ [೫–೪೯೬೮]

೮೯. ಪಂಗು (ಹಂಗು) – ಲಿಂಗ ಹರಿದ ಮೇಲೆ ಜಂಗಮನ ಹಂಗೇನು? [೫–೫೦೨೪]

೯೦. ಪಂತ ಹಾಕು – ಪಂತ ಹಾಕಿದವರ ಹತ್ತಿರ ಶಾಂತವಾಗಿರಬೇಕು [೫–೫೦೬೨]

೯೧. ಪಟ್ಟು – ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಆದೀತೇ? [೫–೫೧೨೫]

೯೨. ಪತ್ತಿರ (ಹತ್ರ) – ಸೊಸೆಗೆ ಬುದ್ಧಿ ಹೇಳಿ, ಅತ್ತೆ ಅಗಸನ ಹತ್ರ ಹೋದಂತೆ [೫–೫೧೯೪]

೯೩. ಪದೇಪದೇ – ಪದೇಪದೇ ಹೇಳಿದರೂ ಸದೆ ಕೊಡಿಸೋದು ಬಿಡ [೫–೫೨೩೮]

೯೪. ಪರಕೆ (ಹರಿಕೆ) – ನರಕದಲ್ಲಿ ಬೀಳುವವನು ಹರಕೆ ಹೇಳಿದರೆ ತಪ್ಪೀತೆ? [೫–೫೨೬೭]

೯೫. ಪರಲೋಕ – ಪಾಪಿಗೆ ಪರಲೋಕ ಇಲ್ಲ, ಪಾಪೋಸಿಗೆ ಮಡಿಯಿಲ್ಲ [೫-೫೨೯೫]

೯೬. ಪರಿಸೆ – ಹತ್ತರ ಕೂಡ ಹನ್ನೊಂದು, ಪರಸೇ ಕೂಡ ಗೋವಿಂದ [೫-೫೩೭೧]

೯೭. ಪರಿಹಾರ– ಎಲ್ಲಾ ದೋಷ ಬೆಲ್ಲದಲ್ಲಿ ಪರಿಹಾರ [೫-೫೩೭೪]

೯೮. ಪರ್ಯಂತರ – ಹೊಳೆ ಪರ್ಯಂತರ ಓಟ, ದೊರೆ ಪರ್ಯಂತರ ದೂರು [೫-೫೩೯೧]

೯೯. ಪಲಗಾಲ (ಹಲಗಾಲ) – ಹಲಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಎಲೆ [೫-೫೪೦೧]

೧೦೦. ಪಸು (ಹಚ್ಚು) – ಹಚ್ಚಲಿಕ್ಕೆ ತಿಳಿಯದಿದ್ದರೆ ಮುಂಗೈ ಕಚ್ಚಿಕೊಂಡ ಹಾಗೆ [೫-೫೪೩೫]

೧೦೧. ಪಾಠ – ಪಾಡ್ಯ ಪಾಠಕ್ಕಾಗದು, ಮೌಢ್ಯ ಕೆಲಸಕ್ಕಾಗದು. [೬-೫೪೮೭]

೧೦೨. ಪಾರ್ವ (ಹಾರವ) – ಅಭ್ಯಾಸವಿಲ್ಲದ ಹಾರುವ ಅಗ್ನಿಕಾರ್ಯ ಮಾಡಿದರೆ ಗಡ್ಡ ಮೀಸೆ ಹೊತ್ತಿತು. [೬-೫೫೪೨]

೧೦೩. ಪಿಂಡು (ಹಿಂಡು) – ತುಂಡು ತುಂಡು ದೊರೆಗಳು ಕೂಡಿ ಹಿಂಡು ಹಿಂಡು ಸೈನ್ಯ ಕೂಡಿಸಿದರು. [೬-೫೫೯೩]

೧೦೪. ಪಿತ್ತ – ಪಿತ್ತ ತಲೆಗೇರಿದವನಿಗೆ ಶಂಖ ಕಪ್ಪಗೆ ಕಂಡರೆ ಅದರ ಬಣ್ಣ ಕೆಟ್ಟೀತೇ? [೬-೫೬೧೫]

೧೦೫. ಪುಚ್ಚ (ಹುಚ್ಚ) – ಅಪ್ಪ ಸತ್ತ ಆರು ತಿಂಗಳಿಗೆ ಹುಚ್ಚು ಮಾವ ಬಂದು ಕೊರಳು ಕಟ್ಟಿಕೊಂಡು ಅತ್ತ. [೬-೫೬೫೮]

೧೦೬. ಪುಳಿಚಾಱು (ಹುಳಿಸಾರು) – ಹುಳಿಸಾರು ಮಾಡದವ ನಳಪಾಕ ಮಾಡಿಯಾನೇ? [೬-೫೭೩೫]

೧೦೭. ಪೂಡು (ಹೂಡು) – ಫಲ ನೋಡದೆ ಕೆಟ್ಟಿತು, ಹೊಲ ಹೂಡದೆ ಕೆಟ್ಟಿತು [೬-೫೭೫೦]

೧೦೮. ಪೆಣ್ಮಗು (ಹೆಣ್ಣುಮಗು) – ಹೆಣ್ಣುಮಕ್ಕಳಿಗೆ ಹಾಡ ಕಾಲಿಸಿದವರಿಲ್ಲ, ನಾಯಿಗೆ ಬೊಗಳ ಕಲಿಸಿದವರಿಲ್ಲ. [೬-೫೮೦೬]

೧೦೯. ಪೇಡಿ (ಹೇಡಿ) – ಹೇಡಿ ಯುದ್ಧಕ್ಕೆ ಹೋಗ, ಖೋಡಿ ಕೆಲಸಕ್ಕೆ ಹೋಗ. [೬-೫೮೫೪]

೧೧೦. ಪೊಟ್ಟೆ (ಹೊಟ್ಟೆ) – ಹೊಟ್ಟೆಯೊಳಗಿನ ಕೂಸು ಹೊಟ್ಟೆಯೊಳಗಿರುವಾಗ ಪುಟ್ಟಪ್ಪ ಅಂತ ಹೆಸರಿಟ್ಟರು. [೬-೫೯೦೨]

೧೧೧. ಪೊದೆಯಿಸು (ಹೊದೆಯಿಸು) – ಹಚ್ಚಡ ಹೊದಿಸಿದರೆ ಹುಚ್ಚು ಹೋದೀತೇ? [೬–೫೯೨೫]

೧೧೨. ಪೋಟೆ (ಹೋಟೆ) – ಹೊರಗೆ ನೋಡಿದರೆ ಕೋಟೆ ಒಳಗೆ ನೋಡಿದರೆ ಹೋಟೆ. [೬–೫೯೯೪]

೧೧೩. ಪ್ರಪಂಚ – ಪ್ರಪಂಚ ಬಿಡುತ್ತೇನೆಂದು ಪಂಚಮಹಾಪಾಪ ಹೊಂದಿಕೊಂಡ. [೬–೬೦೭೧]

೧೧೪. ಪ್ರಾಣಸ್ನೇಹಿತ – ಪ್ರಾಣಸ್ನೇಹಿತನಾದರೂ ಮೀನಿನ ಬುಟ್ಟಿಗೆ ಕೈ ಹಾಕಬೇಡ. [೬–೬೧೨೦]

೧೧೫. ಬಂಗಾಲ (ಬಂಗಾಳ) – ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗಬಹುದು. [೬–೬೧೬೪]

೧೧೬. ಬಚ್ಚುಬಾಯಿ (ಬೊಚ್ಚುಬಾಯಿ) – ಬೊಚ್ಚುಬಾಯಿ ಆದವನು ಕಬ್ಬು ಬಯಸಿದ ಹಾಗೆ. [೬–೬೧೯೭]

೧೧೭. ಬಯ್ಯಿಸು (ಬಯ್ಸು) – ಬಯಕೆ ಕೊಟ್ಟರೂ ಬೈಸಿಕೊಂಬುದು ತಪ್ಪಲಿಲ್ಲ. [೬–೬೨೫೧]

೧೧೮. ಬಳೆಗಾಱ (ಬಳೆಗಾರ) – ಬಳೆಗಾರನ ಅಂಗಡೀಲಿ ಬಾಳೆಹಣ್ಣು ಸಿಕ್ಕೀತೇ? [೬–೬೩೩೩]

೧೧೯. ಬಾಯ್ (ಬಾಯಿ) – ಬಾಧೆ ಪಡುವ ಬಾಳಿಗಿಂತ ಬಕನ ಬಾಯಿಗೆ ಬೀಳೋದುತ್ತಮ [೬–೬೩೮೧]

೧೨೦. ಬಿಡಿಹೂ – ಬಿಡಿ ಹೂವಾದರೂ ಹುಡುಗಿ ಮುಡಿದುಕೊಳ್ಳಬಾರದೇ? [೬–೬೪೪೯]

೧೨೧. ಬೀಗ – ಪೆಟ್ಟಿಗೆ ಕದ್ದ ಕಳ್ಳ ಬೀಗದ ಕೆಯ್ಗೆ ಬಂದಾನೇ? [೭–೬೫೦೦]

೧೨೨. ಬೃಂದಾವನ – ಮಾಡೋದು ಅನಾಚಾರ, ಮನೇ ಮುಂದೆ ಬೃಂದಾವನ. [೭–೬೫೫೩]

೧೨೩. ಬೇಂಟೆನಾಯ್ (ಬೇಟೆನಾಯಿ) – ಬೇಟೆಯಾಡುವುದಕ್ಕೆ ಕಲಿತ ಮಲ್ಲ ಬೇಟೆನಾಯಿಯ ಟೊಂಕ ಮುರಿದ. [೭–೬೬೨೩]

೧೨೪. ಬೋನಗಿತ್ತಿ (ಬಾನಗಿತ್ತಿ) – ಭಲರೇ ಬಾನಗಿತ್ತಿಯೆಂದರೆ ಮೈಯೆಲ್ಲ ಮಸಿಮಾಡಿಕೊಂಡಳು. [೭–೬೬೬೬]

೧೨೫. ಭರಣಿ – ಭರಣಿಯಲ್ಲಿ ಹುಟ್ಟಿದವನು ಧರಣಿ ಆಳುವನು. [೭–೬೭೦೭]

೧೨೬. ಭೀಮ – ಭೀಮನಿಗೆ ಭಾನುವಾರವಾದರೇನು? ಭೌಮವಾರವಾದರೇನು? ಭೋಜನ ಸಿಕ್ಕರೆ ಸೈ. [೭–೬೭೫೬]

೧೨೭. ಮಂಕುದಿಣ್ಣೆ –ಮಂಕುದಿಣ್ಣೆ ಮದುವೆಗೆ ಹೋದರೆ ವಾಲಗದವರೆಲ್ಲಾ ಅಟ್ಟಾಡಿಸಿಕೊಂಡು ಹೊಡೆದರಂತೆ. [೭–೬೮೦೩]

೧೨೮. ಮಕ್ಕರಿ (ಮಂಕ್ರಿ) – ಗೌಡನ ಹೆಂಡತಿ ಕಡುಚೆಲ್ವಿಯಾದರೆ ಕಸದ ಮಂಕ್ರಿ ಹೊತ್ತು ತಂದಾಗ ಕಂಡೀತು. [೭–೬೮೪೩]

೧೨೯. ಮಧ್ಯಸ್ತ – ಮಧ್ಯಸ್ತ ಇಲ್ಲದ ಊರಲ್ಲಿ ಮಧ್ಯಾಹ್ನ ಇರಬಾರದು. [೭–೯೧೪]

೧೩೦. ಮರಸುತ್ತು (ಮಲಸುತ್ತು) – ಮೊಳೆ ಮಾಡಲಿಕ್ಕೆ ತಿಳಿಯದ ಕಮ್ಮಾರ ಮಲಸುತ್ತು ಮಾಡಿಯಾನೇ? [೭–೯೫೦]

೧೩೧. ಮಜೆ (ಮರೆ) – ತರತರವಾಗಿ ಹೇಳಿದ್ದು ಮರೆತರೆ ಮರಕ್ಕಿಂತ ಕಡೆ. [೭–೭೦೨೭]

೧೩೨. ಮಾತು (ಭಟ್ಟ ದಕ್ಷಿಣೆಗಾದರೆ ಮಾತು ಹಿಡಿದಾನು, ಮಂತ್ರಕ್ಕಾದರೆ ಬೆನ್ನು ತೋರಿಸ್ಯಾನು. [೭–೭೦೫೪]

೧೩೩. ಮಿರಿಳೆ (ಮುರುಳಿ)– ಎಳ್ಳಂತು ಬಿಸಿಲಿಗೆ ಒಣಗುತ್ತದೆ, ನೀನು ಯಾಕೆ ಒಣಗುತ್ತೀ ಮುರಳೀ ಬೀಜವೇ? [೭–೭೧೪೭]

೧೩೪. ಮುಡಿ – ತಡೆ ಕಟ್ಟುವವನ ಮುಂದೆ ಮುಡಿಯೇನು? [೭–೭೨೩೭]

೧೩೫. ಮೂಳನಾಯಿ – ಹೆಂಡತಿ ಹೆಗ್ಗಡತಿಯಾದರೆ ಗಂಡ ಮೂಳನಾಯಿಗಿಂತ ಕಡೆ. [೭–೭೩೫೧]

೧೩೬. ಮೇಕೆ – ನೂಕಿಸಿಕೊಂಡು ಹೋಗುವುದಕ್ಕಿಂತ ಮೇಕೆ ಕಾಯೋದು ಲೇಸು. [೭–೭೩೯೮]

೧೩೭. ಮೊಗ್ಗು – ಅಜ್ಜನ ಬುದ್ಧಿ ಮೊಗ್ಗಿನ ಹಾಗೆ, ಪ್ರಾಜ್ಞನ ಬುದ್ಧಿ ಫಲದ ಹಾಗೆ. [೭–೭೪೫೩]

೧೩೮. ಯತ್ನ – ಭಗೀರಥ ಯತ್ನ ಮಾಡಿ ಭಾಗೀರಥಿ ತಂದ, ನಗರದವ ಯತ್ನ ಮಾಡಿ ನಗ ಕಳಕೊಂಡ. [೭–೭೫೦೭]

೧೩೯. ರಾಗಿ – ರಾಮರಾಜ್ಯವಾದರೂ ರಾಗಿ ಬೀಸುವುದು ತಪ್ಪಲಿಲ್ಲ. [೭–೭೫೯೩]

೧೪೦. ಲಾಯ – ಅರಸನ ಕುದುರೆ ಲಾಯದಲ್ಲೇ ಮುಪ್ಪಾಯಿತು. [೭–೭೭೦೫]

೧೪೧. ವಾಣಿಜ – ರೇಣು ಮಾಣಿಕನಾದರೂ ವಾಣಿಜತನ ಬಿಟ್ಟಾನೇ? [೮–೭೮೩೫]

೧೪೨. ವಾಸಿ – ವಾಸಿ ಆಗದ ರೋಗಕ್ಕೆ ರಾಶಿಮದ್ದು ಮಾಡಿದರೂ ವ್ಯರ್ಥ. [೮–೭೮೬೨]

೧೪೩. ವೈಶ್ಯ – ವೈಶಾಖ ಮಾಸ ಬಂದರೂ ವೈಶ್ಯರ ಉಪದ್ರ ಬಿಡಲಿಲ್ಲ. [೮–೮೦೩೮]

೧೪೪. ವೈಷ್ಣವ – ಸ್ಮಾರ್ತರಿಗೆ ಸ್ವಾರ್ಥ ಹೆಚ್ಚು, ವೈಷ್ಣವರಿಗೆ ಉಷ್ಣ ಹೆಚ್ಚು. [೮–೮೦೩೯]

೧೪೫. ಶರಣ್ (ಶರಣು) – ತನ್ನ ಕಾಲಿಗೆ ತಾನೇ ಶರಣು ಮಾಡಿ ಹರಸಿಕೊಂಡ ಹಾಗೆ. [೮–೮೦೮೧]

೧೪೬.ಶ್ರಮೆ – ಭ್ರಮೆಯಿದ್ದವಗೆ ಶ್ರಮೆಯಿಲ್ಲ, ಶ್ರಮೆಯಿದ್ದವಗೆ ಭ್ರಮೆಯಿಲ್ಲ. [೮-೮೧೬೪]

೧೪೭.ಸಂಡಗೆ (ಸಂಡಿಗೆ) – ಮನೇ ತಿಂಬುವವನಿಗೆ ಕದ ಹಪ್ಪಳ ಸಂಡಿಗೆ. [೮-೮೨೨೨]

೧೪೮.ಸಂವರಿಸು(ಸವರಿಸು)– ತಿರಿಚನಾಪಳ್ಳಿಯಲ್ಲಿ ತಿರಿದುಂಬೋದಕ್ಕೆ ಇಲ್ಲಿಂದ ಕೆಯ್ ಸವರಿಸಬೇಕೇ? [೮-೮೨೬೨]

೧೪೯.ಸಟೆ – ಸಟೆ ನುಡಿಯುವವನಿಗೆ ಮಠದ ಪೂಜೆ ಯಾಕೆ. [೮-೮೩೯೨]

೧೫೦.ಸರದಾರ – ಸಾವಿರ ಕುದುರೆ ಸರದಾರ ಮನೆ ಹೆಂಡತಿಗೆ ಕಾಸ್ತಾರ. [೮-೮೩೭೪]

೧೫೧.ಸಲ್ (ಸಲ್ಲ) – ಇದ್ದೂರ ಸಲ್ಲ, ಕದ್ದು ಕೊಂಬವರ ನೆರೆ ಸಲ್ಲ. [೮-೮೪೦೩]

೧೫೨.ಸವುತೆಕಾಯಿ (ಸವತೆಕಾಯಿ) – ಸವತೆಕಾಯಿ ಕಹಿಯಾದರೆ ಸವತಿ ಏನು ಮಾಡುವಳು. [೮-೮೪೨೬]

೧೫೩.ಸಾಲ – ಸಾಲ ಕೇಳದೇ ಹೋಯಿತು, ಹೊಲ ನೋಡದೆ ಹೋಯಿತು. [೮-೮೪೯೬]

೧೫೪.ಸಿಲ್ಕಿಸು (ಸಿಕ್ಕಿಸು) – ಬೆಟ್ಟಕ್ಕೆ ಹೋಗುವವನ ಸೊಂಟದಲ್ಲಿ ಕುಡುಗೋಲು ಸಿಕ್ಕಿಸಿದ ಹಾಗೆ. [೮-೮೫೫೨]

೧೫೫.ಸೂಜಿ – ಬಂಗಾರದ ಸೂಜಿಯೆಂದು ಹಿಂಗದೆ ಕಣ್ಣು ಕುಕ್ಕಿಸಿಕೊಳ್ಳಬಹುದೇ? [೮-೮೬೪೯]

೧೫೬.ಹಂಪೆ – ಹಂಪೆಗೆ ಹೋಗುವುದಕ್ಕಿಂತ ತನ್ನ ಕೊಂಪೆಯಲ್ಲಿರುವುದು ವಾಸಿ. [೮-೮೭೭೮]

೧೫೭.ಹಣುಮಂತ – ಹಣುಮಂತರಾಯ ಹಗ್ಗ ತಿನ್ನುವಾಗ ಪೂಜಾರಿ ಶಾವಿಗೆ ಬೇಡಿದ. [೮-೮೮೧೧]

೧೫೮.ಹಸಿವೆ – ಹಸಿವೆಗೆ ಬಾಯ್ಸವಿ ಬೇಡ, ನಿದ್ದೆಗೆ ಹಾಸಿಗೆ ಬೇಡ. [೮-೮೮೫೭]

೧೫೯.ಹಾದಿನಡೆ – ವಾದಿಯ ಸಂಗಡ ವಾದಿಸಲು ಸಲ್ಲ, ಕುಂಟನ ಸಂಗಡ ಹಾದಿ ನಡೆಯಲು ಸಲ್ಲ. [೮-೮೮೭೨]

೧೬೦.ಹೊಟ್ಟೆಕಟ್ಟು – ಮೊಟ್ಟೆ ಕಟ್ಟಲಿಕ್ಕೆ ತಿಳಿಯದವ ಹೊಟ್ಟೆ ಕಟ್ಯಾನೇ? [೮-೮೯೮೨]

ಈ ನಿಘಂಟಿನಲ್ಲಿ ನೀಡಿರುವ ಗಾದೆಗಳು ಸಮುದಾಯದ ಭಾಷಿಕ ಚಟುವಟಿಕೆಗಳಾಗಿದ್ದು, ಕನ್ನಡ ಭಾಷಾ ಸಮುದಾಯದ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಜನಜೀವನದ ವಿವಿಧ ಅಂಶಗಳನ್ನೆಲ್ಲ ತನ್ನೊಳಗೆ ಹುದುಗಿಸಿಕೊಂಡು 'ಕಿರಿದರಲ್ಲಿ ಪಿರಿದರ್ಥ' ಎಂಬಂತೆ ಪದದ ಅರ್ಥವನ್ನು ಸರಿಯಾಗಿ ತಿಳಿಯುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಸುಮಾರು ೯೦೨೧ ಪುಟಗಳ ವಿಸ್ತಾರವನ್ನು ಹೊಂದಿರುವ ಕನ್ನಡ ನಿಘಂಟಿನಲ್ಲಿನ ಪದಗಳಿಗೆ ಪ್ರಯೋಗಗಳಾಗಿ ಗಾದೆಗಳನ್ನು ನೀಡಿರುವುದು ಭಾಷಾ ಬಳಕೆಯ ಮಾದರಿಯನ್ನು ಸೂಚಿಸುತ್ತದೆ. ಕನ್ನಡ ನಿಘಂಟಿನಲ್ಲಿ ಸಾವಿರಾರು ಗಾದೆಗಳಿದ್ದು, ಅವುಗಳ ವೈಶಿಷ್ಟ್ಯಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

ಈ ನಿಘಂಟಿನಲ್ಲಿ ನೀಡಿರುವ ಗಾದೆಗಳನ್ನು ಮೌಖಿಕ ಸಾಹಿತ್ಯ ಹಾಗೂ ಲಿಖಿತ ಸಾಹಿತ್ಯದ ಗಾದೆಗಳು ಎಂದು ಎರಡು ರೀತಿ ವರ್ಗೀಕರಿಸಬಹುದು. ಮೊದಲನೆಯದಾಗಿ ಇಲ್ಲಿನ ಕೆಲವು ಗಾದೆಗಳು ಜನಪದ ಸಾಹಿತ್ಯ-ಸಂಸ್ಕೃತಿಯಿಂದ ಬಂದವುಗಳು ಇವು ಜನರ ಅನುಭವದ ನುಡಿಮುತ್ತುಗಳಾಗಿದ್ದು, ಅವರ ಸಂಸ್ಕೃತಿಯ ಸಾಧನಗಳಾಗಿದ್ದು, ಅವರ ಆಚಾರ-ವಿಚಾರ, ನಂಬಿಕೆ, ಪದ್ಧತಿಗಳನ್ನು ತಿಳಿಸುತ್ತವೆ. ಎರಡನೆಯವು ಲಿಖಿತ ಅಥವಾ ಗ್ರಾಂಥಿಕ ಸಾಹಿತ್ಯದಲ್ಲಿ ಕವಿಗಳು, ಸಾಹಿತಿಗಳು ತಮ್ಮ ಅನುಭವದ ಅಭಿವ್ಯಕ್ತಿಯಾಗಿ ಬಳಸಿದ ಗಾದೆಗಳು ಇಲ್ಲಿ ಅಧಿಕವಾಗಿದ್ದು, ಪದಗಳ ಅರ್ಥವನ್ನು ಖಚಿತಪಡಿಸಿಕೊಳ್ಳುವ ಸಂದರ್ಭದಲ್ಲಿ ಇವುಗಳನ್ನು ಪೂರಕವಾಗಿ ನೀಡಲಾಗಿದೆ. ಈ ವೈಶಿಷ್ಟ್ಯವನ್ನು ಇಲ್ಲಿನ ಗಾದೆಗಳು ಹೊಂದಿರುವುದು ಈ ಅಧ್ಯಯನದಿಂದ ಕಂಡುಬಂದಿದೆ.

ಭಾಷೆಯ ಬೆಳವಣಿಗೆಗೆ ಗಾದೆಗಳು ಪೂರಕವಾಗಿದ್ದು ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕ ವಿಚಾರಗಳನ್ನು ಇವು ಒಳಗೊಂಡಿರುವುದು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಈ ನಿಘಂಟಿನಲ್ಲಿರುವ ಕೆಲವು ಗಾದೆಗಳು ಪದಗಳಂತೆ ವಾಚ್ಯಾರ್ಥವನ್ನು ನೀಡಿದರೆ, ಇನ್ನು ಕೆಲವು ವ್ಯಂಗ್ಯಾರ್ಥಗಳನ್ನು, ಅಲಂಕಾರಾರ್ಥಗಳನ್ನು ನೀಡಿರುವುದನ್ನು ಗಮನಿಸಬಹುದು.

ಕನ್ನಡ ನಿಘಂಟಿನಲ್ಲಿ ಸುಮಾರು ಮೂರು ಸಾವಿರಕ್ಕೂ ಹೆಚ್ಚು ಗಾದೆಗಳ ಉಲ್ಲೇಖವಿದ್ದು, ಪದಗಳ ಅರ್ಥಕ್ಕೆ, ಪದ ಸ್ಪಷ್ಟೀಕರಣದ ಸಂದರ್ಭದಲ್ಲಿ ಬಳಸಿರುವುದು ಕಂಡುಬರುತ್ತದೆ.

**೪.೩.೬. ಸಂಕ್ಷಿಪ್ತಗಳು**

ಕನ್ನಡ ನಿಘಂಟಿನಲ್ಲಿ 'ಸಂಕ್ಷಿಪ್ತ'ಗಳನ್ನು ಬಳಸಿದ್ದಾರೆ. ಇವುಗಳನ್ನು ನಿಘಂಟಿನ ಆರಂಭದಲ್ಲಿ ನೀಡಿರುವುದರಿಂದ ಇದನ್ನು ಬಳಸುವವರಿಗೆ ಸಹಾಯಕವಾಗುತ್ತದೆ. ಸಂಕ್ಷಿಪ್ತ ಎಂದರೆ 'ಸಂಗ್ರಹಗೊಳಿಸಿದ', 'ಅಡಕಗೊಳಿಸಿದ' ಎನ್ನುವ ಅರ್ಥಗಳಿವೆ. ಮೂಲರೂಪ ಒಂದೇ ಪದವಾಗಿದ್ದರೆ ಅದರ ಮೊದಲ ಒಂದು, ಎರಡು ಅಥವಾ ಮೂರು ಅಕ್ಷರಗಳನ್ನು ಬಳಸುವುದಕ್ಕೆ 'ಸಂಕ್ಷಿಪ್ತ' ಎಂದು ಕರೆಯುತ್ತೇವೆ. ವಿಷಯಾಂಶಗಳನ್ನು ಸಂಗ್ರಹಿಸಿ, ನೆನಪಿಟ್ಟುಕೊಳ್ಳಲು ನಿಘಂಟು ರಚನಾಕಾರರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ.

ಕನ್ನಡ ನಿಘಂಟಿನಲ್ಲಿ ಭಾಷೆ, ವ್ಯಾಕರಣ, ಶಾಸ್ತ್ರ, ಪ್ರದೇಶ, ಸಂಸ್ಥೆ, ವ್ಯಕ್ತಿ, ಧರ್ಮ, ಶಾಸನ, ಸಂಕೀರ್ಣ ವಿಷಯಗಳಿಗೆ ಸಂಬಂಧಿಸಿದ ಸಂಕ್ಷಿಪ್ತಗಳಿವೆ. ಈ ನಿಘಂಟಿನಲ್ಲಿ ದಾಖಲಿಸಲಾದ ಸಂಕ್ಷಿಪ್ತಗಳನ್ನು ಕೆಳಕಂಡಂತೆ ನೀಡಲಾಗಿದೆ.

| | |
|---|---|
| (ಅ). | ಅವ್ಯಯ |
| ಅಡಿಟಿ. | ಅಡಿಟಿಪ್ಪಣಿ |
| [ಅದ್ವೈತ] | ಅದ್ವೈತ ಸಿದ್ಧಾಂತ |
| ಅನು। | ಅನುವಾದಕ |

| | |
|---|---|
| ಅನ್ಯ. | ಅನ್ಯಭಾಷೀಯ |
| ಅನ್ಯದೇ. | ಅನ್ಯದೇಶ್ಯ |
| ಅರ. | ಅರಬ್ಬಿ ಭಾಷೆ |
| ಅರಿಕೆ. | ಅರಿಕೆ |
| [ಅಶಿಷ್ಟ] | ಅಶಿಷ್ಟ ಪ್ರಯೋಗ |
| [ಅಶ್ವಶಾ] | ಅಶ್ವಶಾಸ್ತ್ರ |
| (ಅಲಂ) | ಅಲಂಕಾರಿಕವಾಗಿ |
| ಇಂ. | ಇಂಗ್ಲಿಶ್ ಭಾಷೆ |
| (ಉಕ) | ಉತ್ತರ ಕರ್ನಾಟಕ |
| ಉಪ– | ಉಪಸರ್ಗ |
| ಉದಾ. | ಉದಾಹರಣೆ |
| (ಏಕ) | ಏಕವಚನ |
| ಒಗಟು | ಒಗಟು |
| ಒರಿ. | ಒರಿಯಾ |
| ಓರಿಇ. | ಓರಿಯಂಟಲ್ ರಿಸರ್ಚ್ ಇನ್‌ಸಿಟ್ಯೂಟ್ |
| ಓರಿಲೈ | ಗವರ್ನಮೆಂಟ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ |
| ಕ. | ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಣೆ<br>( ಉದಾ: ಚನ್ನವ.ಕ., ಬಸವ. ಕ., ಮಹಾದೇ. ಕ.) |
| (ಕರಾ) | ಕರಾವಳಿಯ ಪ್ರದೇಶ |
| [ಕಾಮಶಾ] | ಕಾಮಶಾಸ್ತ್ರ |
| [ಕಾವ್ಯಮೀ] | ಕಾವ್ಯಮೀಮಾಂಸೆ |
| ಕುಇ. | ಕುಇ ಭಾಷೆ |
| ಕುರುಖ್. | ಕುರುಖ್ ಭಾಷೆ |
| ಕುವಿ. | ಕುವಿ ಭಾಷೆ |
| ಕೃಶಾ | ಕೃತಕಶಾಸನ |
| ಕೊಡ. | ಕೊಡಗು ಭಾಷೆ |
| ಕೋತ. | ಕೋತ ಭಾಷೆ |

| | |
|---|---|
| ಕೊಲಾ. | ಕೊಲಾಮಿ ಭಾಷೆ |
| ಕೋಶ. | ಕೋಶ |
| (ಕ್ರಿ). | ಕ್ರಿಯಾವಾಚಕ |
| [ಕ್ರೈಸ್ತ] | ಕ್ರೈಸ್ತ ಧರ್ಮ |
| [ಗಜ] | ಗಜಶಾಸ್ತ್ರ |
| [ಗಣಿತ] | ಗಣಿತಶಾಸ್ತ್ರ |
| (ಗಾದೆ) | ಗಾದೆ |
| (ಗು). | ಗುಣವಾಚಕ |
| ಗುಜ. | ಗುಜರಾತಿಭಾಷೆ |
| ಗೊಂಡಿ. | ಗೊಂಡಿಭಾಷೆ |
| [ಗ್ರಂಥಸಂ] | ಗ್ರಂಥ ಸಂಪಾದನೆ |
| [ಚಿತ್ರಶಾ] | ಚಿತ್ರಶಾಸ್ತ್ರ |
| [ಛಂದ] | ಛಂದಸ್ಸು |
| [ಜೈನ] | ಜೈನಧರ್ಮ |
| ಜೋಗುಳ. | ಜೋಗುಳ |
| [ಜ್ಯೋತಿ] | ಜ್ಯೋತಿಶ್ಶಾಸ್ತ್ರ |
| ಟಿ. | ಟಿಪ್ಪಣಿ |
| ಟೀ. | ಟೀಕು (ಕೆ) |
| [ತಂತ್ರಶಾ] | ತಂತ್ರಶಾಸ್ತ್ರ |
| [ತತ್ವಶಾ] | ತತ್ತ್ವಶಾಸ್ತ್ರ |
| ತಮಿ. | ತಮಿಳು ಭಾಷೆ |
| [ತರ್ಕ] | ತರ್ಕಶಾಸ್ತ್ರ |
| ತುಳು. | ತುಳು ಭಾಷೆ |
| ತೆಲು. | ತೆಲುಗು ಭಾಷೆ |
| (ದಕ) | ದಕ್ಷಿಣ ಕರ್ನಾಟಕ (ಹಳೆಯ ಮೈಸೂರು) |
| ದೇ. | ಎಚ್. ದೇವೀರಪ್ಪನವರ ಸಂಪಾದಿತ ಕೃತಿ |
| ದೇ.ಶ | ದೇಶ್ಯ |

| | |
|---|---|
| ದೇಶೀ. | ದೇಶೀಯ |
| (ದ್ವಿರುಕ್ತಿ) | ದ್ವಿರುಕ್ತಿ |
| [ದ್ವೈತ] | ದ್ವೈತಸಿದ್ಧಾಂತ |
| (ನಪುಂ). | ನಪುಂಸಕಲಿಂಗ |
| (ನಾ). | ನಾಮವಾಚಕ |
| [ನಾಟ್ಯ] | ನಾಟ್ಯಶಾಸ್ತ್ರ |
| ನಾಯ್ಕಿ | ನಾಯ್ಕಿ ಭಾಷೆ |
| ನೇಪಾ. | ನೇಪಾಳಿ ಭಾಷೆ |
| ನೋ. | ನೋಡಿ |
| [ನ್ಯಾಯ] | ನ್ಯಾಯಶಾಸ್ತ್ರ |
| ಪ. | ಪಲ್ಲವಿ |
| ಪಂಜಾ. | ಪಂಜಾಬಿ ಭಾಷೆ |
| ಪರಾ. | ಪರಾಮರ್ಶಿಸಿ |
| ಪರಿ. | ಪರಿಶಿಷ್ಟ |
| ಪರ್ಜಿ | ಪರ್ಜಿ ಭಾಷೆ |
| [ಪಾಠಾಂ.] | ಪಾಠಾಂತರ |
| ಪಾರ. | ಪಾರಸಿ ಭಾಷೆ |
| ಪಾಲಿ. | ಪಾಲಿ ಭಾಷೆ |
| ಪೀ. | ಪೀಠಿಕೆ |
| ಪು. | ಪುಟ |
| (ಪುಂ) | ಪುಲ್ಲಿಂಗ |
| (ಪುಂಸ್ತ್ರೀ). | ಪುಲ್ಲಿಂಗ ಮತ್ತು ಸ್ತ್ರೀಲಿಂಗ |
| ಪೋರ್ಚ್ | ಪೋರ್ಚುಗೀಸ್ |
| (ಪ್ರ). | ಪ್ರತ್ಯಯ |
| ಪ್ರಯೋ. | ಪ್ರಯೋಗ |
| ಪ್ರಾ | ಪ್ರಾಕೃತ ಭಾಷೆ |
| (ಪ್ರಾದೇ.) | ಪ್ರಾದೇಶಿಕ |

| | |
|---|---|
| ಬ. | ಎಲ್. ಬಸವರಾಜು ಅವರ ಸಂಪಾದಿತ ಕೃತಿ |
| (ಬಹುವ) | ಬಹುವಚನ |
| [ಬೌದ್ಧ] | ಬೌದ್ಧಧರ್ಮ |
| ಬ್ರಾಹೂಈ. | ಬ್ರಾಹೂಈ ಭಾಷೆ |
| ಭವಿಕೃ. | ಭವಿಷ್ಯತ್ ಕೃದಂತ |
| [ಭಾಷಾಶಾ] | ಭಾಷಾಶಾಸ್ತ್ರ |
| [ಭೂಗೋಳ] | ಭೂಗೋಳಶಾಸ್ತ್ರ |
| (ಭೂತಕೃ) | ಭೂತಕೃದಂತ |
| (ಭೂತನ್ಯೂ) | ಭೂತನ್ಯೂನ |
| [ಭೌತವಿ] | ಭೌತವಿಜ್ಞಾನ |
| ಮರಾ. | ಮರಾಠಿ ಭಾಷೆ |
| ಮಲ. | ಮಲಯಾಳಂ ಭಾಷೆ |
| ಮಲ್ತೊ. | ಮಲ್ತೊಭಾಷೆ |
| ಮು. | ಮುನ್ನುಡಿ |
| [ಮುದ್ರಕ] | ಮುದ್ರಣ ಕಲೆ |
| ಮೂಲದ್ರಾ | ಮೂಲದ್ರಾವಿಡ |
| [ಯೋಗ] | ಯೋಗಶಾಸ್ತ್ರ |
| [ರಾಜನೀ] | ರಾಜನೀತಿ |
| [ರಾಜ್ಯಶಾ] | ರಾಜ್ಯಶಾಸ್ತ್ರ |
| (ರೂಢಿ) | ರೂಢಿ |
| [ರೇಖಾಗ] | ರೇಖಾಗಣಿತ |
| ವ. | ವಚನ |
| [ವಾಸ್ತು] | ವಾಸ್ತುಶಿಲ್ಪ |
| [ವಿಜ್ಞಾ] | ವಿಜ್ಞಾನ |
| [ವಿಶಿಷ್ಟಾ] | ವಿಶಿಷ್ಟಾದ್ವೈತ |
| [ವೀಶೈ] | ವೀರಶೈವ ಧರ್ಮ |
| ವೃತ್ತಿ. | ವೃತ್ತಿ |

| | |
|---|---|
| [ವೇದಾಂತ] | ವೇದಾಂತ |
| [ವೈದ್ಯಶಾ] | ವೈದ್ಯಶಾಸ್ತ್ರ |
| [ವ್ಯಾಕ] | ವ್ಯಾಕರಣ |
| ವ್ಯಾಖ್ಯಾ | ವ್ಯಾಖ್ಯಾನ |
| ಶತ. | ಶತಮಾನ |
| [ಶಿಲ್ಪಶಾ] | ಶಿಲ್ಪಶಾಸ್ತ್ರ |
| [ಶೈವ] | ಶೈವಧರ್ಮ |
| (ಸ). | ಸರ್ವನಾಮ |
| (ಸಪೂರೂ) | ಸಮಾಸದ ಪೂರ್ವರೂಪ |
| ಸಂ. | ಸಂಸ್ಕೃತ ಭಾಷೆ |
| ಸಂ.॥ | ಸಂಪಾದಕ, ಸಂಗ್ರಾಹಕ |
| [ಸಂಗೀತ] | ಸಂಗೀತಶಾಸ್ತ್ರ |
| [ಸಾಂಖ್ಯ] | ಸಾಂಖ್ಯಶಾಸ್ತ್ರ |
| [ಸಾಮುದ್ರಿ] | ಸಾಮುದ್ರಿಕ ಶಾಸ್ತ್ರ |
| ಸಿಂಧಿ. | ಸಿಂಧಿ ಭಾಷೆ |
| ಸು. | ಸುಮಾರು |
| ಸೂ | ಸೂಚನೆ |
| (ಸ್ತ್ರೀ) | ಸ್ತ್ರೀಲಿಂಗ |
| ಹ. | ಫ.ಗು.ಹಳಕಟ್ಟಿಯವರ ಸಂಪಾದಿತ ಕೃತಿ |
| ಹಿಂ. | ಹಿಂದಿ-ಹಿಂದೂಸ್ತಾನಿ-ಉರ್ದು |
| ಹೋ. | ಹೋಲಿಸಿ |
| (R) | Revised Edition |
| (S) | Supplement |

ಶಾಸನಗಳ ಸಂಕ್ಷಿಪ್ತಗಳು

| | |
|---|---|
| ಅರಕ | ಅರಕಲಗೂಡು |
| ಅರಸೀ | ಅರಸೀಕೆರೆ |
| ಆನೇಕ. | ಆನೇಕಲ್ |

| | |
|---|---|
| ಇಂಡಿ. | ಇಂಡಿ |
| ಉಡುಪಿ. | ಉಡುಪಿ |
| ಎಡತೊ. | ಎಡತೊರೆ |
| ಕೃಷ್ಣನ. | (ಕೃಷ್ಣರಾಜನಗರ) |
| ಕಡೂರು. | ಕಡೂರು |
| ಕಾನಕಾ. | ಕಾನಕಾನಹಳ್ಳಿ |
| ಕುಂದಾಪು. | ಕುಂದಾಪುರ |
| ಕುಣಿಗ. | ಕುಣಿಗಲ್ |
| ಕೃಷ್ಣರಾ. | ಕೃಷ್ಣರಾಜಪೇಟೆ |
| ಕೊಪ್ಪ. | ಕೊಪ್ಪ |
| ಕೋಲಾರ. | ಕೋಲಾರ |
| ಗುಂಡ್ಲುಪೇ. | ಗುಂಡ್ಲುಪೇಟೆ |
| ಗುಬ್ಬಿ. | ಗುಬ್ಬಿ |
| ಗೋರಿಬಿ. | ಗೋರಿಬಿದನೂರು |
| ಚನ್ನಗಿ. | ಚನ್ನಗಿರಿ |
| ಚನ್ನಪ. | ಚನ್ನಪಟ್ಟಣ |
| ಚನ್ನರಾ. | ಚನ್ನರಾಯಪಟ್ಟಣ |
| ಚಳ್ಳಕೆ. | ಚಳ್ಳಕೆರೆ |
| ಚಾಮರಾ. | ಚಾಮರಾಜನಗರ |
| ಚಿಂತಾಮ. | ಚಿಂತಾಮಣಿ |
| ಚಿಕ್ಕನಾ. | ಚಿಕ್ಕನಾಯಕನಹಳ್ಳಿ |
| ಚಿಕ್ಕಬ. | ಚಿಕ್ಕಬಳ್ಳಾಪುರ |
| ಚಿಕ್ಕಮ. | ಚಿಕ್ಕಮಗಳೂರು |
| ಚಿತ್ರದು. | ಚಿತ್ರದುರ್ಗ |
| ಜಗಳೂ. | ಜಗಳೂರು |
| ತರೀಕೆ. | ತರೀಕೆರೆ |
| ತಿಪಟೂ. | ತಿಪಟೂರು |

| | |
|---|---|
| ತಿರುಮ. | ತಿರುಮಕೂಡ್ಲು ನರಸೀಪುರ |
| ತೀರ್ಥಹ. | ತೀರ್ಥಹಳ್ಳಿ |
| ತುಮಕೂ. | ತುಮಕೂರು |
| ದಾವಣ. | ದಾವಣಗೆರೆ |
| ದೇವನ. | ದೇವನಹಳ್ಳಿ |
| ದೊಡ್ಡಬ. | ದೊಡ್ಡಬಳ್ಳಾಪುರ |
| ನಂಜನ. | ನಂಜನಗೂಡು |
| ನಗರ. | ನಗರ |
| ನಾಗಮಂ. | ನಾಗಮಂಗಲ |
| ನೆಲಮಂ. | ನೆಲಮಂಗಲ |
| ಪಾವುಗ. | ಪಾವುಗಡ |
| ಪುಂಗನೂ. | ಪುಂಗನೂರು |
| ಬಂಕಾಪು. | ಬಂಕಾಪುರ |
| ಬಾಗೆಪ. | ಬಾಗೇಪಲ್ಲಿ |
| ಬಾಗೇವಾ. | ಬಾಗೇವಾಡಿ |
| ಬೆಂಗಳೂ. | ಬೆಂಗಳೂರು |
| ಬೇಲೂರು. | ಬೇಲೂರು |
| ಬೌರಿಂಗ್. | ಬೌರಿಂಗ್‌ಪೇಟೆ |
| ಮಂಗಳೂ. | ಮಂಗಳೂರು |
| ಮಂಜರಾ. | ಮಂಜರಾಬಾದ್ |
| ಮಂಡ್ಯ | ಮಂಡ್ಯ |
| ಮದ್ದುಗಿ. | ಮದ್ದುಗಿರಿ |
| ಮಳವ. | ಮಳವಳ್ಳಿ |
| ಮಾಗಡಿ. | ಮಾಗಡಿ |
| ಮಾಲೂರು. | ಮಾಲೂರು |
| ಮುಳಬಾ. | ಮುಳಬಾಗಿಲು |
| ಮೂಡಗೆ. | ಮೂಡಗೆರೆ |

| | |
|---|---|
| ಮೈಸೂರು. | ಮೈಸೂರು |
| ಮೊಳಕಾ. | ಮೊಳಕಾಲ್ಮೂರು |
| ಲಕ್ಷ್ಮೇಶ್ವ. | ಲಕ್ಷ್ಮೇಶ್ವರ |
| ಶಿಕಾರಿ. | ಶಿಕಾರಿಪುರ |
| ಶಿಡ್ಲಘ. | ಶಿಡ್ಲಘಟ್ಟ |
| ಶಿರಾ. | ಶಿರಾ |
| ಶಿವಮೊ. | ಶಿವಮೊಗ್ಗ |
| ಶೃಂಗೇರಿ. | ಶೃಂಗೇರಿ |
| ಶ್ರೀನಿವಾ. | ಶ್ರೀನಿವಾಸಪುರ |
| ಶ್ರೀರಂಗ. | ಶ್ರೀರಂಗಪಟ್ಟಣ |
| ಸಾಗರ. | ಸಾಗರ |
| ಸೊರಬ. | ಸೊರಬ |
| ಹಾವೇರಿ. | ಹಾವೇರಿ |
| ಹಾಸನ. | ಹಾಸನ |
| ಹಿರಿಯೂ. | ಹಿರಿಯೂರು |
| ಹುಣಸೂ. | ಹುಣಸೂರು |
| ಹೆಗ್ಗಡ. | ಹೆಗ್ಗಡದೇವನಕೋಟೆ |
| ಹೊನ್ನಾಳಿ. | ಹೊನ್ನಾಳಿ |
| ಹೊಸಕೋ. | ಹೊಸಕೋಟೆ |
| ಹೊಳಲ್ಕೆ. | ಹೊಳಲ್ಕೆರೆ |
| ಹೊಳನ. | ಹೊಳೆನರಸೀಪುರ |

ಕನ್ನಡ ನಿಘಂಟಿನ ಎರಡನೆಯ ಸಂಪುಟದಲ್ಲಿ ನೀಡಿರುವ ಸಂಕ್ಷಿಪ್ತಗಳು

| | |
|---|---|
| –ಕ | ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಣೆ |
| | (ಉದಾ. ಚನ್ನವ.ಕ., ಬಸವ. ಕ., ಮಹಾದೇ. ಕ) |
| ಕೃಶಾ. | ಕೃತಕಶಾಸನ |
| ಟೀ. | ಟೀಕು(ಕೆ) |
| –ದೇ | ಎಚ್.ದೇವೀರಪ್ಪನವರ 'ಶರಣಚರಿತಮಾನಸ' |

| | |
|---|---|
| ಪೋರ್ಚ್. | ಪೋರ್ಚುಗೀಸ್ |
| ಪ್ರ | ಪ್ರಸ್ತಾವನೆ |
| -ಬ | ಡಾ. ಎಲ್. ಬಸವರಾಜು ಅವರ 'ಅಕ್ಕನ ವಚನಗಳು' |
| ಮೊ. | ಮೊದಲಮಾತು |
| ರ. | ರಗಳೆ |
| ರಾಣೆಬೆ. | ರಾಣೆಬೆನ್ನೂರು |
| ವ. | ವಚನ |
| ಸು. | ಸುಮಾರು |
| ಹಾನುಗ. | ಹಾನುಗಲ್ಲು |
| -ಹ. | ಫ.ಗು.ಹಳಕಟ್ಟಿಯವರ 'ಹರಿಹರನ ರಗಳೆಗಳು' |
| ( R ) | Revised Edition |
| <\| | Back Formation |

ಕನ್ನಡ ನಿಘಂಟಿನಲ್ಲಿರುವ ಸಂಕ್ಷಿಪ್ತಗಳನ್ನು ಎರಡು ಭಾಗಗಳಲ್ಲಿ ನೀಡಲಾಗಿದೆ. ಮೊದಲ ಭಾಗದಲ್ಲಿ ಭಾಷೆ, ವ್ಯಾಕರಣ, ಶಾಸ್ತ್ರ, ಪ್ರದೇಶ, ಸಂಸ್ಥೆ, ವ್ಯಕ್ತಿ, ಧರ್ಮ, ಶಾಸನ, ಸಂಕೀರ್ಣ ವಿಷಯಗಳಿಗೆ ಸಂಬಂಧಿಸಿದ ಸಂಕ್ಷಿಪ್ತಗಳಿದ್ದರೆ, ಎರಡನೇ ಭಾಗದಲ್ಲಿ ಶಾಸನಗಳು ದೊರೆತ ಊರಿನ ಹೆಸರನ್ನು ಸೂಚಿಸುವ ಹ್ರಸ್ವರೂಪಗಳಾಗಿವೆ.

ಕನ್ನಡ ನಿಘಂಟಿನಲ್ಲಿ ದಾಖಲಾದ ಸಂಕ್ಷಿಪ್ತಗಳ ವೈಶಿಷ್ಟ್ಯಗಳನ್ನು ಈ ಕೆಳಕಂಡಂತೆ ಗುರುತಿಸಬಹುದು.

೧. ಅಕ್ಷರಗಳ ಆಧಾರದ ಮೇಲೆ ಒಂದಕ್ಷರ, ಎರಡಕ್ಷರ, ಮೂರಕ್ಷರ ಎಂದು ಸಂಕ್ಷಿಪ್ತಗಳನ್ನು ಮೂರು ವಿಧಗಳನ್ನಾಗಿ ಮಾಡಬಹುದು. ಉದಾಹರಣೆಗೆ:

೧. ಒಂದು ಅಕ್ಷರ : (ಅ).ಅವ್ಯಯ ಇಂ. – ಇಂಗ್ಲಿಶ್ ಭಾಷೆ ಮೂರು ಅಥವಾ ಅದಕ್ಕಿಂತ ಕಡಿಮೆ ಅಕ್ಷರಗಳಿದ್ದಾಗ ಮೊದಲ ಅಕ್ಷರವನ್ನು ಮಾತ್ರ ಉಳಿಸಿಕೊಳ್ಳಲಾಗಿದೆ.

೨. ಎರಡು ಅಕ್ಷರ : ಉಪ– ಉಪಸರ್ಗ

ಎರಡು ಪದಗಳ ಮೊದಲ ಅಕ್ಷರಗಳು – ವೀಶೈ – ವೀರಶೈವ

ಮೂಲ ರೂಪದಲ್ಲಿ ಮೂರಕ್ಕಿಂತ ಹೆಚ್ಚು ಅಕ್ಷರಗಳಿದ್ದಾಗ ಮಾತ್ರ ಸಂಕ್ಷಿಪ್ತ ರೂಪದಲ್ಲಿ ಮೊದಲ ಎರಡು ಅಕ್ಷರಗಳನ್ನು ಉಳಿಸಿಕೊಳ್ಳಲಾಗಿದೆ.

೩. ಮೂರು ಅಕ್ಷರ: ಓರಿಇ. ಓರಿಯಂಟಲ್ ರಿಸರ್ಚ್ ಇನ್‌ಸಿಟ್ಯೂಟ್

ಎರಡು ಪದಗಳಲ್ಲಿ ಮೊದಲ ಪದದ ಎರಡು ಅಕ್ಷರ ಎರಡನೇ ಪದದ ಒಂದು ಅಕ್ಷರ ಉದಾ:

ಮುದ್ರಣ ಕಲೆ = ಮುದ್ರಕ

ಪದದ ಮೂರು ಅಕ್ಷರಗಳು ರಾಜ್ಯಶಾಸ್ತ್ರ – ರಾಜ್ಯಶಾ, ವೈದ್ಯಶಾಸ್ತ್ರ – ವೈದ್ಯಶಾ

ಮೂಲರೂಪದಲ್ಲಿ ಒಂದಕ್ಕಿಂತ ಹೆಚ್ಚು ಪದಗಳಿದ್ದಾಗ ಪ್ರತಿಪದದ ಮೊದಲ ಅಕ್ಷರಗಳನ್ನು ಸೇರಿಸಿ ಸಂಕ್ಷಿಪ್ತ ರೂಪವನ್ನು ರಚಿಸಲಾಗಿದೆ. ಮೊದಲ ಪದದ ಮೊದಲ ಎರಡು ಅಕ್ಷರಗಳು ಮತ್ತು ಎರಡನೇ ಪದದ ಮೊದಲ ಅಕ್ಷರಗಳನ್ನು ಸಂಕ್ಷೇಪಕ್ಕೆ ಉಪಯೋಗಿಸಲಾಗಿದೆ.

ಕನ್ನಡ ನಿಘಂಟಿನಲ್ಲಿ ಪದಗಳಿಗೆ ವಿವರವನ್ನು ನೀಡುವಾಗ ಸಂಕ್ಷಿಪ್ತಾಕ್ಷರಗಳನ್ನು ಬಳಸಿದ್ದಾರೆ. ಸಂಕ್ಷಿಪ್ತ ರೂಪದ ಕೊನೆಯಲ್ಲಿ ಮಾತ್ರ ಚುಕ್ಕಿಯನ್ನು ಬಳಸಲಾಗಿದ್ದು, ಇದರಿಂದ ಸಂಕ್ಷಿಪ್ತ ರೂಪವೆಂಬುದನ್ನು ಗುರುತಿಸಲು ಸಾಧ್ಯವಾಗುತ್ತದೆ. ಇದನ್ನು ಬಳಸುವಾಗ ಪದದ ಅರ್ಥವನ್ನು ಗ್ರಹಿಸಲು ಸಂಕ್ಷಿಪ್ತಗಳು ಸಹಕಾರಿಯಾಗಿವೆ. ಇದರಿಂದ ಆ ಪದದ ಮೂಲ, ಬಳಸಿದ ಕೃತಿ, ಶಾಸನ ಮೊದಲಾದ ವಿವರಗಳು ದೊರೆಯುತ್ತವೆ. ನಿಘಂಟು ಬಳಸುವವರಿಗೆ ಪದದ ಖಚಿತ ಅರ್ಥ ಸಿಗುತ್ತದೆ. ಸಂಕ್ಷಿಪ್ತಗಳು ಕನ್ನಡ ನಿಘಂಟಿನ ದಾಖಲಾದ ಪದಾರ್ಥಗಳ ಸರಿಯಾದ ಬಳಕೆಗೆ ಮತ್ತು ಗ್ರಹಿಕೆಗೆ ಸಹಕಾರಿಯಾಗಿವೆ.

**೪.೩.೭. ಸಂಕೇತಗಳು**

ಸಂಕೇತ ಎಂದರೆ 'ಸೂಚನೆ', 'ಸಂಜ್ಞೆ' , 'ಗುರುತು', 'ಚಿಹ್ನೆ' ಎನ್ನುವ ಅರ್ಥಗಳಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಎಂಟು ಸಂಪುಟಗಳ ಕನ್ನಡ ನಿಘಂಟನ್ನು ಬಳಸುವಾಗ ಅನುಕೂಲವಾಗಲು ಕೆಲವು ಸಂಕೇತಗಳನ್ನು ನೀಡಲಾಗಿದೆ. ಇದರಿಂದ ಸಂಕೇತಗಳಿಗನುಗುಣವಾಗಿ ಪದ, ಅರ್ಥ, ಪ್ರಯೋಗ, ನಿಷ್ಪತ್ತಿ, ಪಾಠಾಂತರ ಮೊದಲಾದ ಅಂಶಗಳು ಖಚಿತವಾಗಿ ತಿಳಿಯುತ್ತವೆ. ಇದರಲ್ಲಿ ದಾಖಲಿಸಲಾದ ಸಂಕೇತಗಳನ್ನು ಉದಾಹರಣೆ ಸಹಿತ ನೀಡಲಾಗಿದೆ.

**೧ . . . ಗ್ರಂಥಭಾಗವನ್ನು ಉದಾಹರಿಸುವಾಗ ನಡುವೆ ಕೆಲವು ಅಕ್ಷರಗಳನ್ನು ಬಿಡಲಾಗಿದೆ ಎಂದು ಸೂಚಿಸುತ್ತದೆ.**

ಉದಾ :

೧. ಶನಿ . . . ಸಿಂಹದೊಳ್ ಕೂಡಿದಂದನಪತ್ಯಂ (ಜಾತತಿ. ೧೭-೩೪) – [೧-೨೨೩]

೨. ದೇಶಿಯನೊದವಿಸಿ ನಡೆದತ್ತು ಬೇಂಟೆಗಾರರ ತಂಡಂ (ಸೂಕ್ತಿಸು.೩-೧೦೨) [೨-೨೨೨೧]

೩. ಉರಗಕಟಕಂ ನಂಬಿಯಣ್ಣಂಗೊರೆದು ಭಕ್ತರ ಮಹಿಮೆಯಂ ಭಕ್ತರ ಘನತ್ವವನು . . ವಿಸ್ತರಿಸಿ (ಬಸಪು. ೨೬-೬೪) [೩-೨೬೮೫]

೪. ಮುಂದೆ ಸಾಗುವಾಗ ಅವಳ ಎಡತೋಳು . . . ಚುರುಕಾಗಿ ತೂಗಾಡುತ್ತಿತ್ತು (ಪುನರು. ೨೫೭) [೪-೩೫೮೧]

೫. ನಿಯುಕ್ತ (ಗು). ೧. (ಒಂದು ಕೆಲಸದಲ್ಲಿ) ನೇಮಕ ಮಾಡಿರುವ: ದುರ್ವಾರಸಂಸಾರ ವಿಚ್ಛೇದೋಪಾಯನಿಯುಕ್ತ ಸೂಕ್ತಿ ವೃಷಮಾರ್ಗಾಗ್ರೇಸರಂ. . .ದಯೆಗೆಯ್ವನಕ್ಕೆಮಗೆ [೫-೪೬೩೯]

೬. ಪಾರಿಜಾತ (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಕನಕಧ್ವಜನೆಂಬ ದೇವಂ. . . ನಮೇರು ಮಂದಾರ [೬-೫೫೩೪]

೭. ಮಕ್ಷಿ (ನಾ). ನೊಣ : ದ್ವಿತ್ವದ ಚಕಾರಕ್ಕೆ . . . ಮಕ್ಷಿ [೭-೬೮೪೪]

೮. ವಿಹಾಯ(ನಾ). ೧. ಆಕಾಶ; ಗಗನ : "ವಿಹಾಯಃ. . . ವಿಹಾಯಸಃ, ಗಗನಂ, ದ್ಯು: [೮-೭೯೮೦]

**೨. XXX ಪ್ರಯೋಗದಲ್ಲಿ ಗ್ರಂಥಪಾತವಾಗಿರುವುದನ್ನು ಸೂಚಿಸುತ್ತದೆ.**

ಉದಾ :

೧. ಎಡೆದಿಂಡೆ (ನಾ). ಒಂದು ಪ್ರದೇಶದ ಹೆಸರು : xxx ಟುಗರೆ ವಿಷಯೇ ಎಡೆದಿಂಡೆ ಸಪ್ತತಿ ಪ್ರತಿಬದ್ಧಃ [೧-೧೦೬೦]

೨. ಕಲ್ಸಐಡು(ನಾ). ಕಲ್ಲಿನ ಬಂಡೆಗಳ ಸಾಲು, – ಪಂಕ್ತಿ; xxx ಡ್ಡೆಯ ಕಲ್ಸಐಡು ಅಲ್ಲಿ ಬದಕೆರೆಯ [೨-೧೬೧೫]

೩. ಜಂಬಿಟ್ಟಗೆ, ಜಂಬಿಟ್ಟಿಕೆ, ಜಂಬಿಟ್ಟಿಗೆ, ಜಮ್ಮಿಟ್ಟಿಗೆ (ನಾ). ಗಟ್ಟಿಯಾದ ಕೆಂಪುಮಣ್ಣಿನ ನೆಲದಿಂದ ಅಗೆದು ತೆಗೆಯುವ ಇಟ್ಟಿಗೆ: ಕಟ್ಟೆ ಕಳಲ್ದು ಭಿತ್ತಿಯರೆ ಬಿರ್ದು [* * *] ಸಡಿಲ್ದುದಿರ್ದ ಜಂಬಿಟ್ಟಗೆ ಕಂಬವೊರ್ಗುಡಿಸಿ ನೆಟ್ಟನೆ ಬಿರ್ದಪುದು (ನಳಚಂ. ೫೩೫). [೩-೨೯೪೨]

೪. ದೀಪಧ್ವಜ (ನಾ). ದೀಪದ ಕಂಬ: ಕೋ[ಟೆ]ಯ ದೀಪಧ್ವಜ [ತಾಂ]ಸೀಗರಿದಾರಿಸುವೆ * * * [ಜ]ಗದೇಕದೀಪಂ[ಸೌಇಇ. XX ೩೧-೮; ೧೦೪೪) [೪-೩೯೪೩]

೫. ನಿಲ್ಕೆ, ನಿಲಿಕೆ, ನಿಲಿಗೆ, ನಿಲ್ಗೆ (ನಾ). ೧.ನಿಲ್ಲುವಿಕೆ; ನೆಲೆಗೊಳ್ಳುವಿಕೆ; ೨. ಶಾಶ್ವತವಾದುದು: ಬಾಗ್ಯತ xxx ರುಗೂಡಿ ನಿಲಿಸಿದ ನಿಲಿಕೆಯ ಧರ್ಮ್ಮಕಾವನಾರ್ಬ್ಬನರಸು [೫-೪೭೨೨]

೬. ಪುಲ್ವಕ್ಕಿ, ಪುಲ್ವಕಿ (ನಾ). ಒಂದು ಪ್ರದೇಶದ ಹೆಸರು: ಪುಲ್ವಕಿನಾಡುಸಾಸಿರಮು ಬೆಪೋದು ಸಾಸಿರಮು xxx ನಾಡಱುವತ್ತುಮಾನಾಳುತ್ತಿರೆ [೬-೫೭೨೧]

೭. ಮಂಗಲಬೀವಣ್ಣ (ನಾ). ಒಬ್ಬಾತನ ಹೆಸರು : ನಾಗದೇವನೆಮ್ಬೋನು xxx ಕದಮ್ಬೂರ್ [೭-೬೮೦೮]

೮. ಸರದ್ಳಿ (ನಾ). ೧. ಒಂದು ಬಗೆಯ ತೆರಿಗೆ(?): xxx ಬೆಳ್ಳಿಯ ದೇವರ ಸರತಿಯ ಮಠಂ [೮-೮೩೭೫]

೩. ? ಸಂಪಾದಕೀಯ ಸಂದೇಹವನ್ನು ಸೂಚಿಸುತ್ತದೆ.

ಉದಾ :

೧. ಅಂಕಚೇಯ, ಅಂಕಚೇಯ (ನಾ). ಯುದ್ಧವೀರ (?) [೧-೦೩]

೨. ಅಂಡ್ಣಿ (ನಾ). ಹತ್ತಿರ, ಸಮೀಪ (?) [೧-೨೭]

೩. ಇಂಡೆಯಾಡು (ಕ್ರಿ). (ಹೂವಿನ ದಂಡೆಯನ್ನು) ತೂರಾಡು; ಎಸೆದಾಡು; ಎಸೆದಾಡಿ ವಿನೋದಿಸು (?) [೧-೭೨೮]

೪. ಕಂಡಸಕ್ಕರ್ (ನಾ). ಒಂದು ಮನೆತನದ ಅಥವಾ ಒಬ್ಬಾತನ ಹೆಸರು (?) [೨-೧೩೪೦]

೫. ಕಂಡಿಕೆವಣ (ನಾ). ಒಂದು ಬಗೆಯ ತೆರಿಗೆ (?) [೨-೧೩೪೧]

೬. ಗುಂಕಿಸು (ಕ್ರಿ). ಸೆಳೆ; ಎಳೆ; ಜಗ್ಗು (?) [೩-೨೫೧೪]

೭. ಗುರ್ಗುದ (ನಾ). (?) : ನಾಲ್ಕರೊಳು ವ್ಯಾಧಿ ಪೀಡಾಕಾರ ದಾರಿದ್ರ ಗುರ್ಗುದ ಮೂರರಲ್ಲಿ ಬೀಳಲು ಮರಣಾ (ಮನೆಲ. ೧೭-೧). [?] [೩-೨೫೬೯]

೮. ತುರೀರ (ನಾ). (?) [೪-೩೫೫೫]

೯. ನಿಗತಂದಿವಿ (ಕ್ರಿ). (?) [೫-೪೫೪೯]

೧೦. ಪಾಲ್ಗೊಂಬ (ನಾ). (?) [೬-೫೫೫೪]

೧೧. ಬೆಂಬೊಳಲೆ (ನಾ). (?) [<ಬಿಸಿದು)+ಪೊಳಲೆ?] [೭-೬೫೬೨]

೧೨. ಸರಾಜಾನ (ನಾ).ಒಂದು ಬಗೆಯ ಉತ್ತಮವಾದ ಭತ್ರ [೮-೮೩೮೩]

ಪದಗಳ ಅರ್ಥವನ್ನು ಹೇಳುವಾಗ ಶಾಸನ, ಕೃತಿಗಳಲ್ಲಿ ದಾಖಲಾದ ಪದಗಳನ್ನು ನಮೂದಿಸುವಾಗ, ಪದಗಳಿಗೆ ಅರ್ಥ ಸಂದಿಗ್ಧತೆ ಇದ್ದಾಗ, ಪ್ರಯೋಗಗಳು ಸರಿಯಿಲ್ಲದಿರುವ ಸಂದರ್ಭದಲ್ಲಿ, ಶಾಸನ, ಕೃತಿಗಳ ಕಾಲ ನಿರ್ಧರಿತವಾಗದಿದ್ದಾಗ ಸಂಪಾದಕ ಮಂಡಳಿಯ ಸಂದೇಹವನ್ನು ಪ್ರಶ್ನಾರ್ಥಕ ಚಿಹ್ನೆ ಸ್ಪಷ್ಟಪಡಿಸುವುದರಿಂದ ನಿಘಂಟು ಬಳಸುವವರಿಗೆ ಸರಿಯಾದ ಮಾಹಿತಿ ಸಿಗುತ್ತದೆ.

೪.  E ∃ ಸಂಪಾದಕೀಯವಾಗಿ ಮಾರ್ಪಡಿಸಿರುವ ಅಥವಾ ಸೇರಿಸಿರುವ ಅಕ್ಷರಗಳನ್ನು, ಅರ್ಥವಿವರಣೆ ಇತ್ಯಾದಿಗಳನ್ನು ಈ ಚಿಹ್ನೆಗಳ ನಡುವೆ ಕೊಡಲಾಗಿದೆ.

ಉದಾ :-

೧. ಎಳವಾಳೆಗಳ್ (ನಾ). ಎಳೆಯ ಬಾಳೆಯ ಮೀನಿನಂತಿರುವ ಕಣ್ಣು: ತEತೊ ∃ಳಪಗಣ್ಣೆಳವಾಳೆಗಣ್ಣ [೧-೧೧೨೨]

೨. ಕಿರ್ರಿ (ಕ್ರಿ). ಹಲ್ಲುಕಿಸಿ, – ತೆರೆ: ಪುರ್ಬಿಕ್ಕಿ ಪಲ್ಗಳಂ ಕಿಜಿEರಿ∃ದು (ದಶಕು.೨-೮೭); [೨-೧೮೧೪]

೩. ತಗಬೊಗರಿ (ನಾ). ಚಿನ್ನದ ಬುಗುರಿ; ಪೊಂಬುಗುರಿ: Eತೆ ∃ ತ ಗಬೊಗರಿಗಳವಱಿಂ [೩-೩೨೨೪]

೪. ತುಮುಳ್ (ನಾ). ದೊಂಬಿಯುದ್ಧ(?) : ತುಮುಳ್Eಳೆ ∃ [೪-೩೫೫೦]

೫. ನಾರಾಚಚೂರ್ಣ (ನಾ). ಒಂದು ಬಗೆಯ ಔಷಧದ್ರವ್ಯ : ನಾರಾಚುEಚ ∃ ಚೂರ್ಣ [೫-೪೫೦೮]

೬. ಪೊಂಗಂಟೆ, ಹೊಂಗಂಟೆ (ನಾ). ಚಿನ್ನದ ಗಂಟೆ: ಪೊಂಗಟ್ಟೆEಂಟೆ∃ ಗಳ ಮೇಳದಿಂ [೬-೫೮೭೧]

೭. ಮಿಳ್ಳಿಸು, ಮಿಣ್ಣಿಸು (ಕ್ರಿ). ೧. ಅತ್ತಿತ್ತ ಅಲುಗಾಡು; ಹೊಯ್ದಾಡು;ಮಿಣ್ಣಿಸು : ೧. ಮಿಣ್ಣಿಸಿ ಕುಚ ಗುರುಜಘನದಿಂ ನಡು ಬಳೆEಟ್ಕೆ∃ ಬಣ್ಣದುಟಗಳಲುಗುತಿರೆ [೭-೭೧೫೫]

೮. ಸಾರಬೀದಿ (ನಾ). ಸಂಪದ್ಭರಿತವಾದ ಬೀದಿ: ಬಸದಿವರೆಗ< [ದ್ರ]ಮ್ಮಮುಂ ಪೊನ್ನುಂ ಸಾರಬೀದಿಯಾಗಿEಗೆ∃ ಯುಮುಗುತ್ತಂ [೮-೮೪೮೫]

೫. ℙ ಈ ಚಿಹ್ನೆಯ ಮುಂದೆ ವಿಶೇಷಾಂಶಗಳನ್ನು ಕೊಡಲಾಗಿದೆ.

ಉದಾ :-

೧. ಅಂಕ್ಕೆ (ನಾ). ೧. ಕೊಕ್ಕೆ. ೨. ಡೊಂಕಾಗಿ ಬಾಗಿರುವ ಆಯುಧ; ಅಂಕುಶ [ಸಂ.? ℙ 'ಶಬ್ದಮಣಿದರ್ಪಣದ ಮೇರೆಗೆ "ತತ್ಸಮ" ಶಬ್ದಗಳಲ್ಲಿ ಒಂದು (ಶಮದ.೨೯೭, ೨೯೮) [೧-೦೩]

೨. ಕಟಾಟಂಕ (ನಾ). ಅಗ್ನಿ (?) ℙ ಈ ಶಬ್ದ 'ಕಟಂಕಟ (=ಅಗ್ನಿ)' ಎಂಬುದರ ಅಪಲಿಖಿತವಿರಬಹುದು [೨-೧೩೭೮]

೩. ಕಯ್ಯಗುಳಿಗೆ, ಕಯಿರಗುಳಿಗೆ, ಕೈರಗುಳಿಗೆ, (ನಾ). ಒಂದು ಸುಗಂಧ ಮಾತ್ರೆ ℙ ಕಾಚಿನ ಕಷಾಯದಲ್ಲಿ ಶ್ರೀಗಂಧ, ಅಗಿಲು, ರೇಣುಕ ಮೊದಲಾದ ಪರಿಮಳದ ವಸ್ತುಗಳನ್ನು ಅರೆದು, ಸಹಕಾರ ತೈಲವೆಂಬ ಸುಗಂಧದೆಣ್ಣೆಯಲ್ಲಿ ಕಲಸಿಕೊಂಡು ಮಾಡುವ ಗುಳಿಗೆ. [೨-೧೫೨೬]

೪. ಚಗಳಿಸು (ಕ್ರಿ) (ಉಕ) (ತುತ್ತನ್ನು) ಅಗಿ; ಚರ್ವಣ ಮಾಡು: [ಚಗಳಿ (ℙ <- ಮರಾ.ಚಘಳಣೇ)+_ ಇಸು] [೩-೨೭೩೩]

೫. ಚುಂಚ್ಚು (ಗು). ೧. ಹೆಸರುವಾಸಿಯಾದ; ಪ್ರಖ್ಯಾತವಾದ. 'ಅಕ್ಷರಚುಂಚು' ಪರಾ. ℙಇದು ಸಂಸ್ಕೃತದ ಒಂದು ಪ್ರತ್ಯಯ. ಪೂರ್ವ ಪದದೊಡನೆ ಸೇರಿದಾಗ ಮಾತ್ರ ಬರುತ್ತದೆ. [೩-೨೮೬೧]

೬. ತೀರಿ (ನಾ) ೧. ಅಂಬು; ಸರಳು, ಬಾಣ: ℙ ಮಂಗರಾಜನು 'ಬಾಣ' ಎಂಬುದಕ್ಕೆ 'ಬಿಲ್ಲು' ಎಂದು ಹೇಳಿರುವಂತೆ ಕಾಣುತ್ತದೆ [ಸಂ.] [೪-೩೫೧೮]

೭. ತುರುಕಾಣ್ಯ (ನಾ). ತುರುಕುರ ದೇಶ; ಮುಸಲ್ಮಾನರ ದೇಶ: ℙ ಸಂಸ್ಕೃತದ 'ಆಜ್ಞಾ' ಶಬ್ದದಿಂದ ಬಹುಶಃ ವ್ಯುತ್ಪನ್ನವಾದ 'ಆಣೆಯ' ಎಂಬ ಶಬ್ದದೊಡಗೂಡಿ ಕನ್ನಡದಲ್ಲಿ ತಿಗುಳಾಣ್ಯ, ತುರುಕಾಣ್ಯ, ತೆಲುಗಾಣೆಯ ಮುಂತಾದ ಪದಗಳು ರೂಪುಗೊಂಡಿರಬಹುದೆ? [೪-೩೫೫೬]

೮. ಪಕ್ಕಳಿಸು (ಕ್ರಿ). ಚಿತ್ರದಲ್ಲಿ ಪಕಳೆಗಳನ್ನು ನಿರ್ಮಿಸು, -ರೇಕುಗಳನ್ನು ಬಿಡಿಸು: ℙ ಇದು ಛಂದಸ್ಸಿಗಾಗಿ ಮಾಡಿಕೊಂಡು ರೂಪ [೫-೫೦೭೪]

೯. ಪುಲ್ಲುಂಗೂರ್ (ನಾ). ಒಂದು ಊರಿನ ಹೆಸರು ; ℙ ಇದು ಧಾರವಾಡ ಜಿಲ್ಲೆಯ ಈಗಿನ ಹುಲಗೂರು; [೬-೫೭೨೦]

೧೦. ಬೆಳ್ಕು ಬಳುಂಕು, ಬಳುಕ್ಕು , ಬಳ್ಕು (ಕ್ರಿ). ೧. ಅಂಜು, ; ಹೆದರು. ℙ 'ಬೆಳ್ಕು' ಎಂಬುದಕ್ಕೆ ಕ್ರಿಯಾರ್ಥದಲ್ಲಿ ಕನ್ನಡದ ಪ್ರಯೋಗ ಸಿಕ್ಕಿರುವುದಿಲ್ಲ. [೭-೬೬೦೪]

೧೧. ವಿಗತಾಹಾರತ್ವ (ನಾ). [ಜೈನ] ಆಹಾರ ಸೇವನೆ ಮಾಡದಿರುವಿಕೆ; ನಿರಾಹಾರದಿಂದಿರುವುದು; ℙ ಕೇವಲ ಜ್ಞಾನ ಉತ್ಪತ್ತಿಯಾದಾಗ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು [೮-೭೮೭೮]

**೬. 0 ಈ ಚಿಹ್ನೆ ಒಂದು ಶಬ್ದದ ಕೆಳಪಕ್ಕದಲ್ಲಿ ಇದ್ದರೆ, ಆ ಶಬ್ದವನ್ನು ಈ ನಿಘಂಟಿನಲ್ಲಿ ವಿಶೇಷಕಾರಣಗಳಿಗಾಗಿ ಪ್ರತಿಪಾದಿಸಿಲ್ಲವೆಂದು ಸೂಚಿಸುತ್ತದೆ. ಉದಾಹರಣೆಗೆ 'ಅಂಕದುವರ' ಶಬ್ದದ ಕೆಳಗೆ ದುವರ್ಂ ನೋಡಿ.**

೧. ಅಮಾನಸಭೆ (ನಾ). ಶಾಂತಿಸಭೆ [ಅಮಾನ್ಂ ℙ < ಅರ. ಅಮನ್ = ಶಾಂತಿ+ಸಭೆ] [೧-೩೪೫]

೨. ಗಸಬಸನೆ (ಅ). ಬೇಗನೆ; ಆತುರದಿಂದ ಕೂಡಿ: [ಗಸಬಸ್ಂ + -ಅನ್ಗ] [೨-೨೪೫೬]

೩. ಜಪ್ಪೆನ್ನು (ಕ್ರಿ). ೧. ಜಪ್ಪಯ್ಯ ಅನ್ನು; ಒತ್ತಾಯಮಾಡು: [ಜಪ್ಂ +ಎನ್ನು(<ಎನ್ಂ)][೩-೨೯೮೭]

೪. ತುರುಕಾಣ್ಯ (ನಾ) ತುರುಕರ ದೇಶ; ಮುಸಲ್ಮಾನರ ದೇಶ: [ತುರುಕ+ಆಣ್ಯಂ ( ℙ <- ತೆಲು. ಆಣೆ = ದೇಶ)] [೪-೩೫೫೬]

೫. ಪಕ್ಕಳಿಸು (ಕ್ರಿ). ಚಿತ್ರದಲ್ಲಿ ಪಕಳೆಗಳನ್ನು ನಿರ್ಮಿಸು, -ರೇಕುಗಳನ್ನು ಬಿಡಿಸು: [ಪಕ್ಕಳ್ೆ+(ಪಕಳೆ)+-ಇಸ್ಸು] [೫-೫೦೭೪]

೬. ಪುದಳ್‌ನಾಡು (ನಾ). ಒಂದು ಸ್ಥಳದ ಹೆಸರು: [ಪುದಳ್+ನಾಡು] [೬-೫೬೭೯]

೭. ಭಜ್ಜಿಸು, (ಕ್ರಿ). ೧. ಕಾಳು ಮೊದಲಾದುವನ್ನು ಹುರಿ. [ಭಜ್ಜನ್( <- ಪ್ರಾ, ಭಜ್ಜಣ. /ಭರ್ಜನ)+-ಇಸ್ಸು] [೭-೬೬೯೭]

೮. ಸಂವಚಿಸು (ಕ್ರಿ). ಮಾತನಾಡು; ಸಂಭಾಷಿಸು: [ಸಂವಚನ್+-ಇಸ್ಸು] [೮-೮೨೬೧]

೭. > ಒಂದು ರೂಪದಿಂದ ಮತ್ತೊಂದು ನಿಷ್ಪನ್ನವಾಗಿದೆ ಎಂಬುದನ್ನು ಸೂಚಿಸುತ್ತದೆ.

ಉದಾ :- ೧.

೮. < ಒಂದು ರೂಪ ಮತ್ತೊಂದರಿಂದ ನಿಷ್ಪನ್ನವಾಗಿದೆ ಎಂಬುದನ್ನು ಸೂಚಿಸುತ್ತದೆ ಮತ್ತು ಒಂದು ಶಬ್ದದ ರೂಪವನ್ನು ಮತ್ತೊಂದು ಮುಖ್ಯ ಶಬ್ದದ ರೂಪದ ಕೆಳಗೆ ವಿವೇಚಿಸಲಾಗಿದೆ ಎಂಬುದನ್ನು ಸೂಚಿಸುತ್ತದೆ.

ಉದಾ :-

೧. ಅಂತರಂಗುಡು (ಕ್ರಿ) ೧. ಗುಟ್ಟನ್ನು ತಿಳಿಸು; [ಅಂತರ+ಕುಡು(<ಕೊಡು)] [೧-೩೧]

೨. ಕಂಡಿಕೆ (ನಾ). ೧. ತುಂಡು; ಚೂರು: [< ಸಂ. ಖಂಡಿಕಾ] [೨-೧೩೪೧]

೩. ಗಿಲಿಗಿಲಿಗಂಬವಾಡಿಸು (ಕ್ರಿ) [ಗಿಲಿಗಿಲಿಗಂಬ (<ಗಿಲಿಗಿಲಿಗಂಭ)+ಆಡಿಸು] [೩-೨೫೦೯]

೪. ತುಟ್ಟಿ(ತೃಪ್ತಿ; ಸಂತೋಷ;ಆನಂದ;ತಣಿವು: [<ಪ್ರಾ, ತುಟಿ./ಸಂ.ತುಷ್ಟಿ] [೪-೩೫೩೮]

೫. ನಿಲ್ಕಿಸು, ನಿಲುಕಿಸು (ಕ್ರಿ). ೧. ಎಟುಕಿಸು; ಮುಟ್ಟು; [ನಿಲ್ಕು (<ನೀಳ್ಕು)+-ಇಸ್ಸು] [೫-೪೭೨೩]

೬. ಬರಿಜು (ನಾ). ಬರ್ಚಿ; ಬರ್ಜಿ; ಈಟಿ: [< ಬರ್ಚಿ] [೬-೬೨೫೫]

೭. ಬೊಮ್ಮಾಂಡ (ನಾ). ವಿಶ್ವ; ಜಗತ್ತು; [ < ಬೊಮ್ಮಾಂಡ] [೭-೬೬೬೧]

೮. ವಿಸ (ನಾ). "ಕೊಳಲು" [< ಸಂ. ವಂಶ] [೮-೭೯೭೩]

೯. ~ ಒಂದು ಶಬ್ದಕ್ಕೂ ಮತ್ತೊಂದಕ್ಕೂ ಮೂಲಸಂಬಂಧವುಂಟು ಎಂಬುದನ್ನು ಸೂಚಿಸುತ್ತದೆ.

ಉದಾ :- ೧. ಅಡಗು - [~ ? ಅಡಂಗು] [೧-೧೨೭]

೨. ಅಡಗು [~ ? ಅಡವು (< ಅಡರ್ಪು)] [೧-೧೨೭]

೧೦. <- ಒಂದು ಶಬ್ದ ಬೇರೊಂದು ಭಾಷೆಯ ಶಬ್ದದಿಂದ ಎರವಲಾಗಿ ಬಂದದ್ದು ಎಂಬುದನ್ನು ಸೂಚಿಸುತ್ತದೆ. ಸಂಸ್ಕೃತ, ಪ್ರಾಕೃತ ಭಾಷೆಗಳಿಂದ ಬಂದ ಶಬ್ದಗಳ ವಿಷಯದಲ್ಲಿ ಈ ಚಿಹ್ನೆಯನ್ನು ಉಪಯೋಗಿಸಿಲ್ಲ.

ಉದಾ :-

೧. ಅಮೀನ (ನಾ). ೧.ಹಣವಂತ; ಶ್ರೀಮಂತ: <- ಹಿಂ. ಅರ. ಮರಾ. ಅಮೀರ್] [೧-೩೪೭]

೨. ಕಮ್ಮರತಿ (ನಾ). ೧. ಕಮ್ಮಾರ ಹೆಂಗಸು. ೨. ಕಮ್ಮಾರನ ಹೆಂಡತಿ[ಕಮ್ಮರ+-ಇತಿ೧ (<-ಇತ್ತಿ] [೨-೧೫೨೨]

೩. ಕಾಯಂತರೀಕ (ಅ). ಸ್ಥಿರವಾಗಿ ; ಕಾಯಂ ಆಗಿ : [<- ಅರ. ಕಾಈಮ್ ತರೀಕ್] [೨-೧೭೨೩]

೪. ಕಾಲಮಾಪಕ (ನಾ). ಕಾಲವನ್ನು ಅಳೆಯುವ ಯಂತ್ರವಿಶೇಷ: (Chronometer.(ಇಂಕನಿ). [ಕಾಲ+ಮಾಪಕ] [೨-೧೭೫೩]

೫. ಗಿರಿಮಿಟ್, ಗಿರಿಮಿಟ್ಟು (ನಾ). ಮರದಲ್ಲಿ ತೂತು ಕೊರೆಯುವ ಒಂದು ಸಾಧನ; ಆಕರ; ಬೈರಿಗೆ [<- ಅರ. ಗಿಮಲೆಟ್; ಹಿಂ. ಗಿರಮಿಟ್; ಮರಾ. ಗಿರಮೀಟ್./ಇಂ. Gimlet] [೩-೨೫೦೪]

೬. ನಮೂನೆ (ನಾ). ಮಾದರಿ; ತೆರ; ಕ್ರಮ; ಪ್ರಕಾರ; ರೀತಿ; ವಿಧ; ಬಗೆ; [<- ಪಾರ. ನಮೂನಾ, ನಮೂನಹ್; ಹಿಂ. ನಮೂನಾ; ಮರಾ. ನಮೂನಾ, ನಮೋನಾ] [೪-೪೩೬೦]

೭. ಪಟಾಲಂ, ಪಟಲಾಂ, ಪಟಾಲಮು, ಪಟಾಲಮ್ಮು (ನಾ). ೧. ಕಾಲ್ದಳದ ಒಂದು ದೊಡ್ಡ ಭಾಗ; (ಸೈನ್ಯದ) ದಳ; ತುಕಡಿ: [ಇಂ.Battalion. /ತಮಿ. ಪಟ್ಟಾಳಮ್; ಮಲ. ಪಟಾಲನ್; ತುಳು. ಪಟಾಲಂ, ಪಟಲಾಂ; ತೆಲು. ಪಟಾಲಮು, ಪಟಾಳಮು] [೫-೫೧೦೮]

೮. ಫಿಕೀರು, ಪಿಕೀರು (ನಾ). ೧.ಆಸ್ಥೆ; ಆಸಕ್ತಿ; [<- ಅರ.ಫಿಕ್ರ್; ಹಿಂ. ಫಿಕಿರ್, ಫಿಕ್ರ್; ಮರಾ. ಫಿಕೀರ್, ಫಿಕರ್] [೬-೬೧೫೫]

೯. ಬೀಸಲು (ನಾ). ೧. ಬೀಸುವಿಕೆ; ಬೀಸುವುದು: [ಬೀಸು೧+-ಅಲು (<- ಅಲ್೨)] [೭-೬೫೧೯]

೧೦. ವಾಟೆಹುಳಿ (ನಾ). ಒಂದು ಬಗೆಯ ಹುಳಿಯ ಹಣ್ಣು; ಆಮಸೋಲು; [<- ತುಳು. ವಾಟೆಪುಳಿ, ಓಂಟೆಪುಳಿ, ಓಟೆಪುಳಿ] [೮-೭೮೩೪]

**೧೧. * ಈಗ ದೊರೆಯದ, ಆದರೆ ಹಿಂದೆ ಇದ್ದಿರಬೇಕೆಂದು ಊಹಿಸಲಾಗಿರುವ ರೂಪವನ್ನು ಸೂಚಿಸುತ್ತದೆ.**

ಉದಾ :- ೧. ಅಂಭಃಕುಂಭೀನ (ನಾ).=ಅಂಭಃಕರಿ [ಸಂ. (ಅಂಭಸ್+*ಕುಂಭೀನ) [೧-೫೦]

೨. ಓಟು (ನಾ). ೧. ಆ ಪ್ರಮಾಣ; ಅಷ್ಟು; [< * ಒಷ್ಟು] [೧-೧೨೯೭]

೩. ಕಂಚಳಿಗೆ (ನಾ). ಕಂಚಿನ ತಾಳ: [<ಸಂ. * ಕಾಂಸ್ಯತಾಲಿಕಾ] [೨-೧೩೨೯]

**೧೨. ‖ ಈ ಚಿಹ್ನೆಯ ಮುಂದೆ ಜ್ಞಾತಿಶಬ್ದಗಳನ್ನು ಕೊಡಲಾಗಿದೆ.**

ಉದಾ :-

೧. ಅಗಪೆ (ನಾ). ಚಿಪ್ಪಿನ ಸೌಟು; ಸಟ್ಟುಗ: [ದೇ.‖ ತಮಿ. ಆಗಪ್ಪೈ, ಅಪ್ಪೈ; ಮಲ. ಅಗಪ್ಪಾನ್, ಅಪ್ಪ; ತೆಲು. ಅಗಪ, ಅಬಕ] [೧-೭೦]

೨. ಕದ್ರ್ಕ, ಕದರ್ಕು, ಕದಿರ್ಕು, ಕದುರು(ನಾ). ಮರದಿಂದ ಅಥವಾ ಲೋಹದಿಂದ ಮಾಡಿದ ನೂಲು ತೆಗೆಯುವ ಕಡ್ಡಿಯಾಕಾರದ ಸಾಧನ : [ದೇ.॥ ತಮಿ. ಮಲ. ಕದಿರ್; ತುಳು. ಕದ್ರ್; ತೆಲು.ಕದುರು] [೨-೧೪೮೦]

೩. ಚೀರ್ಕು,ಚೀರ್ಕು(ನಾ). ಮಣ್ಣಿನ ಲೇಪ : [ದೇ.॥ ತಮಿ. ಮಲ. ಚೇರು] [೩-೨೮೬೦]

೪. ದೊಣ್ಣೆ, ಡೊಣ್ಣೆ (ನಾ), ೧. ದಪ್ಪವಾದ ಕೋಲು; ದಂಡ; ಲಗುಡ: [ದೇ.॥ ತುಳು. ದೊಣೆಲ್, ಡೊಣ್ಣೆ ; ಕೊಡ. ದೊಣ್ಣೆ: ಕೊಲಾ. ದೊಣ್] [೪-೪೧೦೬]

೫. ನಿವಾಳಿ, ನಿವಾಳೆ, ನೀವಳಿ, ನೀವಾಳಿ, ನೈವಾಳಿ (ನಾ). ೧. ದೃಷ್ಟಿ ಪರಿಹಾರಕ್ಕಾಗಿ ಉಪ್ಪು, ಮೆಣಸಿನಕಾಯಿ, ಅನ್ನ, ಕುಂಕುಮದ ಕದಡು ಮೊದಲಾದವುಗಳಿಂದ ಇಳಿ ತೆಗೆಯುವುದು; ನೀವಳಿಸುವುದು; ದೃಷ್ಟಿ ತೆಗೆಯುವುದು: [ದೇ.॥ ತುಳು. ನಿವಾಳಿ; ತೆಲು. ನಿವಾಳಿ, ನಿವ್ವಾಳಿ [೫-೪೭೨೮]

೬. ಪುಟ್ಟ (ನಾ). ೧. ಚಿಕ್ಕವನು; ಸಣ್ಣವನು: [ದೇ.॥ ತುಳು. ಪುಟ್ಟು; ತೆಲು. ಪೊಟ್ಟಿ, ಪೊಟಿ./ಪುಟ್ಟ್ = ಚಿಕ್ಕದಾಗು] [೬-೫೬೬೨]

೭. ಮಾಮ, ಮಾವ (ನಾ). ೧. ಸೋದರಿಕೆಯ ಸಂಬಂಧದಲ್ಲಿ ಮಾವನಾಗಿರುವವನು; ಸೋದರಮಾವ: [ದೇ.॥ ತಮಿ. ಮಾಮನ್, ಮಾಮಾ, ಮಾಮಾಣ್; ಮಲ.ಮಾಮನ್: ಕೋತ. ಮಮ್ನ್: ತೊದ. ಮುಮನ್;ಕೊಡ. ಮಾವೆನ್; ತುಳು. ಮಾಮೆ, ಮಾವೆ; ತೆಲು. ನಾಯ್ಕಿ ಪರ್ಜಿ. ಕುಇ. ಮಾಮ; ಕುವಿ. ಮಮ, ಮಾಮ; ಕುರುಖ್.ಮಮುಸ್ ; ಮಾಲ್ತೊ. ಮಮ; ಬ್ರಾಹುಈ. ಮಾಮಾ. / ಹಿಂ. ಮರಾ. ಮಾಮಾ./ಪ್ರಾ. ಮಾಮ, ಮಾಮಗ, ಮಾಮಾ./ಸಂ. ಮಾಮ] [೭-೭೦೭೬]

೮. ಸುನಾಯಿತ (ನಾ). ಸೂಕ್ಷ್ಮ [ದೇ॥ ತಮಿ. ಚುನ್ನಿತ, ತೆಲು.ಸುನ್ನಿತ] [೮-೮೬೦೩]

**೧೩. / ಈ ಚಿಹ್ನೆಯ ಮುಂದೆ ಹೋಲಿಕೆಗಾಗಿ ಬೇರೆ ಭಾಷೆಗಳ ಶಬ್ದಗಳನ್ನು ಕೊಡಲಾಗಿದೆ.**

ಉದಾ :-

೧. ಏಡು (ನಾ). ಸಮಯ; ಕಾಲ (ಕ್ರಿ). [?. / ತಮಿ. ಅಣ್ಡು = ವರುಷ;] [೧-೧೧೫೪]

೨. ಕಂಕರ, ಕಂಕರೆ, ಕಂಖರ (ನಾ). ೧. ಸುಣ್ಣಕಲ್ಲು ೨. ಬೆಣಚುಕಲ್ಲು. [ಪ್ರಾ. ಕಕ್ಕರ(<ಸಂ. ಕರ್ಕರ). / ಹಿಂ. ಕಂಕಡ, ಕಂಕರ] [೨-೧೩೨೪]

೩. ಕಂದೆ (ನಾ). ಮಡುವಾಗಲೆಂಬ ಸಸ್ಯ: [?./ತಮಿ. ಕನ್ನೈ] [೨-೧೩೪೯]

೪. ಗಾಯಕತನ (ನಾ). ಉತಾವಳಿತನ; ಉದ್ಧಟತೆ; ಘಾತಕತನ: [?+-ತನ. / ಮರಾ. ಘಾಯಕೂತ್] [೩-೨೪೮೧]

೫. ಗಾರಿಗ್ಗೆ, ಗಾರಗೆ, ಘಾರಿಗೆ (ನಾ). ತುಪ್ಪದಲ್ಲಿ ಕರಿದು ಸಿದ್ಧಪಡಿಸಿದ ಒಂದು ಸಿಹಿಭಕ್ಷ್ಯ [ದೇ॥ ತುಳು. ಗಾರಿಗೆ ; ತೆಲು. ಘಾರಿಕ./ ಪ್ರಾ, ಘಾರಿಯಾ. / ಮರಾ. ಘಾರಗಾ] [೩–೨೪೮೨]

೬. ತೆಂ. (ನಾ). ತೆಂಕು ಎಂಬ ಶಬ್ದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ರೂಪ [< ತೆಂಕು./ ತಮಿ. ಮಲ. ತೆನ್: ತುಳು. ತೆಣ್] [೪–೩೫೯೬]

೭. ಪಪ್ಪಾಯಿ, ಪಪಾಯ, ಪಪ್ಪಂಗಯಿ, ಪಪ್ಪಯಿ (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು; ಪರಂಗಿ [<– ಪೋರ್ಚು. ಸ್ಪ್ಯಾನಿಷ್. Papaya. Papayo./ಮಲ. ಪಪ್ಪಾಯ; ತುಳು. ಬಪ್ಪಂಗಾಯ; ತೆಲು. ಪಪಯೆ, ಪಪ್ಪಾಯಿ./ಹಿಂ. ಪಪ್ಪೈಯಾ; ಮರಾ. ಪಪಈ, ಪಪಯೀ, ಪಪ್ಪೈಯಾ, ಪೋಪಈ, ಪೋಪಯಾ]

[೫–೫೨೫೫]

೮. ಪೀಚಕತ್ತಿ (ನಾ). ಚಿಕ್ಕ ಕಠಾರಿ; ಕಿರುಗತ್ತಿ: [< ಪೀಚು+ಕತ್ತಿ./ ತಮಿ. ಪೀಚ್ಚಾಙ್ಕತ್ತಿ, ಪೀಚ್ಚಾಕ್ಕತ್ತಿ; ಮಲ.ಪೀಚ್ಚಾಙ್ಕತ್ತಿ] [೬–೫೬೪೨]

೯. ಮಗ್ಗುಲು (ನಾ). ೧. ಬೂಷ್ಟು ಹಿಡಿದುದು; ಮುಗ್ಗಿದುದು; /ತಮಿ. ಮುಕ್ಕಲ್ = ಮುಗ್ಗುನಾತ

[೭–೭೨೨೬]

೧೦. ಸರಮಂಡಲ (ನಾ). ಒಂದು ಬಗೆಯ ತಂತೀವಾದ್ಯ :[< ಸಂ. ಸ್ವರಮಂಡಲ./ಹಿಂ. ಸರಮಂಡಲ್]

[೮–೮೩೭೬]

**೧೪. = ಒಂದು ಶಬ್ದಕ್ಕೂ ಮತ್ತೊಂದು ಶಬ್ದಕ್ಕೂ ಅರ್ಥದಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಸೂಚಿಸುತ್ತದೆ.**

ಉದಾ. ೧. ಅಬ್ಜೋದ್ಭವ(ನಾ). = ಅಬ್ಜಭವ: [೧–೩೧೨]

೨. ಖಗವಲ್ಲಭ (ನಾ). = ಖಗಪತಿ [೨–೨೩೧೫]

೩. ಜ್ಯೋತಿಶ್ಶಾಸ್ತ್ರ (ನಾ). = ಜ್ಯೋತಿಷ [೩–೩೧೨೯]

೪. ತುಹಿನಗಿರಿ (ನಾ). = ತುಷಾರಾದ್ರಿ [೪–೩೫೬೩]

೫. ಪರಿಣತಮತಿ (ನಾ). = ಪರಿಣತಪ್ರಜ್ಞೆ [೫–೫೩೩೧]

೬. ಪ್ರತಿಯಾತನೆ (ನಾ). ೧. = ಪ್ರತಿಯಾತನ [೬–೬೦೫೦]

೭. ಮೇರೆವಿಡಿ (ಕ್ರಿ). = ಮೇರೆಗೊಳ್ : [೭–೭೪೧೧]

೮. ಸರಸಿಜಾಕ್ಷ (ನಾ). = ಸರಸಿಜನೇತ್ರ [೮–೮೩೮೦]

೧೫. - = ಒಂದು ಶಬ್ದವನ್ನು ಎರಡು ರೂಪಗಳಲ್ಲಿ ಬರೆಯಬಹುದಾದಾಗ, ಅವುಗಳಿಗೆ ಅರ್ಥ ವ್ಯುತ್ಪತ್ತಿಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ ಎಂಬುದನ್ನು ಸೂಚಿಸುತ್ತದೆ.

ಉದಾ - ೧. ಅಂತಃಸತ್ತ್ವ - = ಅಂತಸ್ಸತ್ತ್ವ

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಬಳಕೆಗೊಂಡ ವಿವಿಧ ಸಂಕೇತಗಳಿಂದ ಒಂದು ಪದದ ಅರ್ಥ, ಅರ್ಥಛಾಯೆ, ಮೂಲ, ರೂಪವ್ಯತ್ಯಾಸ, ಅರ್ಥವ್ಯತ್ಯಾಸ ವಿಚಾರಗಳು ನಿಘಂಟು ಬಳಸುವವರಿಗೆ ಖಚಿತವಾಗಿ ತಿಳಿಯುತ್ತವೆ.

ಒಟ್ಟಾರೆಯಾಗಿ ಈ ಮೇಲೆ ವಿಶ್ಲೇಷಿಸಲಾದ ಭಾಷಿಕ ರೂಪಗಳನ್ನು ಗಮನಿಸಿದಾಗ ಕನ್ನಡದ ಖ್ಯಾತ ವಿದ್ವಾಂಸರು, ಭಾಷಾತಜ್ಞರು ರೂಪಿಸಿರುವ ಈ ಕನ್ನಡದ ನಿಘಂಟಿನಲ್ಲಿ ವಿಶೇಷವಾಗಿ ಶಾಸನಗಳು, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಯ ಆಕರ ಗ್ರಂಥಗಳಲ್ಲಿ ಪ್ರಯೋಗವಾಗಿರುವ ಪದಗಳ ಬಗೆಗೆ ಚಾರಿತ್ರಿಕ ಹಾಗೂ ಸಮಕಾಲೀನ ಬೆಳವಣಿಗೆ, ಅರ್ಥ ಸಾಧ್ಯತೆ, ಬಳಕೆಯ ಮಾದರಿ ಹೀಗೆ ಹಲವು ಅಂಶಗಳು ಪ್ರಮುಖವಾಗಿ ಕಂಡು ಬರುತ್ತವೆ. ಇತ್ತೀಚೆಗೆ ಬಳಕೆಯ ಕನ್ನಡ ವಿವಿಧ ವಲಯಗಳಲ್ಲಿ ವಿಸ್ತಾರವಾಗುತ್ತಿದೆ. ಈ ನಿಘಂಟು ಉಪಭಾಷಿಕ, ಪ್ರಾದೇಶಿಕ, ಸಾಮಾಜಿಕ, ವೃತ್ತಿ ಪದಕೋಶದ ಪದಗಳು, ನಾನಾ ವಲಯಗಳ ಸ್ವೀಕರಣ ಪದಗಳು, ನಿತ್ಯ ಬಳಕೆಯ ಪದಗಳು, ಹೊಸ ಭಾಷಿಕ ಪರಿಸರದಲ್ಲಿ ಪಡೆದ ಅರ್ಥ ವೈವಿಧ್ಯಗಳು, ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಬಳಕೆಯಲ್ಲಿರುವ ಈ ನಿಘಂಟಿನಲ್ಲಿ ಸೇರ್ಪಡೆಯಾಗಬೇಕಿದೆ. ಭಾಷೆ ಬದಲಾಗುವಂತೆ ನಿಘಂಟು ಪರಿಷ್ಕರಣಗೊಳ್ಳಬೇಕಿದೆ.

### ೪.೪. ಕನ್ನಡ ನಿಘಂಟಿನ ವೈಶಿಷ್ಟ್ಯಗಳು

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ಏಕಭಾಷಾ ನಿಘಂಟು ಒಂದು ಪ್ರಮುಖವಾದ ಕಾರ್ಯವಾಗಿದ್ದು, ಇದರ ಮುಖ್ಯ ಉದ್ದೇಶ ಕನ್ನಡ ಭಾಷೆಯ ಚಾರಿತ್ರಿಕ ಬೆಳವಣಿಗೆಯನ್ನು ಗುರುತಿಸುವುದಾಗಿದೆ. ಪರಿಷತ್ತು ಪ್ರಕಟಿಸಿದ ಎಂಟು ಸಂಪುಟಗಳ ಕನ್ನಡ ನಿಘಂಟು ಉಳಿದ ನಿಘಂಟುಗಳಿಗಿಂತ ಹಲವು ವೈಶಿಷ್ಟ್ಯಗಳನ್ನು ಹೊಂದಿದೆ.

ಈ ನಿಘಂಟು ಪದಗಳ ರೂಪ, ಪ್ರತ್ಯಯಗಳ ಬಳಕೆ, ಅರ್ಥ, ಪ್ರಯೋಗ ಹೀಗೆ ಒಂದು ಭಾಷಾವೈಜ್ಞಾನಿಕ ಕ್ರಮವನ್ನು ಅನುಸರಿಸಿದೆ. ಪದಗಳಲ್ಲಿ ನಾಮ, ಕ್ರಿಯಾ, ಗುಣವಾಚಕ, ಅವ್ಯಯ ಹೀಗೆ ವ್ಯಾಕರಣಾಂಶಗಳನ್ನು ದಾಖಲಿಸಿದೆ. ಪದಗಳಲ್ಲಿ ಕಾವ್ಯ ಪದಕೋಶ, ಗದ್ಯ ಪದಕೋಶ, ವೃತ್ತಿ ಪದಕೋಶ, ರೂಢಿಯಲ್ಲಿರುವ ಪದಗಳು, ಆಡುಮಾತು, ಜಾನಪದ ಹೀಗೆ ಭಾಷಾಬಳಕೆಯ ಎಲ್ಲ ವಲಯಗಳನ್ನು ಇಲ್ಲಿ ದಾಖಲಿಸಲಾಗಿದೆ. ಪದದ ನಂತರ ಪದಪುಂಜಗಳಿದ್ದರೆ ಅದನ್ನು ನೀಡಲಾಗಿದೆ. ಪ್ರತಿಯೊಂದು ಪದದ ಬಳಕೆಯನ್ನು ಚಾರಿತ್ರಿಕವಾಗಿ ನೀಡಲಾಗಿದೆ. ಪ್ರತ್ಯಯಗಳಲ್ಲಿ ಮುಖ್ಯ ಉಲ್ಲೇಖದಲ್ಲಿ ಕೇವಲ ಪ್ರತ್ಯಯ ಎಂದು ಹೇಳಿ ಅರ್ಥ ನೀಡುವಾಗ ನಾಮಸಾಧಕ, ಕ್ರಿಯಾಸಾಧಕ ಇತರೆ ಎಂಬುದನ್ನು ಸೂಚಿಸಲಾಗಿದೆ. ಇದು ಭಾಷಾಭ್ಯಾಸಿಗಳಿಗೆ ಅನುಕೂಲಕರವಾಗಿದೆ.

ಪದಗಳ ಮೂಲಕ ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ, ಪರಂಪರೆಯ ತಿಳಿವಳಿಕೆಯನ್ನು ಈ ನಿಘಂಟು ನೀಡುತ್ತದೆ. ಈ ನಿಘಂಟಿನಲ್ಲಿ ಪದಗಳಿಗೆ ವಿವರಣೆ ನೀಡಿರುವ ಕ್ರಮ ಅನನ್ಯವಾದುದು. ಒಂದು ಪದಕ್ಕೆ ಬರುವ ಎಲ್ಲ ಸಾಧ್ಯತೆಗಳನ್ನು ಈ ನಿಘಂಟಿನಲ್ಲಿ ನೀಡಲಾಗಿದೆ. ಅರ್ಥ, ಅರ್ಥ ಸಾಧ್ಯತೆಗಳು, ಪ್ರಯೋಗಗಳು, ಜ್ಞಾತಿ ಪದಗಳು ಇತ್ಯಾದಿ ವಿವರಗಳನ್ನು ವಿಸ್ತೃತವಾಗಿ ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಶಬ್ದಗಳ ಎಲ್ಲ ಪರ್ಯಾಯ ರೂಪಗಳ ಉಲ್ಲೇಖವಿದ್ದು, ಅದನ್ನು ಚಾರಿತ್ರಿಕವಾಗಿ ಬೆಳೆದುಬಂದಂತೆ ನೀಡಲಾಗಿದೆ. ಆಲಂಕಾರಿಕ ಬಳಕೆಯಿದ್ದರೆ ಅದನ್ನು ಅರ್ಥಸಹಿತ ಕೊಡಲಾಗಿದೆ. ಅರ್ಥಗಳನ್ನು ಕೊಡಲಾಗಿದೆ. ಅನ್ಯದೇಶ್ಯಗಳಿಗೆ ಮೂಲಭಾಷೆಯ ಶಬ್ದರೂಪವನ್ನು ಕೊಡಲಾಗಿದೆ. ಯಾವುದಾದರೂ ಶಬ್ದಕ್ಕೆ ಪ್ರಾದೇಶಿಕ ಗುಣವಿದ್ದರೆ ಅದನ್ನು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿ ಕನ್ನಡ ಎಂದು ತಿಳಿಸಲಾಗಿದೆ.

ಇದು ಹಲವು ಪದಕೋಶಗಳನ್ನು ಒಳಗೊಂಡ ಸಮಗ್ರ ಪದಕೋಶವಾಗಿದೆ. ಕಾವ್ಯಮೀಮಾಂಸೆಯ ಪರಿಕಲ್ಪನೆಗಳನ್ನು ಇಲ್ಲಿ ನೀಡಿರುವುದರಿಂದ ಅಭ್ಯಾಸಿಗಳಿಗೆ ಅನುಕೂಲವಾದ ಪದಕೋಶವಾಗಿದೆ. ಈ ಹಿಂದೆ ಬಂದ ಗದ್ಯಕೃತಿಗಳಾದ ವಡ್ಡಾರಾಧನೆ, ಚಾವುಂಡರಾಯ ಪುರಾಣ, ಮುದ್ರಾಮಂಜೂಷ ಗ್ರಂಥಗಳ ಪದಗಳನ್ನು, ಪ್ರಯೋಗಗಳನ್ನು ಇದರಲ್ಲಿ ದಾಖಲಿಸಿರುವುದು ವೈಶಿಷ್ಟ್ಯ

ವೃತ್ತಿ ಪದಕೋಶದ ವೈವಿಧ್ಯಮಯವಾದ ಪದಗಳನ್ನು ಒಳಗೊಂಡು ಆ ಕ್ಷೇತ್ರಗಳಿಗೆ ಸಂಬಂಧಿಸಿದ ಹಲವು ಮಾಹಿತಿಯನ್ನು ಒಳಗೊಂಡಿದೆ. ಉದಾ: ಹಾಸುಹೊಕ್ಕು, ಹಣಗಿ ಜಾನಪದ ಕ್ಷೇತ್ರಕ್ಕೆ ಸಂಬಂಧಿಸಿದ ಪದಸಂಪತ್ತು ಈ ನಿಘಂಟಿನಲ್ಲಿದೆ.

ಕನ್ನಡ ನಿಘಂಟು ಎಂಟು ಸಂಪುಟಗಳಲ್ಲಿದೆ. ಪ್ರತಿ ಸಂಪುಟವು ಯಾವ ಅಕ್ಷರದಿಂದ ಅಕ್ಷರದವರೆಗೆ ಇದೆ ಎಂದು ದಾಖಲಿಸಲಾಗಿದೆ. ಪ್ರತಿಪುಟದಲ್ಲಿ ೨ ಕಾಲಂಗಳಿವೆ. ಪ್ರತಿ ಪುಟದ ಆರಂಭದ ಪದ ಕೊನೆಯ ಪದದ ದಾಖಲೆಯನ್ನು ಪುಟದ ಮೇಲುಗಡೆ ನೀಡಿರುವುದರಿಂದ ಬಳಕೆದಾರರಿಗೆ ಅನುಕೂಲವಾಗುತ್ತದೆ.

ಕಾವ್ಯಾಸಕ್ತರಿಗೆ ಕೈದೀವಿಗೆಯಂತಿರುವ ಈ ನಿಘಂಟು ಪ್ರಯೋಗಗಳ ಭಂಡಾರವಾಗಿದ್ದು, ಈ ಹಿಂದಿನ ಕವಿಗಳ ಪದಪ್ರಯೋಗಗಳನ್ನು ತಿಳಿಯಲು ಸಹಕಾರಿಯಾಗಿದೆ.

ಭಾಷಾಶಾಸ್ತ್ರ ತತ್ವಗಳ ಹಿನ್ನೆಲೆಯಲ್ಲಿ ಅರ್ಥ ಹಾಗೂ ಪ್ರಯೋಗದ ದೃಷ್ಟಿಯಿಂದ ನಿಘಂಟು ರಚನಾ ನಿಯಮಕ್ಕೆ ಅನುಸಾರವಾಗಿ ಈ ನಿಘಂಟು ರಚನೆಯಾಗಿದೆ. ಪದಗಳ ದಾಖಲಾತಿ ಅನುಸ್ವಾರದಿಂದ ಆರಂಭವಾಗಿ ಸರಳ ಅಕ್ಷರ, ಗುಣಿತಾಕ್ಷರ, ಒತ್ತಕ್ಷರ ಹೀಗೆ ಮುಂದುವರೆಯುತ್ತದೆ. ಮುಖ್ಯೋಲ್ಲೇಖ, ಪದದ ಅರ್ಥಗಳು, ಪ್ರಯೋಗ, ನುಡಿಗಟ್ಟುಗಳನ್ನು ದಾಖಲಿಸಿರುವುದು ಈ ನಿಘಂಟಿನ ವೈಶಿಷ್ಟ್ಯ

ಕನ್ನಡ ನಿಘಂಟಿನಲ್ಲಿ ದಾಖಲಾಗಿರುವ ಪದಗಳಿಗೆ ಪ್ರಯೋಗಗಳನ್ನು ನೀಡುವಾಗ ಕವಿ ಉಲ್ಲೇಖಗಳು ಸಿಗದಿರುವ ಸಂದರ್ಭದಲ್ಲಿ ಅರ್ಥಸ್ಪಷ್ಟತೆಗಾಗಿ ಜನರ ರೂಢಿ ಮಾತುಗಳ ಮೂಲಕ ಉದಾಹರಣೆಗಳನ್ನು ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಪೂರ್ವದ ಹಳಗನ್ನಡದಿಂದ ಹೊಸಗನ್ನಡದವರೆಗೆ ಪದದ ಬಳಕೆಯ ಕಾಲದ ಆಧಾರದ ಮೇಲೆ ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯಗಳಲ್ಲಿ ಒಂದು. ಇದರಿಂದ ಒಂದು ಪದ ಐತಿಹಾಸಿಕವಾಗಿ ಬೆಳೆದುಬಂದ ಬಗೆಯನ್ನು ತೋರಿಸುತ್ತದೆ.

ಒಂದು ಪದದ ಎಲ್ಲ ಅರ್ಥಸಾಧ್ಯತೆಗಳನ್ನು ನೀಡಿರುವುದರಿಂದ ಇದೊಂದು ನಾನಾರ್ಥ ಪದಕೋಶವಾಗಿದೆ. ಒಂದು ಪದದ ಸಮಾನಾರ್ಥಕ ಪದಗಳನ್ನು, ಪದದ ಮೂಲವನ್ನು ತಿಳಿಸುತ್ತದೆ. ಜ್ಞಾತಿ ಪದಗಳನ್ನು ಸಹ ನೀಡಲಾಗಿದೆ. ಒಂದೇ ಅರ್ಥವಿರುವ ಸಮಾನಾರ್ಥಕ ಪದಗಳಿಂದ ಬೇರೆ ಬೇರೆ ಪದಗಳನ್ನು ಬೇಕೆನಿಸಿದಾಗ ಬಳಸಲು ಅರ್ಥಖಚಿತತೆಗೆ ವಿಪುಲವಾದ ಪ್ರಯೋಗಗಳನ್ನು ನೀಡಿರುವುದರಿಂದ ಒಂದೇ ಪದಕ್ಕಿರುವ ಸಮಾನ ಅರ್ಥಗಳನ್ನು ಕನ್ನಡ ನಿಘಂಟು ಗುರುತಿಸಿರುವುದು ನಿಘಂಟಿನ ವೈಶಿಷ್ಟ್ಯವಾಗಿದೆ.

ಇದು ಭಾಷಾಶಾಸ್ತ್ರ ತತ್ವಗಳಿಗೆ ಅನುಸಾರವಾಗಿ, ಚಾರಿತ್ರಿಕ ವಿವರಣೆಯಿಂದ ಕೂಡಿರುವ ಮೊತ್ತಮೊದಲನೆಯ ಪ್ರಮಾಣಭೂತ ಹಾಗೂ ಸಮಗ್ರವಾದ ನಿಘಂಟಾಗಿದೆ. ಕನ್ನಡದ ಪ್ರಥಮ ಶಾಸನವಾದ ಹಲ್ಮಿಡಿ ಶಾಸನದ ಕಾಲ ಕ್ರಿ.ಶ. ಸುಮಾರು ೪೫೦ರಿಂದ ೨೦ನೇ ಶತಮಾನದವರೆಗಿನ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳು, ಕೃತಿಗಳು, ಉಲ್ಲೇಖಗಳಿಂದ ಶಬ್ದಗಳನ್ನು ಸಂಗ್ರಹಿಸಲಾಗಿದೆ.

ಅಲಂಕಾರಶಾಸ್ತ್ರ, ಅಶ್ವಶಾಸ್ತ್ರ, ಕಾಮಶಾಸ್ತ್ರ, ಗಜಶಾಸ್ತ್ರ ಮೊದಲಾದವುಗಳಿಗೆ ಸಂಬಂಧಿಸಿದ ಶಾಸ್ತ್ರೀಯ ಗ್ರಂಥಗಳಿಂದಲೂ ಜೈನ, ವೀರಶೈವ, ವೈಷ್ಣವ ಧರ್ಮಗಳಿಗೆ ಸಂಬಂಧಿಸಿದ ಪದಗಳನ್ನು ಬಳಸಿಕೊಳ್ಳಲಾಗಿದೆ. ಸುಮಾರು ೧೦,೦೦೦ ಪುಟಗಳಿರುವ ಹಾಗೂ ಎಂಟು ಸಂಪುಟಗಳಿಂದ ಕೂಡಿದ ಈ ಕನ್ನಡ ನಿಘಂಟಿನಲ್ಲಿ ಸುಮಾರು ಎರಡು ಲಕ್ಷ ಶಬ್ದಗಳು ಮುಖ್ಯ ಉಲ್ಲೇಖಗಳಾಗಿವೆ. ಇವಲ್ಲದೇ ಸುಮಾರು ೧೦ ಲಕ್ಷ ಪ್ರಯೋಗಗಳನ್ನು ಸಂಗ್ರಹಿಸಿ ಪಟ್ಟಿಕೆಗಳಲ್ಲಿ ಬರೆದಿಡಲಾಗಿದೆ. ಕ್ರಿ.ಶ. ೧೯೦೦ರವರೆಗೆ ಮುದ್ರಿತವಾದ ಎಲ್ಲ ಗ್ರಂಥಗಳಲ್ಲಿರುವ ಶಬ್ದಗಳನ್ನು ಪಟ್ಟಿಕೆಗಳಲ್ಲಿ ಗುರುತಿಸಲಾಗಿದೆ. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದಿಂದ ಕ್ರಿ.ಶ. ೧೨೫೦ರವರೆಗಿನ ಎಲ್ಲ ಶಾಸನಗಳ ಶಬ್ದಗಳನ್ನು ಪರಿಶೀಲಿಸಿ ಅಳವಡಿಸಲಾಗಿದೆ. ಆಧುನಿಕರ ಪ್ರಮುಖ ಗ್ರಂಥಗಳ ಶಬ್ದಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಎಲ್ಲ ಹಳೆಯ ನಿಘಂಟುಗಳ ಸಹಾಯ ತೆಗೆದುಕೊಳ್ಳಲಾಗಿದೆ.

ಈ ನಿಘಂಟು ಭಾಷಾ, ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ಮಹತ್ವದ ಮಾಹಿತಿಗಳನ್ನು ಒಳಗೊಂಡಿದ್ದು, ವಿದ್ವಾಂಸರಿಗೂ, ಸಂಶೋಧಕರಿಗೂ ಉಪಯುಕ್ತವಾಗಿದೆ. ಅರ್ಥವಿವರಣೆಯ ಸಂದರ್ಭದಲ್ಲಿ ಮೂಲ ನಿಘಂಟಿನಲ್ಲಿ ಸಾಮಾನ್ಯಾರ್ಥ, ವಿಶೇಷಾರ್ಥ, ಅಲಂಕಾರಿಕ ಅರ್ಥ, ಶ್ಲೇಷಾರ್ಥ, ಹೀನಾರ್ಥ, ಸಾಂಸ್ಕೃತಿಕ ಅರ್ಥ ಮೊದಲಾದ ನೆಲೆಗಳಲ್ಲಿ ಅರ್ಥ ವಿಶೇಷಗಳನ್ನು

ಕೊಡಲಾಗಿದೆ. ಭಾಷೆಯನ್ನು ಬಳಸುವ ಎಲ್ಲ ವರ್ಗಗಳಿಗೂ ಇದು ಪ್ರಯೋಜನಕ್ಕೆ ಬರುವ ನಿಘಂಟಾಗಿದೆ. ಕನ್ನಡ ನಿಘಂಟಿನ ಮೊದಲ ಸಂಪುಟದ ೫೭೫ನೇ ಪುಟದಲ್ಲಿ **ಆಗು**$_{೧}$ ಎನ್ನುವ ಕ್ರಿಯಾಪದಕ್ಕೆ ಸಾಧ್ಯತೆ ಇರುವ ಎಲ್ಲ ರೂಪಗಳನ್ನು ದಾಖಲಿಸಿದ್ದಾರೆ.

೧. (ಕ್ರಿಯಾರೂಪಗಳು) ಅಕುಂ, ಅಕ್ಕು, ಅಕ್ಕುಂ, ಅಕ್ಕುಗುಂ, ಅಪ್ಪಂ, ಅಪ್ಪಳ್, ಅಪ್ಪುದು, ಅಪ್ಪೊಂ, ಅಪ್ಪೊನ್, ಅಪ್ಪೋನ್, ಅಪ್ಪೋರ್, ಅಹನು, ಅಹನೆ, ಅಹಳ್, ಅಹಾದು, ಅಹಿರಿ, ಅಹುದ್ದು$_{೧}$, ಅಕ್ಕು, ಅಗುಗುಂ, ಅಗುಗುಗುಂ, ಆದತ್ತು, ಆಯಿತು, ಆಯಿತ್ತು, ಆಯ್ತು, ಆಹುದು, ಆಹೋದು.

೨. (ಕೃದಂತ ರೂಪಗಳು) ಅಪ್ಪ$_{೪}$. ಅಹ$_{೧}$. ಅಹಪ್ಪ, ಅಹಪ್ಪ, ಆಕ್ಕಿ, ಆಗಿ, ಆದ, ಆಹ$_{೨}$,

೩. (ನಿಷೇಧ ರೂಪಗಳು) ಆಗ$_{೩}$. ಆಗದು, ಆಗಲ್$_{೨}$.

೪. (ಸತಿಸಪ್ತಮಿ ರೂಪಗಳು) ಆಗಲ್$_{೩}$, ಆಗಲು$_{೨}$, ಆಗೆ.

೫. (ಪಕ್ಷಾರ್ಥಕ ರೂಪಗಳು) ಅಪ್ಪಡೆ, ಅಪ್ಪೊಡೆ, ಅಹರೆ, ಆದಡೆ$_{೨}$, ಆದರೆ$_{೨}$, ಆದೊಡೆ$_{೨}$, ಆದ್ರೆ$_{೨}$,

೬. (ವಿಧ್ಯರ್ಥಕ ರೂಪಗಳು) ಅಕ್ಕೆ, ಅಕ್ಕಾ, ಆಗುಗೆ.

೭. (ಕೃಲ್ಲಿಂಗ ರೂಪಗಳು) ಆದುದು.

೮. (ಸಂಭಾವನಾ ರೂಪಗಳು) ಇವು ಹೊಸಗನ್ನಡದಲ್ಲಿ ಮಾತ್ರ ಬಳಕೆಯಲ್ಲಿವೆ) ಆದಾತು, ಆದಾನು, ಆದಾರು, ಆದಾವು, ಆದಾಳು, ಆದೀತು, ಆದೀಯೆ, ಆದೀರಿ, ಆದೇನು, ಆದೇವು.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಶಬ್ದಸಾಗರ. ಶಬ್ದವೈಶಾಲ್ಯ ಹಾಗೂ ಅರ್ಥವೈಶಾಲ್ಯ ಈ ನಿಘಂಟಿನ ವೈಶಿಷ್ಟ್ಯ. ತೆಗೆ ಎಂಬ ಶಬ್ದಕ್ಕೆ ಈ ನಿಘಂಟಿನಲ್ಲಿ ೪೧ ಅರ್ಥಗಳನ್ನು ನೀಡಲಾಗಿದೆ. ಪ್ರತಿಯೊಂದು ಅರ್ಥಕ್ಕೆ ಆಧಾರವಾಗಿ ವಿವಿಧ ಸಾಹಿತ್ಯ ಕೃತಿಗಳಿಂದ ಎತ್ತಿಕೊಂಡ ಉದ್ಧರಣೆಗಳಿವೆ. ಹೀಗೆ ಪದ ಮತ್ತು ಅರ್ಥವೈಶಾಲ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಹೊಂದಿದೆ.

ಕನ್ನಡ ಪದಸಂಪತ್ತಿನ ಹಿರಿಮೆಯನ್ನು, ಸಂಸ್ಕೃತಿ–ಪರಂಪರೆಯನ್ನು ಈ ನಿಘಂಟು ತಿಳಿಸುತ್ತದೆ. ಪದಗಳ ಹುಟ್ಟು ಮತ್ತು ಅರ್ಥ ಜಾಯಮಾನಗಳನ್ನು ಕುರಿತು ತಿಳಿಸುತ್ತದೆ. ಈ ನಿಘಂಟು ಶಬ್ದಗಳ ಹಿಂದೆ ನಡೆದಿರುವ ಸಾಮಾಜಿಕ ಪಲ್ಲಟಗಳ ಬಗ್ಗೆ ಮಾಹಿತಿ ತಿಳಿಸುತ್ತದೆ. ಕನ್ನಡದಲ್ಲಿ ಬಳಕೆಯಲ್ಲಿರುವ ಅನ್ಯಭಾಷೆಗಳಿಂದ ಸ್ವೀಕರಿಸಲಾದ ಶಬ್ದಗಳ ಮೂಲವನ್ನು ವಿವರಿಸುವ ಈ ನಿಘಂಟು, ಎರವಲು ಶಬ್ದಗಳು ಕನ್ನಡಕ್ಕೆ ಬಂದಾಗ ಆಗುವ ರೂಪವ್ಯತ್ಯಾಸ ಹಾಗೂ ಅರ್ಥವ್ಯತ್ಯಾಸಗಳ ಸ್ವರೂಪವನ್ನು ವಿವರಿಸಿ, ಇಂಗ್ಲಿಶ್, ಅರಬ್ಬಿ, ಪರ್ಷಿಯನ್ ಹಾಗೂ ಇತರ ಭಾರತೀಯ ಭಾಷೆಗಳಿಂದ ಶಬ್ದಗಳು

ಹಾಗೂ ಇತರ ಭಾರತೀಯ ಭಾಷೆಗಳಿಂದ ಶಬ್ದಗಳು ಕನ್ನಡಕ್ಕೆ ಬಂದಿರುವ ರೀತಿಯನ್ನು ತಿಳಿಸುತ್ತದೆ. ಭಾಷೆಯ ಅಧ್ಯಯನದ ದೃಷ್ಟಿಯಿಂದ ಈ ಕನ್ನಡ ಸಾಹಿತ್ಯ ಪರಿಷತ್ತಿನ ಸಂಪುಟಗಳ ಕನ್ನಡ ನಿಘಂಟು ಮಹತ್ವದ್ದಾಗಿದೆ.

ಕನ್ನಡ ನಿಘಂಟಿನಲ್ಲಿರುವ ವೈವಿಧ್ಯಮಯವಾದ ನಿಷೇಧಾರ್ಥಕ ಪದಗಳು ಉಪಸರ್ಗ ಮತ್ತು ಪದಗಳಿಂದ ಈ ಎರಡು ರೂಪಗಳಿಂದ ರಚನೆಯಾಗಿದ್ದು, ಒಂದು ನಿಷೇಧ ಪದಕ್ಕೆ ಹಲವು ಅರ್ಥಸಾಧ್ಯತೆಗಳನ್ನು ಇಲ್ಲಿ ನೀಡಲಾಗಿದೆ. ಅಲ್ಲದೇ ಪರ್ಸೋ-ಅರೇಬಿಕ್ ಮೂಲದ 'ಬೇ' ಎನ್ನುವ ಉಪಸರ್ಗವೂ ಬಳಕೆಯಾಗಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಕನ್ನಡದಲ್ಲಿರುವ ಎಲ್ಲ ಶಬ್ದಗಳು ಕನ್ನಡ ಪದಗಳಲ್ಲ. ಭಾಷೆ ಬೆಳೆಯಬೇಕಾದರೆ ಕೊಳು-ಕೊಡುಗೆ ಅಗತ್ಯ ಕನ್ನಡದಲ್ಲಿ ದೇಶ್ಯ(ಅಚ್ಚಗನ್ನಡ) ಪದಗಳಲ್ಲದೆ, ತತ್ಸಮ-ತದ್ಭವ, ಅನ್ಯದೇಶ್ಯ ಪದಗಳು ಅಧಿಕವಾಗಿದ್ದು, ಈ ನಿಘಂಟು ದೇಶ್ಯ-ಅನ್ಯದೇಶ್ಯ ಪದಗಳಿಗೆ ಅರ್ಥವನ್ನು ನೀಡಿ ಅವುಗಳ ಮೂಲವನ್ನು ದಾಖಲಿಸಿರುವುದರಿಂದ ಪದಗಳ ಪರಿಜ್ಞಾನ ನೀಡುತ್ತದೆ. ಕನ್ನಡ ನಿಘಂಟಿನಲ್ಲಿರುವ ಪದಗಳಲ್ಲಿ ಅತಿ ಹೆಚ್ಚು ಸಂಸ್ಕೃತ ಭಾಷೆಯಿಂದ ಬಂದ ಪದಗಳಾಗಿದ್ದು, ಎಷ್ಟರಮಟ್ಟಿಗೆ ಕನ್ನಡ ಭಾಷೆ ಸಂಸ್ಕೃತ ಭಾಷೆಯಿಂದ ಪ್ರಭಾವಿತಗೊಂಡಿದೆ ಎನ್ನುವುದು ಇದರಿಂದ ತಿಳಿಯುತ್ತದೆ. ಒಂದು ಪದ ಬೇರೆ ಬೇರೆ ಭಾಷೆಯಲ್ಲಿ ಯಾವ ರೀತಿ ಬಳಕೆಯಾಗುತ್ತದೆ ಎನ್ನುವದನ್ನು ಜ್ಞಾನವನ್ನು ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಈ ನಿಘಂಟಿನಲ್ಲಿ ಪ್ರಾದೇಶಿಕವಾಗಿ ಬಳಕೆಯಾಗಿರುವ ಪದಗಳನ್ನು ಸೇರಿಸಲಾಗಿದ್ದು, ಅವುಗಳನ್ನು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿ ಭಾಗಗಳಲ್ಲಿ ಬಳಕೆಯಾಗುವ ಪದಗಳನ್ನು ದಾಖಲಿಸಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ. ಉದಾ. ಅಜಾರಿ (ನಾ). (ಉಕ) ರೋಗ, ಕಾಯಿಲೆ: ಜಡ್ಡು;, ಅಡ್ಕ (ನಾ). (ಕರಾ). ವಿಶಾಲವದ ಸಮತಲ ಪ್ರದೇಶ ಇತ್ಯಾದಿ.

ಕನ್ನಡ ನಿಘಂಟಿನಲ್ಲಿ ಅವ್ಯಯಗಳು ದಾಖಲಾಗಿದ್ದರೂ ಅನುಕರಣಾವ್ಯಯಗಳನ್ನು ಅಧಿಕ ಪ್ರಮಾಣದಲ್ಲಿ ನೀಡಿರುವುದು ಈ ಕನ್ನಡ ನಿಘಂಟಿನ ವೈಶಿಷ್ಟ್ಯವಾಗಿದೆ.

ಭಾವನೆಗಳ ಅಭಿವ್ಯಕ್ತಿಗೆ ಪುಷ್ಟಿ ದೊರೆಯಲು, ಕೇಳುವವರ, ಓದುವವರ ಮನಸ್ಸಿನ ಮೇಲೆ ಹೆಚ್ಚು ಪರಿಣಾಮಕಾರಿಯಾಗಲು ಭಾಷೆಯಲ್ಲಿ ಬಳಸುವ ಸಾವಿರಾರು ವಿಶೇಷವಾದ 'ದ್ವಿರುಕ್ತಿ'ಗಳನ್ನು ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಕನ್ನಡ ನಿಘಂಟಿನಲ್ಲಿ ಪದಗಳಿಗೆ ವಿವರವನ್ನು ನೀಡುವಾಗ ಒಂದು ಪದದ ಮೂಲ, ಬಳಸಿದ ಕೃತಿ, ಶಾಸನ ಮೊದಲಾದ ವಿವರಗಳು ದೊರೆಯುತ್ತವೆ. ಇವುಗಳನ್ನು ಸಂಕ್ಷಿಪ್ತಗಳಲ್ಲಿ ನೀಡಲಾಗಿದ್ದು ಅಗತ್ಯವಿದ್ದರೆ ಮೂಲದಲ್ಲಿ ನೋಡಲು, ಚಾರಿತ್ರಿಕವಾಗಿ ವಿಶ್ಲೇಷಿಸಲು ಅನುಕೂಲವಾಗಿದೆ. ಇದು ನಿಘಂಟಿನ ವೈಶಿಷ್ಟ್ಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಎಂಟು ಸಂಪುಟಗಳ ಕನ್ನಡ ನಿಘಂಟನ್ನು ಬಳಸುವಾಗ ಅನುಕೂಲವಾಗಲು ಕೆಲವು ಸಂಕೇತಗಳನ್ನು ನೀಡಲಾಗಿದೆ. ಇದರಿಂದ ಸಂಕೇತಗಳಿಗನುಗುಣವಾಗಿ ಪದ, ಅರ್ಥ, ಪ್ರಯೋಗ, ನಿಷ್ಪತ್ತಿ, ಪಾಠಾಂತರ ಮೊದಲಾದ ಅಂಶಗಳು ಖಚಿತವಾಗಿ ತಿಳಿಯುತ್ತವೆ. ಇದರಲ್ಲಿ ದಾಖಲಿಸಲಾದ ಸಂಕೇತಗಳನ್ನು ಉದಾಹರಣೆ ಸಹಿತ ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಕನ್ನಡ ನಿಘಂಟಿನಲ್ಲಿ ಲೇಖನ ಚಿಹ್ನೆಗಳನ್ನು ಪದಗಳ ವಿಂಗಡಣೆ, ಅರ್ಥಸ್ಪಷ್ಟತೆ ಹಾಗೂ ಅರ್ಥಖಚಿತತೆ ಮೊದಲಾದ ಉದ್ದೇಶಗಳಿಗೆ ಬಳಸಲಾಗಿದ್ದು, ನಿಘಂಟು ಬಳಸುವವರಿಗೆ ಸುಲಭವಾಗಿ ಅರ್ಥವಾಗುತ್ತದೆ. ಪದಗಳ ಸರಿಯಾದ ತಿಳಿವಳಿಕೆಗೆ ಈ ನಿಘಂಟಿನಲ್ಲಿ ಲೇಖನ ಚಿಹ್ನೆಗಳ ಬಳಕೆ ಯಾವ ರೀತಿಯಲ್ಲಾಗಿದೆ ಎನ್ನುವುದನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಕನ್ನಡ ನಿಘಂಟಿನಲ್ಲಿ ಶಬ್ದಾರ್ಥವನ್ನು ವಿವೇಚಿಸುವಾಗ ತಾವು ಹೇಳುವ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ತಾವು ಕೊಡುವ ಅರ್ಥ ವಿವರಣೆಗೆ ಪುಷ್ಟಿಯನ್ನು ಕೊಡಲು ಪ್ರಯೋಗಗಳನ್ನು ನೀಡಲಾಗಿದೆ. ಒಂದು ಶಬ್ದಕ್ಕೆ ಸಾಧ್ಯವಿರುವ ಮಟ್ಟಿಗೂ ಮೊದಲು ಪ್ರಾಚೀನ ಪ್ರಯೋಗವನ್ನು ನೀಡಿ ನಂತರ ಮಧ್ಯಕಾಲದ ಪ್ರಯೋಗ ಆನಂತರ ನವೀನ ಕಾಲದ ಪ್ರಯೋಗಗಳನ್ನು ನೀಡಿದ್ದು, ಆ ಶಬ್ದ ಕಾಲಾನುಕಾಲಕ್ಕೆ ಬದಲಾವಣೆ ಹೊಂದಿದ ಭಾಷಿಕ ವ್ಯತ್ಯಾಸವನ್ನು ತಿಳಿಯಬಹುದಾಗಿದೆ. ಸಾಮಾನ್ಯಾರ್ಥ, ವಿಶೇಷಾರ್ಥ, ಅಲಂಕಾರಿಕ ಅರ್ಥ, ಶ್ಲೇಷಾರ್ಥ, ಹೀನಾರ್ಥ, ಸಾಂಸ್ಕೃತಿಕ ಅರ್ಥ ಮೊದಲಾದ ನೆಲೆಗಳಲ್ಲಿ ಅರ್ಥ ವಿಶೇಷಗಳನ್ನು ಕೊಡಲಾಗಿದೆ. ಈ ನಿಘಂಟು ಪದಭಂಡಾರವನ್ನು ಹೊಂದಿದ್ದು, ಒಂದು ಪದಕ್ಕೆ ವಾಚ್ಯಾರ್ಥ ಮತ್ತು ಲಕ್ಷಣಾರ್ಥಗಳನ್ನು ಕೊಡುವುದಲ್ಲದೇ ಪದಕ್ಕಿರುವ ನಾನಾರ್ಥಗಳನ್ನು ಕೊಡುವ ಮೂಲಕ ಪದ ಬೆಳವಣಿಗೆಯ ಹಂತವನ್ನು, ಪ್ರಯೋಗಗಳನ್ನು ನೀಡಿದೆ. ಇದರಿಂದ ಪ್ರಯೋಗಗಳ ಮೂಲಕ ಅರ್ಥ ಮನದಟ್ಟಾಗುತ್ತದೆ. ಪ್ರಯೋಗಗಳನ್ನು ಉಲ್ಲೇಖಿಸಿರುವುದು ನಿಘಂಟಿನ ಮೌಲ್ಯವನ್ನು ಹೆಚ್ಚಿಸಿದೆ. ಯಾವ ಪದವನ್ನು ಎಲ್ಲೆಲ್ಲಿ, ಯಾವ ಅರ್ಥದಲ್ಲಿ ಬಳಸಲಾಗಿದೆ ಎನ್ನುವುದನ್ನು ಕಂಡುಕೊಂಡು ಪ್ರಯೋಗಗಳನ್ನು ನೀಡಿರುವುದು ಇದರ ವೈಶಿಷ್ಟ್ಯವಾಗಿದೆ.

ನಿಘಂಟಿನಲ್ಲಿ ದಾಖಲಾಗಿರುವ ನುಡಿಗಟ್ಟುಗಳು ಭಾಷೆಯ ವಿಶಿಷ್ಟವಾದ ಭಾವಾಭಿವ್ಯಕ್ತಿಯ ಘಟಕಗಳಾಗಿವೆ. ವಿಶೇಷಾರ್ಥದ ಜೊತೆಗೆ ನಮ್ಮ ಮಾತಿನ ಅರ್ಥವ್ಯಾಪ್ತಿಯನ್ನು ವಿಸ್ತರಿಸುವ ಶಕ್ತಿ ನುಡಿಗಟ್ಟುಗಳಿಗಿದೆ. ಕನ್ನಡ ನಿಘಂಟಿನಲ್ಲಿರುವ ವಿಭಿನ್ನಾರ್ಥಗಳನ್ನು ಹೊಂದಿರುವ ಈ ನುಡಿಗಟ್ಟುಗಳ ರಚನಾ ವೈಖರಿ ಅವುಗಳನ್ನೆಲ್ಲ ಈ ನಿಘಂಟಿನಲ್ಲಿ ದಾಖಲಿಸಿದ ರೀತಿ ಬೆರಗುಗೊಳಿಸುತ್ತದೆ. ನುಡಿಗಟ್ಟುಗಳಿಗೆ ವಾಚ್ಯಾರ್ಥ, ಲಕ್ಷಣಾರ್ಥ, ವಿರೋಧಾರ್ಥಗಳು, ವ್ಯಂಗ್ಯಾರ್ಥಗಳನ್ನು ಗಮನಿಸಬಹುದು. ಅಲ್ಲದೇ ಒಂದೇ ನುಡಿಗಟ್ಟಿಗೆ ಪ್ರಾಸಂಗಿಕವಾಗಿ ಹಲವಾರು ಅರ್ಥಗಳಿದ್ದಾಗ ಅವುಗಳಿಗೆ ಅನುಕ್ರಮವಾದ ಅರ್ಥವನ್ನು ಕನ್ನಡ ನಿಘಂಟಿನಲ್ಲಿ ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಭಾಷೆಯ ಅವಿಭಾಜ್ಯ ಅಂಗಗಳಲ್ಲಿ ಗಾದೆಗಳು ಪ್ರಮುಖವಾದವು. ಮಿತವಾದ ಶಬ್ದಗಳಲ್ಲಿ ಅಗಾಧ ಅರ್ಥವನ್ನು ಒಳಗೊಂಡ ಇವು ತೀಕ್ಷ್ಣವಾದ ವಿಚಾರಗಳನ್ನು ಒಳಗೊಂಡಿರುತ್ತವೆ. ಕನ್ನಡ ನಿಘಂಟಿನಲ್ಲಿ ಮುಖ್ಯ ಶಬ್ದಗಳನ್ನು ದಾಖಲಿಸಿ, ಅದರ ಅರ್ಥದ ವಿಶದತೆಗೆ ಹಾಗೂ ಸ್ಪಷ್ಟೀಕರಣಕ್ಕೆ ಗಾದೆಗಳನ್ನು ಪೂರಕವಾಗಿ ಬಳಸಲಾಗಿದೆ. ಪದಗಳಿಗೆ ಅರ್ಥವನ್ನು ಕೊಡುವಾಗ ಸಂದರ್ಭೋಚಿತವಾಗಿ ಗಾದೆಗಳನ್ನು ಕೊಟ್ಟು ಶಬ್ದಾರ್ಥ ಜ್ಞಾನ ಮತ್ತಷ್ಟು ಮನದಟ್ಟಾಗುವಂತೆ ಮಾಡಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ನಿಘಂಟಿನಲ್ಲಿ ವಿಶೇಷ ಮಾಹಿತಿಗಳನ್ನು ನೀಡಬೇಕಾದ ಸಂದರ್ಭದಲ್ಲಿ ಸಂಕೇತಗಳನ್ನು ಬಳಸಿ ಸೂಚಿಸಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ. ಈ ಸಂಕೇತಗಳು ಗ್ರಂಥಭಾಗವನ್ನು ಉದಾಹರಿಸುವಾಗ ಅಕ್ಷರಗಳ ಲೋಪ, ಗ್ರಂಥಪಾತ, ಸಂಪಾದಕೀಯ ಸಂದೇಹ, ವಿಶೇಷಾಂಶಗಳು, ರೂಪನಿಷ್ಪನ್ನ, ಪದಸಂಬಂಧ, ಎರವಲು, ಜ್ಞಾತಿಶಬ್ದಗಳನ್ನು ನೀಡುವಾಗ ಬಳಸಲಾಗಿದೆ. ಇವು ನಿಘಂಟು ಬಳಕೆದಾರರಿಗೆ ಪ್ರಯೋಜನಕಾರಿಯಾಗಿರುವುದು ಇದರ ವೈಶಿಷ್ಟ್ಯವಾಗಿದೆ.

ಇವುಗಳಲ್ಲದೆ ಮತ್ತೊಂದು ಕಡೆ ಶಬ್ದಗಳನ್ನು ಪರಾಮರ್ಶಿಸುವಂತೆ ಸೂಚಿಸಲು, ಹೋಲಿಕೆ ಮಾಡಲು, ನೋಡಲು ಈ ನಿಘಂಟಿನಲ್ಲಿ ಸೂಚನೆಗಳನ್ನು ಪರಾ., ಹೋ., ನೋ. ಇತ್ಯಾದಿ ಸಂಕ್ಷಿಪ್ತಗಳನ್ನು ನೀಡಿ ಸೂಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನಕಾರರಿಗೆ ತಲಸ್ಪರ್ಶಿ ಅಧ್ಯಯನ ಕೈಗೊಳ್ಳಲು ಅನುಕೂಲವಾಗಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ.

ಸಾಂಸ್ಥಿಕ ಪ್ರಯತ್ನದಿಂದ ರಚನೆಯಾದ ನಿಘಂಟು ಹಲವು ವೈಶಿಷ್ಟ್ಯಗಳನ್ನು ಹೊಂದಿದ್ದು, ಕನ್ನಡ ನುಡಿ ಬೆಳವಣಿಗೆಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ.

**ಕೊನೆ ಟಿಪ್ಪಣಿ**

೧. ನರಸಿಂಹಾಚಾರ್ ಡಿ.ಎಲ್. ೧೯೭೧, 'ಕನ್ನಡಕ್ಕೆ ಹೊಸ ನಿಘಂಟು', ಪೀಠಿಕೆಗಳು-ಲೇಖನಗಳು, ಪು.೮೩೧

೨. ಗೋಪಾಲ್ ಟಿ.ಎಸ್., ೨೦೧೫, ಲೇಖನ ಚಿಹ್ನೆಗಳು, ಪು.೮

೩. ಅಂಗಡಿ ಎಸ್.ಎಸ್., ೨೦೦೫-೦೬, ಕನ್ನಡ ವ್ಯಾಕರಣ ಪರಿಭಾಷೆ, ಪು.೯೬

೪. ಸಾಂಬಾಮೂರ್ತಿ, ೧೯೯೯, ನಿಷೇಧಾರ್ಥ ಪದಕೋಶ, ಪು.IV (ಪ್ರಸ್ತಾವನೆ)

೫. ಅದೇ, ಪು. IV (ಪ್ರಸ್ತಾವನೆ)

೬ ನಾರಾಯಣ ಕೆ.ವಿ., ತೊಂಡುಮೇವು ಕಂತೆ ಎಂಟು, ಪು.೨೦೦-೨೦೧

೭ ರಾಗೌ, ೨೦೦೯, ನಮ್ಮ ಗಾದೆಗಳು, ಪು.೮

೮. ಅದೇ, ಪು.೧೦

* * * *

## ಅಧ್ಯಾಯ ಐದು

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಬಳಕೆಯ ವಲಯಗಳು

ಅಧ್ಯಾಯ ಐದು

# ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಬಳಕೆಯ ವಲಯಗಳು

## ೫.೧. ಪೀಠಿಕೆ

ನಿಘಂಟುಗಳು ಮಹತ್ವದ ಆಕರ ಕೃತಿಗಳಾಗಿದ್ದು, ಬಳಸುವವರಿಗೆ ಬೇರೆ ಬೇರೆ ರೀತಿಯಲ್ಲಿ ಪದಗಳ ಮಾಹಿತಿಯನ್ನು ಸಮರ್ಪಕವಾಗಿ ಒದಗಿಸುತ್ತವೆ. ನಿಘಂಟುಗಳು ಶಬ್ದಗಳ ಹಲವು ಅರ್ಥಗಳನ್ನು ಸಂದರ್ಭಗಳಿಗೆ ತಕ್ಕಂತೆ ಅರ್ಥೈಸಿಕೊಳ್ಳಲು ಸಹಕಾರಿಯಾಗಿವೆ. ನಿಘಂಟುಗಳ ಮಹತ್ವ ಮತ್ತು ಉಪಯೋಗ ವಿಶಾಲವಾಗಿದ್ದು, ಇವುಗಳ ಮೂಲಭೂತ ಉದ್ದೇಶ ಶಬ್ದಗಳ ಅರ್ಥವನ್ನು ಕೊಡುವುದಾದರೂ ಸಮಾನಾರ್ಥಕ ಪದ, ವಿರುದ್ಧ ಪದ, ಶಬ್ದದ ಮೂಲ ಮತ್ತು ಇತಿಹಾಸ, ಉಚ್ಚಾರ, ಬಳಕೆ ಇತ್ಯಾದಿಯನ್ನು ತಿಳಿಸುತ್ತವೆ. ಆದ್ದರಿಂದ ಇವುಗಳ ಬಳಕೆ ಅಕ್ಷರಸ್ಥ ವಲಯದಲ್ಲಿ ಸಾರ್ವತ್ರಿಕವಾಗಿದ್ದು ಉಳಿದೆಲ್ಲ ಗ್ರಂಥಗಳಿಗಿಂತ ಮುಖ್ಯವಾಗಿವೆ.

## ೫.೨. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಬಳಕೆಯ ವಲಯಗಳು

ಭಾಷೆ ಸಮಾಜವನ್ನು ಹೇಗೆ ಪ್ರತಿಬಿಂಬಿಸುತ್ತದೆ ಎನ್ನುವುದನ್ನು ನಿಘಂಟುಗಳು ಹೇಳುತ್ತವೆ. ಇವು ಭಾಷೆಯಲ್ಲಿರುವ ಪದಗಳನ್ನು, ಅರ್ಥಗಳನ್ನು ಗ್ರಹಿಸುವುದಕ್ಕೆ ಸಹಕಾರಿಯಾಗಿವೆ. ಪದ, ಅರ್ಥ, ವ್ಯಾಖ್ಯೆಗಳು, ಪ್ರಯೋಗ ಮೊದಲಾದವುಗಳ ನಿಖರ ಮಾಹಿತಿಯನ್ನು ನಿಘಂಟುಗಳು ನೀಡುತ್ತವೆ. ನಿಘಂಟನ್ನು ಎಲ್ಲರೂ ಬಳಸುತ್ತಾರೆಂದೇನೂ ಇಲ್ಲ. ಅರ್ಥಸಂದಿಗ್ಧವಾದಾಗ ವಿದ್ಯಾವಂತರನ್ನು ಕೇಳಿ ತಿಳಿದುಕೊಳ್ಳುವುದೂ ಇರುತ್ತದೆ. ಹಾಗೆಯೇ ನಿಘಂಟಿನ ಬಳಕೆಯ ವಲಯಗಳೂ ಇವೆ. ಶಿಕ್ಷಣ, ಮಾಧ್ಯಮ, ಆಡಳಿತ, ನ್ಯಾಯಾಂಗ ಮುಂತಾದ ವಲಯಗಳು ಭಾಷಾ ಬಳಕೆಯ ಮುಖ್ಯ ವಲಯಗಳಾಗಿರುವುದರಿಂದ ಅಲ್ಲಿ ಪಾರಿಭಾಷಿಕ ಪದಗಳ ರಚನೆ ಆಗುತ್ತಲೇ ಇರುತ್ತದೆ. ಅಂತಹ ಸಂದರ್ಭಗಳಲ್ಲಿ ನಿಘಂಟುಗಳ ಬಳಕೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ವಿವಿಧ ವಲಯಗಳಲ್ಲಿ ಯಾವ ರೀತಿ ಬಳಕೆಯಾಗುತ್ತಿರುವ ಬಗ್ಗೆ ಈ ಭಾಗದಲ್ಲಿ ಚರ್ಚಿಸಲಾಗಿದೆ. ಭಾಷೆಯಲ್ಲಿ ಆಯಾ ವಲಯಗಳಿಗೆ ಸೇರಿದ ಪದಗಳು ಹೆಚ್ಚು ಬಳಕೆಯಾಗುತ್ತವೆ. ವಿವಿಧ ವೃತ್ತಿಗಳು, ಆಡಳಿತ, ಮಾಧ್ಯಮ ಹೀಗೆ ವಿವಿಧ ವಲಯಗಳು ಭಿನ್ನ ರೀತಿಯ ಪದ ಸಾಮಗ್ರಿಯನ್ನು ಹೊಂದಿರುತ್ತವೆ. ಕನ್ನಡ ನಿಘಂಟು ಹಲವು ವಲಯಗಳ ಪದ ಸಾಮಗ್ರಿಯನ್ನು ಒಳಗೊಂಡಿದ್ದು, ಬಳಕೆಯ ನೆಲೆಗಳನ್ನು ಇಲ್ಲಿ ಗುರುತಿಸಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕನ್ನಡ ಭಾಷೆಯ ಅತಿ ದೊಡ್ಡ ಮಾಹಿತಿ ಕಣಜವಾಗಿದ್ದು, ಇದರ ಬಳಕೆಯ ನೆಲೆಯನ್ನು ಕನ್ನಡ ಭಾಷಾವಿದ್ವಾಂಸರಾದ ಕೆ.ವಿ.ನಾರಾಯಣರವರು (೨೦೧೦) ಈ ಕೆಳಕಂಡಂತೆ ಗುರುತಿಸಿದ್ದಾರೆ.

"ಸಾಮಾನ್ಯವಾಗಿ ನಿಘಂಟನ್ನು ಬಳಸುವ ಸಂದರ್ಭಗಳಾವುವು? ಒಂದು ಪದದ ಅರ್ಥ ತಿಳಿಯದಿರುವಾಗ; ಅದರ ಬಳಕೆಯ ವಿವಿಧ ನೆಲೆಗಳನ್ನು ಕಂಡುಕೊಳ್ಳಬೇಕಾದಾಗ; ಸಮಾನಾರ್ಥಕಗಳನ್ನು ಅಥವಾ ಪರ್ಯಾಯ ರೂಪಗಳನ್ನು ಅರಿಯಬೇಕಾದಾಗ; ಆ ಪದದಿಂದ ಸಾಧಿತವಾದ ರೂಪಗಳನ್ನು ಕಂಡುಕೊಳ್ಳಬೇಕಾದಾಗ; ಅದು ಯಾವ ಭಾಷೆಯಿಂದ ಬಂದ ಪದ ಎಂಬುದನ್ನು ತಿಳಿಯಬೇಕಾದಾಗ ಹೀಗೆ ಹತ್ತು ಹಲವು ಬಾರಿ ನಿಘಂಟನ್ನು ನಾವು ಬಳಸುತ್ತೇವೆ".[೧] ಎಂದು ಈ ಲೇಖನದಲ್ಲಿ ಕನ್ನಡ ನಿಘಂಟು ಬಳಕೆಯ ವಿಚಾರಗಳನ್ನು ಕುರಿತು ಚರ್ಚಿಸಿದ್ದಾರೆ.

ಕನ್ನಡ ಭಾಷೆಯ ಅಧ್ಯಯನಕ್ಕೆ ವಿವಿಧ ಸಾಧ್ಯತೆಗಳನ್ನು ಒದಗಿಸಿಕೊಡಲು ಈ ನಿಘಂಟಿನಲ್ಲಿರುವ ಮಾಹಿತಿ ಎಷ್ಟು ಸಹಕಾರಿಯಾಗಿದೆ. ಇದರ ಬಳಕೆಯನ್ನು ಮಾಡುತ್ತಿರುವ ವಲಯಗಳಾವುವು, ವಿವಿಧ ವಲಯಗಳಲ್ಲಿ ಈ ನಿಘಂಟಿನ ಬಳಕೆಯ ಪ್ರಮಾಣ ಎಷ್ಟು ಎಂಬುದನ್ನು ಕಂಡುಕೊಳ್ಳಲು ಮಾದರಿ ಪ್ರಶ್ನಾವಳಿಯನ್ನು ರೂಪಿಸಿ ರ್‍ಯಾಂಡಮ್ ಸ್ಯಾಂಪ್ಲಿಂಗ್ ವಿಧಾನದಲ್ಲಿ ವಿದ್ಯಾರ್ಥಿಗಳು, ಶಿಕ್ಷಕರು, ಸಂಶೋಧಕರು, ವಕೀಲರು, ಪತ್ರಕರ್ತರು, ಲೇಖಕರು, ಪ್ರಕಾಶಕರಿಗೆ ಪ್ರಾತಿನಿಧಿಕವಾಗಿ ನೀಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಈ ಮಾಹಿತಿಯನ್ನು ಆಧರಿಸಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ನಿಘಂಟಿನ ಉಪಯುಕ್ತತೆಯ ಪ್ರಮಾಣವನ್ನು ತಿಳಿಯಲು ಈ ಪ್ರಶ್ನಾವಳಿಯ ಮಾಹಿತಿ ಸಹಕಾರಿಯಾಗಿದೆ. ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹ ಕಾರ್ಯವನ್ನು ಸಂಡೂರು, ಹೊಸಪೇಟೆ ಹಾಗೂ ಬಳ್ಳಾರಿ ತಾಲೂಕಿನ ವ್ಯಾಪ್ತಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

### ೫.೨.೧. ಶೈಕ್ಷಣಿಕ ವಲಯ

ವ್ಯಕ್ತಿಯ ವಿಕಾಸಕ್ಕೆ ಶಿಕ್ಷಣ ಸಾಧನವಾಗಿದ್ದು, ಸಮಾಜದ ಸರ್ವಾಂಗೀಣ ಅಭಿವೃದ್ಧಿಗೆ ಮಹತ್ವದ ಪಾತ್ರವನ್ನು ವಹಿಸುತ್ತದೆ. ಶಿಕ್ಷಣ ವಲಯ ಬಹಳ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದ್ದು, ವಿದ್ಯಾರ್ಥಿಗಳು, ಬೋಧಕರು, ಸಂಶೋಧಕರು ಈ ವಲಯದೊಳಗೆ ಬರುತ್ತಾರೆ. ಇದನ್ನು ಗಮನಿಸಿದಾಗ ಕನ್ನಡ ನಿಘಂಟು ಬಳಸುವ ಬಹುದೊಡ್ಡ ವಲಯ ಇದಾಗಿದೆ. ಈ ವಲಯದವರಿಗೆ ಮಾದರಿ ಪ್ರಶ್ನಾವಳಿಯನ್ನು ನೀಡಿ ಬಂದ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ. ಪ್ರಾಥಮಿಕ, ಪ್ರೌಢ ಹಾಗೂ ಪದವಿಪೂರ್ವ ಹಂತದ ವಿದ್ಯಾರ್ಥಿಗಳನ್ನು ಹೊರತು ಮಾಹಿತಿ ಪದವಿ ಹಾಗೂ ಸ್ನಾತಕೋತ್ತರ ಹಂತದ ವಿದ್ಯಾರ್ಥಿಗಳಿದ್ದು ಅಲ್ಲದೇ ವಿಶ್ವವಿದ್ಯಾಲಯದ ವ್ಯಾಪ್ತಿಯ ಮಾನವಿಕ ವಿಷಯಗಳ ಮೇಲೆ ಸಂಶೋಧನೆ ಕೈಗೊಂಡಿರುವ ಸಂಶೋಧಕರಿಗೆ ಪ್ರಶ್ನಾವಳಿಯನ್ನು ನೀಡಿ ಅವರಿಂದ ಬಂದ ಮಾಹಿತಿಯನ್ನು ಆಧರಿಸಿ ವಿಶ್ಲೇಷಿಸಲಾಗಿದೆ. ಸಂಶೋಧಕ ವರ್ಗವು ಕನ್ನಡ ನಿಘಂಟನ್ನು ಕಡ್ಡಾಯವಾಗಿ ಬಳಕೆ ಮಾಡಿರುವುದು ಈ ಅಧ್ಯಯನದಿಂದ ಕಂಡುಬಂದಿದೆ.

ಒಟ್ಟು ೫೫ ವಿದ್ಯಾರ್ಥಿ ಮತ್ತು ಸಂಶೋಧಕರು ಸಂಶೋಧನಾ ವಲಯದಲ್ಲಿರುವ ವಿದ್ಯಾರ್ಥಿಗಳಲ್ಲಿ ಪದವಿ ಹಂತದ ೬ ವಿದ್ಯಾರ್ಥಿಗಳು ಕನ್ನಡ ನಿಘಂಟನ್ನು ನೋಡಿರುವುದಿಲ್ಲ. ಉಳಿದ ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನು ಗಮನಿಸಿದ್ದು, ಪದದ ಅರ್ಥ ನೋಡಲು ೪೯ ವಿದ್ಯಾರ್ಥಿಗಳು ಇದನ್ನು ಬಳಸಿದ್ದಾರೆ. ವಿದ್ಯಾರ್ಥಿಗಳು ನಿಘಂಟನ್ನು ಪಠ್ಯಗಳಲ್ಲಿನ ಪದಗಳ ಅರ್ಥ ತಿಳಿಯಲು ಸಮಾನಾರ್ಥ, ನಾನಾರ್ಥ ಪದಗಳನ್ನು ಹುಡುಕಲು, ಪದ ಯಾವ ಸಂದರ್ಭದಲ್ಲಿ ಬಳಕೆಯಾಗಿದೆ ಎನ್ನುವುದನ್ನು ತಿಳಿಯಲು, ಒಂದು ಪದ ಅರ್ಥಬಳಕೆಯ ದೃಷ್ಟಿಯಿಂದ ಕಂಡಕೊಂಡ ಬದಲಾವಣೆ ತಿಳಿಯಲು, ಪದಪ್ರಯೋಗಗಳ ಉಲ್ಲೇಖಗಳನ್ನು ಗಮನಿಸಲು, ಪದದ ಸಂಪೂರ್ಣ ಇತಿಹಾಸ ತಿಳಿಯಲು ವಿದ್ಯಾರ್ಥಿಗಳು ಕನ್ನಡ ನಿಘಂಟನ್ನು ಬಳಸಿರುವುದು ಪ್ರಶ್ನಾವಳಿಯಿಂದ ಬಂದ ಮಾಹಿತಿಯಿಂದ ಕಂಡುಕೊಳ್ಳಲಾಗಿದೆ.

ಒಟ್ಟು ೩೯ ಬೋಧಕರಿಗೆ ಮಾದರಿ ಪ್ರಶ್ನಾವಳಿಯನ್ನು ನೀಡಲಾಗಿದ್ದು, ಇದರಲ್ಲಿ ೧೪ ಪ್ರಾಥಮಿಕ ಶಾಲಾ ಶಿಕ್ಷಕರು, ೭ ಪ್ರೌಢಶಾಲಾ ಶಿಕ್ಷಕರು, ೭ ಪದವಿಪೂರ್ವ ಕಾಲೇಜಿನ ಉಪನ್ಯಾಸಕರು, ಪದವಿ ಹಾಗೂ ಸ್ನಾತಕೋತ್ತರ ಪದವಿ ತರಗತಿಗಳ ಬೋಧನೆ ಮಾಡುವ ೧೧ ಅಧ್ಯಾಪಕರಿಗೆ ಪ್ರಶ್ನಾವಳಿಯನ್ನು ನೀಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಪ್ರಾಥಮಿಕ ಮತ್ತು ಪ್ರೌಢಶಾಲೆಯ ಶಿಕ್ಷಕರು ಕನ್ನಡ ನಿಘಂಟನ್ನು ಕಡಿಮೆ ಪ್ರಮಾಣದಲ್ಲಿ ನೋಡಿರುವುದು ಕಂಡುಬಂದಿದೆ. ಪದವಿಪೂರ್ವ ಹಾಗೂ ಪದವಿ ಕಾಲೇಜಿನ ಅಧ್ಯಾಪಕ ವರ್ಗದಲ್ಲಿ ಕೆಲವರು ನಿಘಂಟನ್ನು ಬೇರೆ ಬೇರೆ ಕಾರಣಗಳಿಗಾಗಿ ಬಳಸಿರುವುದು ಕಂಡುಬರುತ್ತದೆ. ಅಲ್ಲದೇ ಕೆಲವರು ವೈಯಕ್ತಿಕವಾಗಿ ಕನ್ನಡ ನಿಘಂಟು ಸಂಪುಟಗಳನ್ನು ತಮ್ಮ ಗ್ರಂಥಾಲಯದ ಭಾಗವಾಗಿಸಿದ್ದಾರೆ.

ಸಂಗ್ರಹಿಸಿದ ಮಾಹಿತಿಯಂತೆ ಉಳಿದೆಲ್ಲ ವಲಯಗಳಿಗಿಂತ ಶೈಕ್ಷಣಿಕ ವಲಯವು ಅಧಿಕವಾಗಿ ಕನ್ನಡ ನಿಘಂಟಿನ ಬಳಕೆಯನ್ನು ಮಾಡುತ್ತಿದೆ ಎನ್ನುವುದು ತಿಳಿದುಬರುತ್ತದೆ. ಶೈಕ್ಷಣಿಕ ವಲಯದ ಮಾಹಿತಿಯನ್ನು ಗಮನಿಸಿದಾಗ ಕನ್ನಡ ನಿಘಂಟನ್ನು ಶಬ್ದಾರ್ಥ ಜ್ಞಾನದ ತಿಳಿವಳಿಕೆಯನ್ನು ಪಡೆಯಲು, ಕ್ಲಿಷ್ಟ ಕನ್ನಡ ಪದಗಳ ಅರ್ಥ ಹಾಗೂ ಹಳಗನ್ನಡ ಪದಗಳ ಬಗ್ಗೆ ಅರಿಯಲು ಇದನ್ನು ಬಳಸುತ್ತಿರುವುದು ಕಂಡುಬಂದಿದೆ.

**೫.೨.೨. ಮಾಧ್ಯಮ ವಲಯ**

ಮಾಧ್ಯಮಗಳು ಜನರಿಗೆ ಸುದ್ದಿಯನ್ನು ತಲುಪಿಸುವ ಮುಖ್ಯ ಸಾಧನಗಳು. ಪತ್ರಿಕೆ, ರೇಡಿಯೋ, ದೂರದರ್ಶನ ಮೊದಲಾದವುಗಳು ಭಾಷೆಯ ಮೂಲಕ ಜನರನ್ನು ತಲುಪಿಸಿ ಭಾಷೆಯ ಬೆಳವಣಿಗೆಗೆ ಕಾರಣವಾಗಿವೆ. ಕನ್ನಡದ ಬೆಳವಣಿಗೆಯಲ್ಲಿ ಮಾಧ್ಯಮಗಳ ಪಾತ್ರ ಅಪಾರವಾದದ್ದು. ಈ ವಲಯದಲ್ಲಿ ಪತ್ರಿಕಾ ಮಾಧ್ಯಮವನ್ನು ಮಾತ್ರ ಪರಿಗಣಿಸಲಾಗಿದ್ದು ೧೨ ಜನ ವರದಿಗಾರರಿಗೆ ಪ್ರಶ್ನಾವಳಿಯನ್ನು ನೀಡಿ ಕನ್ನಡ ನಿಘಂಟಿನ ಬಳಕೆಯ ಪ್ರಮಾಣವನ್ನು ಇಲ್ಲಿ ದಾಖಲಿಸಲಾಗಿದೆ.

ವರದಿಗಾರರು ಪದಗಳ ಅರ್ಥಗಳನ್ನು ನೋಡಲು, ವಿಶೇಷ ವರದಿಗಳನ್ನು ಬರೆಯುವಾಗ ಪದದ ಇತಿಹಾಸ ಹಾಗೂ ಪ್ರಯೋಗಗಳನ್ನು ತಿಳಿದುಕೊಳ್ಳಲು ಕನ್ನಡ ನಿಘಂಟನ್ನು ಬಳಸಿರುವುದು ಕಂಡುಬಂದಿದೆ.

ಅನ್ಯಜ್ಞಾನ ಶಿಸ್ತುಗಳ ಮಾಹಿತಿಗಳು ಸಾಮಾನ್ಯವಾಗಿ ಇಂಗ್ಲಿಶಿನಲ್ಲಿ ಇರುತ್ತವೆ. ಅವುಗಳನ್ನು ಕನ್ನಡಕ್ಕೆ ನೀಡುವಾಗ ಅಗತ್ಯವಾದ ಪದಗಳನ್ನು ಎಷ್ಟೋ ವೇಳೆ ಸೃಷ್ಟಿಸಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಭಾಷಾಂತರ, ಹೊಸಪದ ಸೃಷ್ಟಿ, ಸಮಾಸಪದಗಳ ಬಳಕೆ ಮುಂತಾದ ಪದರಚನಾ ಕ್ರಮಗಳನ್ನು ವರದಿಗಾರರು ಅನುಸರಿಸಬೇಕಾಗುತ್ತದೆ. ಇಲ್ಲೆಲ್ಲ ಅರ್ಥಸಂದಿಗ್ಧಕ್ಕೆ ಎಡೆ ನೀಡದಂತೆ ಪದರಚನೆ ಮಾಡುವಾಗ ನಿಘಂಟುಗಳು ಸಹಾಯಕ್ಕೆ ಬರುತ್ತವೆ.

**೫.೨.೩. ಕಾನೂನು ವಲಯ**

ಈ ವಲಯದಲ್ಲಿ ೧೦ ವಕೀಲರಿಗೆ ಪ್ರಶ್ನಾವಳಿಯನ್ನು ನೀಡಿ ಮಾಹಿತಿಯನ್ನು ಪಡೆಯಲಾಗಿದೆ. ಇಂಗ್ಲಿಶ್‌ನಲ್ಲಿರುವ ಕಾನೂನಿನ ವಿಚಾರಗಳನ್ನು ಅರ್ಜಿದಾರರು, ಪೋಲಿಸರು, ಅಪರಾಧಿಗಳು ಮೊದಲಾದವರ ನಡುವೆ ಅವರಿಗೆ ಅರ್ಥವಾಗುವಂತೆ ತಿಳಿಸುವ ಸಂದರ್ಭದಲ್ಲಿ ವಕೀಲರಿಗೆ ಪದಗಳ ಅರಿವು ಅವಶ್ಯಕ. ಇಂತಹ ಸಂದರ್ಭದಲ್ಲಿ ಬಹುತೇಕ ವಕೀಲರು ನಿಘಂಟನ್ನು ಬಳಕೆ ಮಾಡುತ್ತಿರುವುದು ಅಧ್ಯಯನದಿಂದ ಕಂಡುಬಂದಿದೆ. ಇಂಗ್ಲಿಶಿನ ಕಾನೂನು ಪದಗಳಿಗೆ ಸೂಕ್ತವಾದ ಕನ್ನಡ ಪದಗಳಿಗಾಗಿ ಕನ್ನಡ ನಿಘಂಟನ್ನು ಗಮನಿಸುತ್ತಿರುವುದಾಗಿ ತಿಳಿಸಿದ್ದಾರೆ. ಕಾನೂನಿನ ಪದಗಳ ಅರ್ಥಗಳನ್ನು ತಿಳಿದುಕೊಳ್ಳಲು, ನಾನಾರ್ಥಗಳನ್ನು ಗಮನಿಸಲು ಕನ್ನಡ ನಿಘಂಟನ್ನು ಬಳಸಿರುವುದು ನೀಡಿರುವ ಮಾಹಿತಿಯಿಂದ ತಿಳಿದುಬಂದಿದೆ.

ನ್ಯಾಯಾಲಯಗಳಲ್ಲಿ ಬಳಕೆಯಾಗುವ ಕನ್ನಡಕ್ಕೆ ಖಚಿತವಾದ ಅರ್ಥಗಳಿರಬೇಕು. ಈ ವಲಯದಲ್ಲಿರುವ ಅನೇಕ ಪದಗಳು ಇಂಗ್ಲಿಶ್, ಅರೇಬಿಕ್ ಮುಂತಾದ ಅನ್ಯಭಾಷೆಗಳಿಂದ ಬಂದ ಪದಗಳಿದ್ದು, ಅವುಗಳನ್ನು ಸಾಮಾನ್ಯ ಜನರಿಗೆ ಸುಲಭವಾಗಿ ಅರ್ಥೈಸಲು ನಿಘಂಟುಗಳ ಸಹಾಯ ಅಗತ್ಯ. ವಕೀಲರು ಕಾನೂನಿನ ಪರಿಕಲ್ಪನೆಗಳನ್ನು, ಪರಿಭಾಷೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಅವನ್ನು ತಮ್ಮ ಕಕ್ಷಿದಾರರಿಗೆ ತಿಳಿಸುವಲ್ಲಿ, ಕೋರ್ಟಿನಲ್ಲಿ ವಾದ ಮಾಡುವಲ್ಲಿ ಈ ನಿಘಂಟನ್ನು ಬಳಸುತ್ತಿದ್ದಾರೆ.

**೫.೨.೪. ಇತರೆ ವಲಯಗಳು**

ಕನ್ನಡ ನಿಘಂಟನ್ನು ಇತರೆ ವಲಯದಲ್ಲಿ ಅಂದರೆ ಲೇಖಕ/ಕವಿ, ಓದುಗ, ಪ್ರಕಾಶಕ, ಆಡಳಿತಗಾರ ಮೊದಲಾದವರು ಬಳಸಿರುವುದು ಕಂಡುಬಂದಿದೆ. ೧೪ ಜನರಿಗೆ ಪ್ರಶ್ನಾವಳಿಯನ್ನು ನೀಡಿ ಮಾಹಿತಿ ಸಂಗ್ರಹಿಸಲಾಗಿದೆ.

ಲೇಖನ ಕಲೆ ವಿಶಿಷ್ಟವಾದದ್ದು. ಜನರಿಗೆ ಅದು ಅರ್ಥವಾಗುವಂತಿರಬೇಕು. ಗಾಂಭೀರ್ಯವೂ ಇರಬೇಕು. ಇಂತಹ ಸಂದರ್ಭದಲ್ಲಿ ಜನಬಳಕೆಯಲ್ಲಿರುವ ಪದಗಳನ್ನು ಬಳಸಿದರೂ ಅವುಗಳ ಬೇರೆ

ಬೇರೆ ಅರ್ಥಗಳನ್ನು ಸಾಂದರ್ಭಿಕವಾಗಿ ಸೂಚಿಸಲು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನು ಬಳಸುವುದಾಗಿ ಮಾಹಿತಿ ನೀಡಿದ್ದಾರೆ.

ಕನ್ನಡ ಪದಸಂಪತ್ತಿನ ಪ್ರತಿನಿಧಿಯಾದ ಸಾಹಿತ್ಯ ಪರಿಷತ್ತಿನ ನಿಘಂಟು ಸಾಂದರ್ಭಿಕ ಪದಗಳನ್ನು ಬಳಸಲು, ಹೊಸ ಪದಗಳನ್ನು ರಚಿಸಲು ಸಹಾಯಕವಾಗಿದೆ. ಕನ್ನಡ ನಿಘಂಟಿನಿಂದ ಈ ಅನುಕೂಲಗಳು ಇರುವುದರಿಂದ ಇದನ್ನು ಬಳಸುತ್ತಿರುವುದಾಗಿ ತಿಳಿಸಲಾಗಿದೆ.

ಪದಗಳಿಲ್ಲದೇ ನಿಘಂಟಿಲ್ಲ. ಪದ ಮತ್ತು ಅರ್ಥದ ಸಂಬಂಧವನ್ನು ಗ್ರಹಿಸುವಂತೆ ಮಾಡುವುದು ನಿಘಂಟಾಗಿದ್ದರಿಂದ ಓದುಗನಿಗೆ ನಿಘಂಟುಗಳು ಸಹಕಾರಿಯಾಗಿವೆ. ಓದುಗನಿಗೆ ಅರ್ಥ ಗೊತ್ತಿಲ್ಲವೆಂದಾಗ ನಿಘಂಟಿನ ಸಹಾಯವನ್ನು ಪಡೆಯುತ್ತಾನೆ. ಆತನು ಕಾವ್ಯವನ್ನೋ, ಕಥೆಯನ್ನೋ, ಕಾದಂಬರಿಯನ್ನೋ, ಲೇಖನವನ್ನೋ ಓದುವಾಗ ನಿಘಂಟಿನ ಬಳಕೆಯ ಅವಶ್ಯಕತೆ ಹೆಚ್ಚಿರುತ್ತದೆ. ಇಂತಹ ಸಂದರ್ಭದಲ್ಲಿ ಎಲ್ಲ ಕ್ಷೇತ್ರಗಳ ಪದಸಂಪತ್ತನ್ನು ಹೊಂದಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಪರಿಶೀಲನೆ ಅಧಿಕವಾಗಿರುತ್ತದೆ. ಮಾಹಿತಿ ನೀಡಿರುವ ಬಹುತೇಕ ಓದುಗರು ತಾವು ಅರ್ಥಕ್ಕೋಸ್ಕರ ನಿಘಂಟನ್ನು ಬಳಸುತ್ತಿರುವುದಾಗಿ ತಿಳಿಸಿದ್ದಾರೆ.

ಹೀಗೆ ಕನ್ನಡ ನಿಘಂಟಿನ ಬಳಕೆಯು ಆಡಳಿತ ವಲಯದಲ್ಲೂ ಇದೆ. ಆಡಳಿತದಲ್ಲಿ ಸುತ್ತೋಲೆಗಳನ್ನು ಹೊರಡಿಸುವಾಗ, ಪತ್ರಗಳನ್ನು ಬರೆಯುವಾಗ, ವರದಿ ತಯಾರಿಸುವಾಗ ಕ್ಲಿಷ್ಟ ಪದಗಳ ಬದಲು ಜನಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗಲು ಸುಲಭವಾದ ಪರ್ಯಾಯ ಪದಗಳನ್ನು ಬಳಸಲು ಕನ್ನಡ ನಿಘಂಟನ್ನು ಬಳಸಲಾಗುತ್ತದೆ. ಕನ್ನಡದಲ್ಲಿ ಪದಗಳನ್ನು ಬರೆಯುವಾಗ ಮಹಾಪ್ರಾಣ, ಅಲ್ಪಪ್ರಾಣ, ಒತ್ತಕ್ಷರ, ಅನುನಾಸಿಕಗಳ ಬಳಕೆಯಲ್ಲಿ ಗೊಂದಲ ನಿವಾರಣೆಗೆ ಬಳಸಲಾಗಿದೆ.

ಕನ್ನಡ ರಚನೆಯನ್ನು ತಿಳಿದುಕೊಂಡು ಹೊಸ ಪದ ರಚನೆಗೆ ಇರುವ ನಿಯಮಗಳನ್ನು ತಿಳಿಯಲು ಬಳಸಲಾಗಿದೆ. ಪದರಚನೆಗೆ ಇರುವ ನಿಯಮಗಳನ್ನು ತಿಳಿಯಲು ಬಳಸಲಾಗಿದೆ. ಒಂದು ಪದದ ಬಳಕೆಯ ಸಂದರ್ಭ, ಅದು ಕಾಲಾಂತರದಲ್ಲಿ ಬಳಕೆಗೊಂಡ ಬಗೆ ಮತ್ತು ಅದರ ಅರ್ಥದಲ್ಲಾದ ವ್ಯತ್ಯಾಸಗಳನ್ನು ಅರಿಯಲು ಈ ನಿಘಂಟನ್ನು ಬಳಸಲಾಗಿದೆ. ಪದ ನಿಷ್ಪತ್ತಿಯನ್ನು ತಿಳಿಯಲು ಹಾಗೂ ಪದದ ಮೂಲವನ್ನು (ದೇಶ್ಯವೋ/ಅನ್ಯದೇಶ್ಯವೋ) ತಿಳಿಯಲು ಈ ನಿಘಂಟು ಸಹಕಾರಿಯಾಗಿದೆ. ಹಳಗನ್ನಡ ಪದಗಳ ಅರ್ಥ ಹುಡುಕಲು ಸಹಾಯಕವಾಗಿದೆ. ಒಂದು ಪದ ಯಾವ ಸಂದರ್ಭದಲ್ಲಿ ಬಳಕೆಯಾಗಿದೆ ಎನ್ನುವುದನ್ನು ತಿಳಿಯಲು ಸಹಾಯಕವಾಗಿದೆ ಹಾಗೂ ಭಾಷೆಯ ಘಟಕಗಳನ್ನು (ವ್ಯಾಕರಣ ವರ್ಗ) ಕುರಿತ ಮಾಹಿತಿ ಅರಿಯಲು, ಪದಗಳಿಗೆ ಇರುವ ಅರ್ಥವಿಸ್ತಾರ, ಅನೇಕಾರ್ಥಗಳನ್ನು ಅರಿಯಲು, ಕಾನೂನು, ಧಾರ್ಮಿಕ, ಪತ್ರಿಕಾ ಸಾಹಿತ್ಯಿಕ ಅಧ್ಯಯನ ಶಿಸ್ತುಗಳ ಪದಗಳನ್ನು ಹುಡುಕಲು ಈ ನಿಘಂಟನ್ನು ಬಳಸಲಾಗುವುದೆಂದು ಮಾಹಿತಿಯಿಂದ ತಿಳಿದುಬಂದಿದೆ.

## ೫.೩. ಕನ್ನಡ ನಿಘಂಟಿನ ಪರಿಷ್ಕರಣೆ

ಬೃಹತ್ ಸಂಪುಟಗಳಲ್ಲಿರುವ ಕನ್ನಡ ನಿಘಂಟನ್ನು ಬಳಸುವಂಥದ್ದು ಕಷ್ಟದ ಕೆಲಸ. ಇದನ್ನು ಇಂದಿನ ಅಗತ್ಯತೆಗಳಿಗೆ ಅನುಗುಣವಾಗಿ ಪರಿಷ್ಕರಿಸಬೇಕು ಎನ್ನುವ ಹಲವು ಅಭಿಪ್ರಾಯಗಳನ್ನು ಪ್ರಶ್ನಾವಳಿಯಿಂದ ಬಂದ ಮಾಹಿತಿಯನ್ನಾಧರಿಸಿ ವಿಷಯಗಳನ್ನು ದಾಖಲಿಸಲಾಗಿದೆ.

೧೯೯೫ರಲ್ಲಿ ಸಂಪೂರ್ಣವಾಗಿ ಎಂಟು ಸಂಪುಟಗಳಲ್ಲಿ ಹೊರಬಂದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಹೊಸ ಪದಗಳನ್ನೊಳಗೊಂಡು ಪರಿಷ್ಕರಣವಾಗಬೇಕಿದೆ. ಪರಿಷ್ಕರಣವೆಂದರೆ ತಿದ್ದುಪಡಿ, ತಿದ್ದುಪಾಟು. ಅಂದರೆ ದಾಖಲಾದ ಪದಗಳಿಗೆ ಹೊಸ ಅರ್ಥವನ್ನು ನೀಡುವುದು, ಹೊಸ ಪದಗಳನ್ನು ದಾಖಲಿಸಿ ವ್ಯಾಖ್ಯೆ ನೀಡುವ, ಪ್ರಯೋಗಗಳನ್ನು ಕೊಡುವ ಮೊದಲಾದ ಕೆಲಸಗಳಾಗಬೇಕಿದೆ.

ಕಾಲಕಾಲಕ್ಕೆ ಕನ್ನಡ ನಿಘಂಟನ್ನು ಬಳಸುವವರ ಪ್ರಮಾಣ ಅಧಿಕವಾಗುವುದರಿಂದ ನಿಘಂಟಿನ ಸಂಪುಟಗಳನ್ನು ಸುಲಭವಾಗಿ ದೊರೆಯುವಂತೆ ವ್ಯವಸ್ಥೆ ಮಾಡಬೇಕು. ನಿಘಂಟಿನ ಪರಿಷ್ಕರಣೆ ನಿರಂತರವಾಗಿ ನಡೆಯಬೇಕು. ಭಾಷೆ ಬದಲಾದಂತೆ ಭಾಷೆಯಲ್ಲಿನ ಪದಗಳು ಬದಲಾಗುತ್ತವೆ. ಆ ಪದಗಳ ಅರ್ಥವೂ ಬದಲಾಗುತ್ತದೆ. ಬದಲಾವಣೆ ಹೊಂದಿದ ಪದಗಳ ದಾಖಲಾತಿಗಾಗಿ ನಿಘಂಟು ಪರಿಷ್ಕರಣೆಯಾಗಬೇಕಿದೆ.

ಹೊಸ ಪದಗಳನ್ನು, ತಾಂತ್ರಿಕ ಪದಗಳು, ಆಡುಮಾತಿನ ಪದಗಳನ್ನು ನಿಘಂಟಿನಲ್ಲಿ ಸೇರಿಸಬೇಕು. ಇತ್ತೀಚೆಗೆ ಸಾಮಾಜಿಕ ಜಾಲತಾಣಗಳ ಬಳಕೆ ಅಧಿಕವಾಗಿರುವುದರಿಂದ ನಿಘಂಟನ್ನು ಸಾಮಾಜಿಕ ಜಾಲತಾಣಗಳಲ್ಲಿ ಅಳವಡಿಸಿದರೆ ಬಳಸಲು ಸಹಾಯಕವಾಗುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತು ಈಗಿರುವ ಮುದ್ರಿತ ನಿಘಂಟು ಸಂಪುಟಗಳನ್ನು ತಂತ್ರಜ್ಞಾನದ ವಿವಿಧ ವ್ಯವಸ್ಥೆಗಳಿಗೆ ಅಳವಡಿಸಿ ಕನ್ನಡದ ಸ್ಥಿತಿ ಸುಧಾರಣೆ ಮಾಡುವಲ್ಲಿ ಯೋಜನೆಗಳನ್ನು ಕೈಗೊಳ್ಳಬೇಕಿದೆ. ಇಂತಹ ಯೋಜನೆಗಳಲ್ಲಿ ಕನ್ನಡ ನಿಘಂಟುಗಳನ್ನು ಮುಕ್ತವಾಗಿ ದೊರಕುವಂತೆ ಮಾಡಬೇಕಿದೆ. ನಿಘಂಟುಗಳ ಸುಲಭ ಬಳಕೆಯಿಂದ ಭಾಷೆಯ ಬಳಕೆ ಮತ್ತು ಪ್ರಸಾರವಾಗುತ್ತದೆ. ಕನ್ನಡ ನಿಘಂಟಿನ ಸಂಪುಟಗಳು ಕಂಪ್ಯೂಟರ್‌ನಲ್ಲಿ ಅಳವಡಿಕೆಯಾದರೆ ಬಳಕೆದಾರರಿಗೆ ಬೇಕೆನಿಸಿದ ಸಂದರ್ಭದಲ್ಲಿ ನಿಘಂಟನ್ನು ಬಳಸಲು ಸಹಾಯಕವಾಗುತ್ತದೆ. ಕನ್ನಡ ನಿಘಂಟು ಸ್ಮಾರ್ಟ್ ಫೋನ್‌ಗಳು, ಟ್ಯಾಬ್ಲೆಟ್‌ಗಳು ಹಾಗೂ ಇ-ಬುಕ್ ರೀಡರ್ ಉಪಕರಣಗಳು ಮೊದಲಾದ ವಿದ್ಯುನ್ಮಾನ ರೂಪದಲ್ಲಿ ದೊರಕುವಂತಾಗಬೇಕು.

ಇಂಗ್ಲಿಶ್ ಭಾಷೆಯ ಖ್ಯಾತ ನಿಘಂಟು ರಚನಾಕಾರ ಜಾನ್ಸನ್ "ನಿಘಂಟುಗಳನ್ನು ಗಡಿಯಾರಗಳಿಗೆ ಹೋಲಿಸಬಹುದು. ಅತ್ಯಂತ ಅಬದ್ಧವಾದ ನಿಘಂಟೂ ಕೂಡ ಯಾವ ನಿಘಂಟುಗಳೂ ಇಲ್ಲದಿರುವುದಕ್ಕಿಂತ ಮೇಲು. ಅತ್ಯಂತ ಶ್ರೇಷ್ಠವಾದ ನಿಘಂಟು ಕೂಡ ತೋರಿಸುವ ಅರ್ಥ ಸರಿ ಅಥವಾ ತಪ್ಪು ಎಂದು ಹೇಳಲಾಗುವುದಿಲ್ಲ".[೨] ಎನ್ನುವ ಹೇಳಿಕೆ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ

ಕನ್ನಡ ನಿಘಂಟಿನ ಪ್ರತಿ ಸಂಪುಟದ ಮುಖಪುಟದಲ್ಲಿರುವ ಕೇಶಿರಾಜನ "ಶಬ್ದಪಾರಮಾರ್ಗಮಶಕ್ಯಂ" ಎನ್ನುವ ಮಾತು ಪದಪ್ರಪಂಚದ ಮಹತ್ವವನ್ನು ಕಟ್ಟಿಕೊಡುತ್ತದೆ. ಅಂದರೆ ಶಬ್ದಸಾಗರವನ್ನು ದಾಟುವ ಕಾರ್ಯ ಅಸಾಧ್ಯವಾದುದು. ಭಾಷೆಯಲ್ಲಿ ಪದಪಯಣ ನಿರಂತರವಾದದ್ದು ಕೊನೆಯಿಲ್ಲದ್ದಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕನ್ನಡ ವಿದ್ವತ್‌ಲೋಕದ ಆಸಕ್ತಿ, ಉತ್ಸಾಹ ಹಾಗೂ ಭಾಷಾಬದ್ಧತೆಯ ಕಾರ್ಯವಾಗಿದ್ದು, ಈ ಕನ್ನಡ ನಿಘಂಟು ಹಲವಾರು ಹೊಸ ಪದಗಳನ್ನು ಸೇರಿಸಿ ಕೊಂಡು ಪದಗಳ ಪಟ್ಟಿಯನ್ನು ವೃದ್ಧಿಸಿಕೊಂಡು ವಿಶಾಲವಾಗಬೇಕಿದೆ. ಕನ್ನಡ ಭಾಷೆಯ ಪದಗಳ ಅರ್ಥ ಮತ್ತು ಅದರ ಬಳಕೆಯ ಬಗ್ಗೆ ನಿಖರ ಮಾಹಿತಿ ನೀಡಬೇಕಾದರೆ ಕಾಲಕಾಲಕ್ಕೆ ಪರಿಷ್ಕೃತಗೊಳ್ಳಬೇಕಿದೆ.

ಕನ್ನಡ ನಿಘಂಟಿನ ಎಲ್ಲ ಸಂಪುಟಗಳನ್ನು ಪರಿಷ್ಕರಿಸಿ ಪುನರ್‌ಮುದ್ರಿಸಬೇಕಾಗಿದೆ. ಜಾನಪದ, ವಿಜ್ಞಾನ, ತಂತ್ರಜ್ಞಾನ, ಮಾಧ್ಯಮ, ಕಾನೂನು ಮೊದಲಾದ ವಲಯಗಳ ಪಾರಿಭಾಷಿಕ ಪದಗಳನ್ನು ದಾಖಲಿಸುವ, ಈ ವಲಯಗಳ ವಿಶೇಷ ಪದಗಳಿಗೆ ಕನ್ನಡದಲ್ಲಿ ಹೊಸ ಪದಗಳನ್ನು ಸೃಷ್ಟಿಸುವ ಕೆಲಸವಾಗಬೇಕಿದೆ.

ಕನ್ನಡವನ್ನು ಉಳಿಸಬೇಕೆಂದರೆ ಅದನ್ನು ಬಿಡದೇ ಹೆಚ್ಚೆಚ್ಚು ಬಳಸಿದಾಗ ಬೆಳೆಯುತ್ತದೆ. ಕನ್ನಡ ನಿಘಂಟು ಪರಿಷ್ಕರಣೆಗೆ ಕೇವಲ ಬೌದ್ಧಿಕ ಸಂಪನ್ಮೂಲವಷ್ಟೇ ಸಾಕಾಗುವುದಿಲ್ಲ. ಅದಕ್ಕೆ ಅಗತ್ಯವಿರುವ ತಾಂತ್ರಿಕ, ಆರ್ಥಿಕ ಸಂಪನ್ಮೂಲಗಳು ನಿರಂತರವಾಗಿ ಲಭ್ಯವಾಗಬೇಕು. ಪರಿಷತ್ತಿನ ನಿಘಂಟು ಹೊಸ ಕಾಲದ ಅಗತ್ಯಗಳಿಗೆ ತನ್ನನ್ನು ತಾನು ಮರು ರೂಪಿಸಿಕೊಳ್ಳಬೇಕಾಗಿದೆ. ಈ ಕನ್ನಡ ನಿಘಂಟು ತನ್ನ ಬಳಕೆಯ ವಲಯಗಳ ನೆಲೆಗಳ ಸಾಧ್ಯತೆಗಳನ್ನು ಹೆಚ್ಚಿಸಿಕೊಳ್ಳುವ, ಕಂಡುಕೊಳ್ಳುವ, ಕೂಡಿಸಿಕೊಳ್ಳುವುದಕ್ಕಿಂತ ಮಿತಿಗೊಳಿಸಿಕೊಂಡಿದೆ ಎನ್ನಬಹುದು. ಇವತ್ತಿನ ಕನ್ನಡದ ಅಗತ್ಯ, ಆಯ್ಕೆ, ಪ್ರಶ್ನೆಗಳು ಬಹುಮುಖಿಯಾಗಿದ್ದು, ಇವುಗಳಿಗೆ ಮುಖಾಮುಖಿಯಾಗುವ ಅಗತ್ಯತೆ ಪರಿಷತ್ತಿನ ನಿಘಂಟಿಗಿದೆ.

ಆಧುನಿಕತೆಯ ಬದಲಾವಣೆಗಳಿಗೆ ಭಾಷೆ ಹೊಂದಿಕೊಂಡು, ಅವುಗಳನ್ನು ಅಳವಡಿಸಿಕೊಳ್ಳಬೇಕು. ತಂತ್ರಜ್ಞಾನದ ಬೆಳವಣಿಗೆಯ ಪರಿಣಾಮವಾಗಿ ಭಾಷೆಗಳ ಕಲಿಕೆಯ ಸಾಧನಗಳು ಬಂದಿವೆ. ಇವುಗಳನ್ನು ಸಮರ್ಥವಾಗಿ ಬಳಸುವ ಆಸಕ್ತಿ ಮತ್ತು ತಜ್ಞತೆ ಇರುವ ಯುವಜನತೆಯನ್ನು ನೇಮಿಸುವುದರ ಮೂಲಕ ಸಾಹಿತ್ಯ ಪರಿಷತ್ತು ತನ್ನ ಕಾರ್ಯಗಳನ್ನು ವಿಸ್ತರಿಸಿಕೊಳ್ಳುವುದರ ಮೂಲಕ ನಿಘಂಟು ಸಮಿತಿಯ ಪುನರ್‌ರಚನೆ, ಡಿಜಟಲೀಕರಣಕ್ಕೆ ಆದ್ಯತೆ ನೀಡಬೇಕಾಗಿದೆ. ಈಗಾಗಲೇ ತಂತ್ರಜ್ಞಾನಕ್ಕೆ ಹೊಂದಿಗೊಳ್ಳುವ ಕೆಲಸವನ್ನು ಕನ್ನಡ ಸಾಹಿತ್ಯ ಪರಿಷತ್ತು ಮಾಡುತ್ತಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ನಿಘಂಟು ಆ್ಯಪ್ ಮೂಲಕ ಹೊರಬಂದಿದೆ. ಅದೇ ರೀತಿ MHRDಯವರ 'ಭಾರತವಾಣಿ' ಎನ್ನುವ ಮೊಬೈಲ್ ಅಪ್ಲಿಕೇಷನ್ ಹಾಗೂ ಕಂಪ್ಯೂಟರ್ ಆಧಾರಿತ ವೆಬ್‌ಸೈಟ್ ಈಗಾಗಲೇ ಸಾಕಷ್ಟು ಜನಮನ್ನಣೆ ಗಳಿಸಿದೆ. ಮೈಸೂರಿನ ಭಾರತೀಯ

ಭಾಷಾ ಸಂಸ್ಥಾನದಲ್ಲಿ (ಸಿಐಐಎಲ್) ಕಾರ್ಯನಿರ್ವಹಿಸುತ್ತಿರುವ ಈ ಯೋಜನೆಯು ಇತ್ತೀಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ಒಡಂಬಡಿಕೆ ಮಾಡಿಕೊಂಡಿದ್ದು, ಪರಿಷತ್ತಿನ ಸಹಯೋಗದಲ್ಲಿ ಮತ್ತಷ್ಟು ನಿಘಂಟು ಸೇವೆ ನೀಡಲು ಮುಂದಾಗಿದೆ. ಇದರ ಜೊತೆಗೆ ಕನ್ನಡ ಸಾಹಿತ್ಯ ಪರಿಷತ್ ೨೦೧೬ರ ಡಿಸೆಂಬರ್‌ನಲ್ಲಿ ಬಿಡುಗಡೆಗೊಳಿಸಿದ್ದ ನಿಘಂಟನ್ನು (ಕಸಾಪ ಸಂಕ್ಷಿಪ್ತ ನಿಘಂಟು) ಇದೀಗ ಭಾರತವಾಣಿಗೆ ಸೇರಿಸಲಾಗಿದೆ. ಯಾವುದೇ ಕನ್ನಡ ಪದವನ್ನು ಅಪ್ಲಿಕೇಷನ್‌ನಲ್ಲಿ ಟೈಪ್ ಮಾಡಿದರೆ, ಅದರ ಅರ್ಥವು ಕನ್ನಡ ಸಾಹಿತ್ಯ ಪರಿಷತ್ತು ನಿಘಂಟಿನಲ್ಲೂ ತೆರೆದುಕೊಳ್ಳುತ್ತಿದೆ. ಶೀಘ್ರವೇ ಕನ್ನಡ ನಿಘಂಟು ಭಾರತವಾಣಿ ಯೋಜನೆಗೆ ಸೇರ್ಪಡೆಯಾಗಲಿದೆ. ಒಟ್ಟು ಎಂಟು ಸಂಪುಟಗಳಲ್ಲಿ ಈ ನಿಘಂಟಿದ್ದು, ಅವಷ್ಟನ್ನೂ ಡಿಜಿಟಲೀಕರಣ ಮಾಡಲಾಗುತ್ತದೆ. ಒಟ್ಟಾರೆಯಾಗಿ ೨೦ ಲಕ್ಷ ಪದಗಳು ಈ ನಿಘಂಟಿನ ಮೂಲಕ ಭಾರತವಾಣಿ ಅಪ್ಲಿಕೇಷನ್‌ಗೆ ಸೇರಲಿವೆ. ಇಪ್ಪತ್ತು ಸಾವಿರ ಪುಟಗಳ ಈ ಸಂಪುಟಗಳನ್ನು ಡಿಜಿಟಲೀಕರಿಸುವ ಕಾರ್ಯ ಈಗಾಗಲೇ ಆರಂಭವಾಗಿದೆ. ಈ ಮೂಲಕ ಭಾರತವಾಣಿ ಯೋಜನೆಯು ಭಾರತೀಯ ಭಾಷೆಗಳ ಮೂಲಕ ಜ್ಞಾನವನ್ನು ನೀಡುತ್ತದೆ. ಕನ್ನಡ ನಿಘಂಟು ಸಂಪುಟಗಳು http://kannada.bharatavani.in/book ಇಲ್ಲಿ pdf ರೂಪದಲ್ಲಿದ್ದು, ಇದನ್ನು ಡೌನ್‌ಲೋಡ್ ಮಾಡಿಕೊಳ್ಳಬಹುದು. ಒಂದೊಂದು ಸಂಪುಟದಲ್ಲಿ ಸಾವಿರಕ್ಕೂ ಹೆಚ್ಚು ಪುಟಗಳಿವೆ. ಲಕ್ಷಕ್ಕಿಂತ ಅಧಿಕ ಪದಗಳಿವೆ. ಆಸಕ್ತರು ಈ ಕೆಳಕಂಡ ಜಾಲತಾಣದಲ್ಲಿ ಶಬ್ದಕೋಶವನ್ನು ಪಡೆದುಕೊಳ್ಳಬಹುದು.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಹಲವು ವೈವಿಧ್ಯಗಳಿಂದ ಕೂಡಿದ ಶಬ್ದಸಾಗರವಾಗಿದ್ದು, ಇದನ್ನು ಸಾಮಾನ್ಯ ಜನರು ಬಳಸಿದಾಗ ಕನ್ನಡ ಭಾಷೆ ಉಳಿಯುತ್ತದೆ, ಬೆಳೆಯುತ್ತದೆ.

**ಕೊನೆಟಿಪ್ಪಣಿ**

೧. ನಾರಾಯಣ ಕೆ.ವಿ., ೨೦೧೦, ತೊಂಡುಮೇವು ಕಂತೆ ಆರು, ಪು.೧೭೬-೧೮೦

೨. ಪಾದೇಕಲ್ಲು ವಿಷ್ಣುಭಟ್ಟ, (ಸಂ), ೨೦೧೧, ವಿದ್ವಜ್ಜೀವಿತ, ಪು.೧೧೩

* * * *

ಅಧ್ಯಾಯ ಆರು

# ಸಮಾರೋಪ

## ೬.೧ ಅಧ್ಯಯನದ ವೈಶಿಷ್ಟ್ಯಗಳು

ಪದರೂಪಗಳನ್ನು ಮತ್ತು ಪದದ ಅರ್ಥಗಳನ್ನು ಖಚಿತಪಡಿಸುವುದು ನಿಘಂಟುಗಳ ಬಹುಮುಖ್ಯ ಉದ್ದೇಶವಾಗಿದ್ದು, ಕಾಲಕಾಲಕ್ಕೆ ಬದಲಾಗುವ ಭಾಷೆಯ ಸ್ವರೂಪವನ್ನು, ಪದಚರಿತ್ರೆಯನ್ನು ಅವು ದಾಖಲಿಸುತ್ತವೆ.  ಈ ಉದ್ದೇಶವನ್ನು ಹಿನ್ನೆಲೆಯಾಗಿಟ್ಟುಕೊಂಡು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ರಚನೆಯಾಗಿದೆ. ಇದರ ಸ್ವರೂಪವನ್ನು ಈ ರೀತಿ ಗುರುತಿಸಬಹುದು.

ಎಂಟು ಬೃಹತ್ ಸಂಪುಟಗಳಲ್ಲಿ ಸಿದ್ಧಗೊಂಡ ಈ ನಿಘಂಟಿನಲ್ಲಿ ಮುಖ್ಯ ನಮೂದು, ಅದರ ಪರ್ಯಾಯ, ಬರವಣಿಗೆಯ ರೂಪಗಳು, ವ್ಯಾಕರಣ ವರ್ಗ, ಪದ, ಅರ್ಥಗಳು ಸಮರ್ಥನೆಗಳಾಗಿ ಉಲ್ಲೇಖಗಳು, ಅಗತ್ಯವಿದ್ದಾಗ ಸಾಧಿತರೂಪಗಳು ಇವೆಲ್ಲವನ್ನೂ ನೀಡಿ ಕೊನೆಗೆ ಆ ನಮೂದಿನ ಪದರಚನೆಯ ಸಾಧ್ಯತೆಯನ್ನು ಮತ್ತು ಆಕರವನ್ನು ಸೂಚಿಸಲಾಗಿದೆ.

ಈ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಪ್ರಮಾಣೀಕೃತವೂ ಗ್ರಾಂಥಿಕವೂ ಆದ ಭಾಷೆಯಲ್ಲಿ ರಚಿತವಾದ ಆಕರ ಗ್ರಂಥಗಳನ್ನು ಆಧರಿಸಿ ಸಿದ್ಧವಾಗಿದೆ. ಇದು ಅಕ್ಷರಸ್ಥರಿಗೆ ಉಪಯುಕ್ತವೆನಿಸಿದ್ದು, ಗ್ರಾಂಥಿಕ ಸಾಹಿತ್ಯದ ಅಧ್ಯಯನದಲ್ಲಿ ಮಾತ್ರ ಬಳಸಬಹುದಾಗಿದೆ.

ಕನ್ನಡ ನಿಘಂಟು ಉಳಿದೆಲ್ಲ ನಿಘಂಟುಗಳಿಗಿಂತ ಭಿನ್ನಮಾತ್ರವಲ್ಲ. ವಿಸ್ತೃತವೂ ವೈವಿಧ್ಯಮಯವೂ ಆಗಿದೆ. ಇದು ಹಲವು ವಿದ್ವಾಂಸರು ಅನೇಕ ದಶಕಗಳವರೆಗೆ ಶ್ರಮದಿಂದ ರೂಪಿಸಿದ ನಿಘಂಟಾಗಿದ್ದು, ಇದನ್ನು ಕನ್ನಡದ ಪ್ರಾತಿನಿಧಿಕ ಪದಕೋಶ ಎಂದು ಕರೆಯುತ್ತಾರೆ. ಆದರೆ ಈ ನಿಘಂಟು ಕನ್ನಡದ ಗ್ರಂಥಸ್ಥ ಕೃತಿಗಳನ್ನು ಆಧರಿಸಿ ರಚನೆಯಾಗಿದೆ.

ಪದಕೋಶದಲ್ಲಿ ಎಷ್ಟು ಪದಗಳಿವೆ ಎನ್ನುವುದು ನಿಘಂಟಿನ ಬೃಹತ್ ಗಾತ್ರದ ಸ್ವರೂಪವನ್ನು ತಿಳಿಸಿದರೆ, ಈ ನಿಘಂಟಿನಲ್ಲಿರುವ ಪದಗಳ ಅರ್ಥ ಸಾಧ್ಯತೆಗಳು ನಿಘಂಟಿನ ಮಹತ್ವವನ್ನು ತಿಳಿಸುತ್ತವೆ. ಈ ಹಿನ್ನೆಲೆಯಲ್ಲಿ ಭಾಷೆ ಕಾಲಕಾಲಕ್ಕೆ ಬದಲಾಗುವಂತೆ ಕನ್ನಡ ನಿಘಂಟು ಮಹತ್ವ ಪಡೆಯಲು, ಪರಿಷ್ಕರಣೆಯಾಗಿ ಬೆಳೆಯಬೇಕಿದೆ.

## ೬.೨ ಅಧ್ಯಯನದ ಫಲಿತಗಳು

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕುರಿತ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಿಕೊಂಡ ನಂತರ ನಿಘಂಟು ಕುರಿತ ಅಧ್ಯಯನಗಳ ಸಮೀಕ್ಷೆಯನ್ನು ಕೈಗೊಂಡು ಇದುವರೆಗಿನ ಚರ್ಚೆಗಳನ್ನು ಗುರುತಿಸಲಾಗಿದೆ.

ಇದರಲ್ಲಿ ನಿಘಂಟಿನ ಆವಶ್ಯಕತೆ ಹಾಗೂ ಇಂದಿನ ಅಗತ್ಯಕ್ಕೆ ತಕ್ಕಂತೆ ತಂತ್ರಜ್ಞಾನಕ್ಕೆ ಅಳವಡಿಸುವ ಕುರಿತು ಚರ್ಚೆಗಳು ಆಗುತ್ತಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಇತಿಹಾಸ ಹಾಗೂ ರಚನೆಯ ಹಿನ್ನೆಲೆಯನ್ನು ಗಮನಿಸುತ್ತ, ಪ್ರಸ್ತುತ ಅಧ್ಯಯನ ವಸ್ತುವಾದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನೆಗೆ ಕಾರಣವಾದ ಅಂಶಗಳನ್ನು ಅಂದರೆ ಡಿ.ಎಲ್. ನರಸಿಂಹಾಚಾರ್ ಅವರ ಅಭಿಪ್ರಾಯದಿಂದ ಆರಂಭ ಮಾಡಿ ಎಲ್ಲವನ್ನು ಕ್ರೋಢೀಕರಿಸಲಾಗಿದೆ.

ಅಧ್ಯಯನದ ಮುಖ್ಯ ಭಾಗವಾದ ಕನ್ನಡ ನಿಘಂಟಿನ ರಾಚನಿಕ, ಭಾಷಿಕ ವೈಶಿಷ್ಟ್ಯಗಳನ್ನು ಗುರುತಿಸುತ್ತ, ನಿಘಂಟಿನಲ್ಲಿ ದಾಖಲಾದ ಸಮಾನಾರ್ಥಕ, ನಾನಾರ್ಥಕ, ನಿಷೇಧಾರ್ಥಕ, ದೇಶ್ಯ-ಅನ್ಯದೇಶ್ಯ ಹೀಗೆ ಮುಖ್ಯ ಭಾಷಿಕ ವೈಶಿಷ್ಟ್ಯಗಳನ್ನು, ಪದ ಬೆಳವಣಿಗೆಯ ಚಾರಿತ್ರಿಕ ಅಂಶಗಳನ್ನು ಪ್ರಯೋಗಗಳು, ಗಾದೆ, ನುಡಿಗಟ್ಟುಗಳ ಸಹಾಯಕ ಅಂಶಗಳ ವೈಶಿಷ್ಟ್ಯಗಳನ್ನು ಉದಾಹರಣೆಗಳ ಮೂಲಕ ನೀಡಲಾಗಿದೆ.

ಮುಖ್ಯವಾಗಿ ಇಲ್ಲಿ ಇತರ ನಿಘಂಟುಗಳಿಗಿಂತ ಪ್ರಸ್ತುತ ನಿಘಂಟು ಹೇಗೆ ಭಿನ್ನ ಎಂಬುದನ್ನು ಇಲ್ಲಿನ ಪದ ಸಂಗ್ರಹವು ಹೇಳುತ್ತದೆ. ಈ ನಿಘಂಟು ಪೂರ್ವದ ಹಳಗನ್ನಡದಿಂದ ಆಧುನಿಕ ಕಾಲದ ಕನ್ನಡದವರೆಗಿನ (ಕ್ರಿ.ಶ.೪೫೦ ರಿಂದ ಕ್ರಿ.ಶ. ೧೯೫೦ದ ದಶಕವರೆಗೆ) ಪದಗಳನ್ನು ಒಳಗೊಂಡಿದೆ. ಸುಮಾರು ಎರಡು ಲಕ್ಷ ಮುಖ್ಯ ಉಲ್ಲೇಖಗಳನ್ನು ಹೊಂದಿರುವುದನ್ನು ಗುರುತಿಸಲಾಗಿದೆ.

ಪದಗಳ ಅರ್ಥ ನೀಡುವಿಕೆ, ಪ್ರಯೋಗಗಳಲ್ಲಿಯ ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ. ಮುಖ್ಯ ಉಲ್ಲೇಖವನ್ನು ನೀಡುವಾಗ ಬೆಳೆದು ಬಂದ ಬಗೆಯನ್ನು ಕಾಲಾನುಕ್ರಮದಲ್ಲಿ ನೀಡಲಾಗಿದೆ. ಇದು ಚಾರಿತ್ರಿಕವಾಗಿ ಪದ ಬೆಳವಣಿಗೆಯನ್ನು ಗುರುತಿಸಲು ಸಹಾಯಕವಾಗಿದೆ. ಇದನ್ನು ವಿವಿಧ ಪ್ರಯೋಗಗಳ ಮೂಲಕ ಪುಷ್ಟಿಗೊಳಿಸಲಾಗಿದೆ. ಪೂರ್ವ ಪ್ರಯೋಗಗಳು ಇಲ್ಲದಿದ್ದಲ್ಲಿ ರೂಢಿಗತ ವಾಕ್ಯಗಳನ್ನು ನೀಡಿರುವುದನ್ನು ಗಮನಿಸಲಾಗಿದೆ.

ಪದಗಳ ವಿಶೇಷವನ್ನು ನೀಡುವಾಗ ಪದದ ಮೂಲವನ್ನು ಅಂದರೆ ಯಾವ ಭಾಷೆಯ ಪದ ಎಂಬುದನ್ನು ನೀಡಿರುವುದು ಉಪಯುಕ್ತವಾದುದಾಗಿದೆ. ವ್ಯಾಕರಣದ ಉದ್ದೇಶದಿಂದ ಇಲ್ಲಿರುವ ಪದಗಳು ಕನ್ನಡ, ಸಂಸ್ಕೃತ, ಪ್ರಾಕೃತ, ಪಾರಸಿ, ಅರಬ್ಬಿ, ಇಂಗ್ಲಿಶ್, ಫ್ರೆಂಚ್, ಪೋರ್ಚುಗೀಸ್, ಗ್ರೀಕ್ ಮುಂತಾದ ಭಾಷೆಗಳಿಗೆ ಸೇರಿದ್ದರೂ ಕನ್ನಡದಲ್ಲಿ ಬಳಕೆಯಲ್ಲಿದ್ದುದ್ದನ್ನು ಇದು ಸೂಚಿಸುತ್ತದೆ. ಹೀಗೆ ದೇಶ್ಯ-ಅನ್ಯದೇಶ್ಯ ಪದಗಳನ್ನು ನೀಡಲಾಗಿದೆ. ಹಾಗೆಯೇ ಜ್ಞಾತಿಪದಗಳನ್ನು ನೀಡಿರುವುದು ಈ ನಿಘಂಟಿನ ವೈಶಿಷ್ಟ್ಯವೆಂಬುದನ್ನು ಗುರುತಿಸಲಾಗಿದೆ.

ಈ ನಿಘಂಟಿನ ಉಪಯುಕ್ತತೆಯನ್ನು ಕುರಿತಂತೆ ಪ್ರಶ್ನಾವಳಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದ್ದು, ಇದು ನಿಘಂಟನ್ನು ವಿವಿಧ ವಲಯಗಳಲ್ಲಿನ ಜನರು ಬಳಕೆ ಮಾಡುತ್ತಿರುವುದನ್ನು ಸೂಚಿಸುತ್ತದೆ. ಪ್ರಾತಿನಿಧಿಕವಾಗಿ ವಿವಿಧ ವಲಯಗಳಿಂದ ಸಂಗ್ರಹಿಸಲಾದ ಮಾಹಿತಿಯಂತೆ, ಇದರ ಉಪಯೋಗ ವಿದ್ಯಾರ್ಥಿ, ಶಿಕ್ಷಕ, ಸಂಶೋಧಕ, ಪತ್ರಿಕಾರಂಗ, ವಕೀಲಿ ವೃತ್ತಿ ಮುಂತಾದ ಕಡೆ ಬಳಕೆಯಲ್ಲಿರುವುದನ್ನು ಗುರುತಿಸಲಾಗಿದೆ. ಇದರ ಬೃಹತ್ತಾದ ಗಾತ್ರದಿಂದಾಗಿ ಬಹಳ ಜನರು ಇದನ್ನು ಬಳಸಲು ಸಾಧ್ಯವಿಲ್ಲದಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ನಿಘಂಟಿನಲ್ಲಿ ವಿಶೇಷ ಮಾಹಿತಿಗಳನ್ನು ನೀಡಬೇಕಾದ ಸಂದರ್ಭದಲ್ಲಿ ಸಂಕೇತಗಳನ್ನು ಬಳಸಿ ಸೂಚಿಸಿರುವುದು ಈ ನಿಘಂಟಿನ ವೈಶಿಷ್ಟ್ಯವಾಗಿದೆ. ಈ ಸಂಕೇತಗಳು ಗ್ರಂಥಭಾಗವನ್ನು ಉದಾಹರಿಸುವಾಗ ಅಕ್ಷರಗಳ ಲೋಪ, ಗ್ರಂಥಪಾತ, ಸಂಪಾದಕೀಯ ಸಂದೇಹ, ವಿಶೇಷಾಂಶಗಳು, ರೂಪನಿಷ್ಪನ್ನ, ಪದಸಂಬಂಧ, ಎರವಲು, ಜ್ಞಾತಿಶಬ್ದಗಳನ್ನು ನೀಡುವಾಗ ಬಳಸಲಾಗಿದೆ. ಇವು ನಿಘಂಟು ಬಳಕೆದಾರರಿಗೆ ಪ್ರಯೋಜನಕಾರಿಯಾಗಿವೆ ಎಂಬುದನ್ನು ಗುರುತಿಸಲಾಗಿದೆ.

ಇವುಗಳಲ್ಲದೆ ಮತ್ತೊಂದು ಕಡೆ ಶಬ್ದಗಳನ್ನು ಪರಾಮರ್ಶಿಸುವಂತೆ ಸೂಚಿಸಲು, ಹೋಲಿಕೆ ಮಾಡಲು, ನೋಡಲು ಈ ನಿಘಂಟಿನಲ್ಲಿ ಸೂಚನೆಗಳನ್ನು ಪರಾ., ಹೋ., ನೋ. ಇತ್ಯಾದಿ ಸಂಕ್ಷಿಪ್ತಗಳನ್ನು ನೀಡಿ ಸೂಚಿಸಲಾಗಿದೆ. ಇದು ಅಧ್ಯಯನಕಾರರಿಗೆ ತಲಸ್ಪರ್ಶಿ ಅಧ್ಯಯನ ಕೈಗೊಳ್ಳಲು ಅನುಕೂಲವಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು - ಒಂದು ಅಧ್ಯಯನ ಎನ್ನುವ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಹಲವಾರು ವಿಷಯಗಳು ಪ್ರಸ್ತಾಪಗೊಂಡಿರುವುದನ್ನು ಕಂಡಿದ್ದೇವೆ. ಅವುಗಳ ಬಗ್ಗೆ ಒಂದು ಸಮೀಕ್ಷೆಯನ್ನು ಕೈಗೊಂಡಾಗ ಕನ್ನಡ ನಿಘಂಟಿನ ಮಹತ್ವ ಮತ್ತು ಈ ನಿಘಂಟನ್ನು ಬೇರೆ ಬೇರೆ ವಲಯಗಳಲ್ಲಿ ಯಾವ ರೀತಿ ಬಳಸಲಾಗುತ್ತಿದೆ? ಬದಲಾಗುತ್ತಿರುವ ಕಾಲಮಾನದಲ್ಲಿ ಈ ನಿಘಂಟನ್ನು ಪರಿಷ್ಕರಿಸುವ ಅವಶ್ಯಕತೆ ಇದೆಯೇ? ಎನ್ನುವ ಪ್ರಶ್ನೆಗಳಿಗೆ ಅಧ್ಯಯನ ಸಮೀಕ್ಷೆ ಮಾಡುತ್ತಾ ಹೋದಂತೆ ಹಲವಾರು ವಿಚಾರಗಳು ಕಂಡುಬಂದವು. ಅವುಗಳನ್ನೇ ಪ್ರಸ್ತುತ ಮಹಾಪ್ರಬಂಧದಲ್ಲಿ ಪ್ರಸ್ತಾಪಿಸಲಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ನಮ್ಮ ಕನ್ನಡ ನಿಘಂಟು ಲೋಕದಲ್ಲಿ ಅದ್ವಿತೀಯವಾದ ಭಾಷಾಧ್ಯಯನದ ಕಾರ್ಯವಾಗಿದ್ದು, ಜಾಗತೀಕರಣದ ಶರವೇಗದ ಸಂದರ್ಭದಲ್ಲಿ ಇದರ ಬಳಕೆ ಪ್ರಮಾಣ ಕಡಿಮೆಯಾಗುತ್ತಿರುವುದು ಗೊತ್ತಾಗುತ್ತದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ' ಎನ್ನುವ ವಿಷಯವು ಸಂಕ್ಷಿಪ್ತವಾದರೂ ಕನ್ನಡ ನಿಘಂಟು ಕ್ಷೇತ್ರ ವಿಶಾಲವಾದುದಾಗಿದೆ. ವಾಸ್ತವಿಕವಾಗಿ ಒಂದು ಕ್ಷೇತ್ರವನ್ನು ಯಾವುದೇ ವಿಷಯವು ಒಳಗೊಂಡಿದ್ದರೆ ಆ ಕ್ಷೇತ್ರಕ್ಕೆ ಅದರದ್ದೇ ಆದ ಸಮಸ್ಯೆಗಳಿರುತ್ತವೆಂಬುದು ಹಲವಾರು ವಿಷಯಗಳಿಂದ ದೃಢಪಟ್ಟಿದೆ. ಇದು ಅವಶ್ಯವಾದ ಅಧ್ಯಯನ ವಿಷಯವಾಗಿದೆ.

ಪ್ರಸ್ತುತ ಮಹಾಪ್ರಬಂಧದಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು – ಒಂದು ಅಧ್ಯಯನ' ಕುರಿತು ಹಲವಾರು ಆಯಾಮಗಳಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ. ಪರಿವಿಡಿಯನ್ನು ಒಟ್ಟು ಆರು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ. ಎಲ್ಲ ಅಧ್ಯಾಯಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಚರ್ಚೆ ಮಾಡಲಾಗಿದೆ.

ಮುಖ್ಯವಾಗಿ ಪ್ರಸ್ತುತ ಸಂದರ್ಭದಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು - ಒಂದು ಅಧ್ಯಯನ' ಕುರಿತಂತೆ ನಡೆಯುತ್ತಿರುವ ಚರ್ಚೆಗಳ ವಿಷಯವನ್ನು ಕೈಗೆತ್ತಿಕೊಂಡು ನಿಘಂಟುತಜ್ಞರು, ಭಾಷಾವಿಜ್ಞಾನಿಗಳು, ಚಿಂತಕರು, ಸಾಹಿತಿಗಳು, ಕೃತಿಕಾರರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಇಲ್ಲಿ ಬಳಸಿಕೊಂಡು 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು - ಒಂದು ಅಧ್ಯಯನ' ಕುರಿತಂತೆ ಅಧ್ಯಯನವು ಹಲವಾರು ವಿಷಯಗಳು, ವಿಚಾರಗಳನ್ನು ಹಾಗೂ ಪ್ರಸ್ತುತ ದಿನಮಾನಗಳಲ್ಲಿ ನಿಘಂಟಿನ ಬಳಕೆಯ ಆಯಾಮಗಳನ್ನು ಗುರುತಿಸಿಕೊಂಡಿದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಬಳಕೆಯ ವಿವಿಧ ಆಯಾಮಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದ್ದು, ನಿಘಂಟಿನ ಪರಿಣಾಮಕಾರಿ ಬಳಕೆಯ ಸಾಧ್ಯತೆಗಳನ್ನು ಬೇರೆ ಬೇರೆ ನೆಲೆಗಳಲ್ಲಿ ಗುರುತಿಸುವ ಹಾಗೂ ಅವರ ಬಳಕೆಯ ಹಿಂದಿರುವ ಸವಾಲುಗಳನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನವು ತನ್ನ ಸ್ವರೂಪವನ್ನು ಹೊಂದಿದೆ. ಆರಂಭದಲ್ಲಿ ಪ್ರಸ್ತಾವನೆಯೊಂದಿಗೆ ಭಾಷೆಯ ಮಹತ್ವ, ಕನ್ನಡ ನಿಘಂಟು ಪರಂಪರೆ, ನಿಘಂಟು ಬೆಳವಣಿಗೆಯ ವಿಚಾರಗಳ ಹಿನ್ನೆಲೆಯ ಪಕ್ಷಿನೋಟವನ್ನು ಮಹಾಪ್ರಬಂಧದ ಪ್ರಸ್ತಾವನೆಯಲ್ಲಿ ಮಾಡಲಾಗಿದೆ.

ಮಹಾಪ್ರಬಂಧದ ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಕುರಿತು ವಿವರಿಸಲಾಗಿದೆ.

ಅಧ್ಯಾಯ ಎರಡರಲ್ಲಿ ನಿಘಂಟಿನ ಅರ್ಥ ಮತ್ತು ವ್ಯಾಖ್ಯೆಗಳು, ನಿಘಂಟು ರಚನೆಯ ಇತಿಹಾಸ, ನಿಘಂಟುಗಳ ವರ್ಗೀಕರಣ, ಕನ್ನಡ ನಿಘಂಟುಗಳನ್ನು ಕುರಿತ ಅಧ್ಯಯನ ಸಮೀಕ್ಷೆ ಅಂದರೆ ನಿಘಂಟು ಬಳಕೆಗೆ ಸಂಬಂಧಿಸಿದಂತೆ ಇದುವರೆಗೂ ನಡೆಸಿದಂತಹ ಮತ್ತು ನಡೆದ ಅಧ್ಯಯನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳುವ ನಿಟ್ಟಿನಿಂದ ಸಮೀಕ್ಷೆ ಮಾಡಲಾಗಿದೆ. ಅಂತಹ ಪೂರಕ ಅಧ್ಯಯನಗಳಾದ ಪಿಎಚ್.ಡಿ. ಮಹಾಪ್ರಬಂಧಗಳು, ಗ್ರಂಥಗಳು, ನಿಘಂಟುಗಳು, ನಿಯತಕಾಲಿಕೆಗಳಲ್ಲಿನ ಲೇಖನಗಳನ್ನು ಕ್ರೋಢೀಕರಿಸಿ ಆ ವಿಚಾರಗಳನ್ನು ಇಲ್ಲಿ ಚರ್ಚಿಸಿಲಾಗಿದೆ ಹಾಗೂ ಈ ಎಲ್ಲ ಅಧ್ಯಯನಗಳನ್ನು ಬಳಸಿಕೊಳ್ಳುವುದರ ಉದ್ದೇಶದೊಂದಿಗೆ ಪ್ರಸ್ತುತ ಅಧ್ಯಯನವು ಹೇಗೆ ಭಿನ್ನವಾಗಿದೆ ಎಂಬುದನ್ನು ತಿಳಿಸಲಾಗಿದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ 'ಇತಿಹಾಸ ಮತ್ತು ರಚನೆಯ ಹಿನ್ನಲೆ' ಎನ್ನುವ ಮೂರನೇ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು – ನಡೆದು ಬಂದ ದಾರಿ, ಕನ್ನಡ

ಸಾಹಿತ್ಯ ಪರಿಷತ್ತು ಪ್ರಕಟಿಸಿದ ನಿಘಂಟುಗಳ ಪರಿಚಯ, ನಿಘಂಟಿನ ಬೆಳವಣಿಗೆಯ ಹಂತಗಳು, ಕನ್ನಡ ನಿಘಂಟು ರಚನೆಯ ಹಿನ್ನೆಲೆ, ಸ್ವರೂಪ, ವ್ಯಾಪ್ತಿ, ಕನ್ನಡ ನಿಘಂಟಿನ ಆಕರಗಳನ್ನು ಕುರಿತು ವಿವರಿಸಲಾಗಿದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ರಚನಾತ್ಮಕ, ಭಾಷಿಕ ವಿನ್ಯಾಸ ಮತ್ತು ವೈಶಿಷ್ಟ್ಯಗಳು' ಎನ್ನುವ ನಾಲ್ಕನೆಯ ಅಧ್ಯಾಯದಲ್ಲಿ ಕನ್ನಡ ನಿಘಂಟಿನ ರಚನಾತ್ಮಕ ವಿನ್ಯಾಸ, ಇದರಲ್ಲಿ ದಾಖಲಾದ ಸಮಾನಾರ್ಥಕಗಳು, ನಾನಾರ್ಥಕಗಳು, ನಿಷೇಧಾರ್ಥಕಗಳು, ದೇಶ್ಯ-ಅನ್ಯದೇಶ್ಯಗಳು, ಸಂಕ್ಷೇಪಗಳು, ವಿರಾಮಚಿಹ್ನೆಗಳು, ಪ್ರಯೋಗಗಳ ಉಲ್ಲೇಖ, ಗಾದೆಗಳು, ನುಡಿಗಟ್ಟುಗಳು, ಅವ್ಯಯಗಳು ಮೊದಲಾದ ಭಾಷಿಕಾಂಶಗಳನ್ನು ಉದಾಹರಣೆಗಳ ಸಹಿತ ಮೌಲ್ಯಮಾಪನ ಮಾಡಲಾಗಿದೆ ಹಾಗೂ ಕನ್ನಡ ನಿಘಂಟಿನ ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನ ಬಳಕೆಯ ವಲಯಗಳು' ಎನ್ನುವ ಐದನೆಯ ಅಧ್ಯಾಯದಲ್ಲಿ ಶೈಕ್ಷಣಿಕ, ಮಾಧ್ಯಮ, ಕಾನೂನು, ಇತರೆ ವಲಯಗಳಲ್ಲಿ ಕನ್ನಡ ನಿಘಂಟು ಯಾವ ರೀತಿಯಲ್ಲಿ ಬಳಕೆಯಾಗುತ್ತಿದೆ ಎನ್ನುವುದನ್ನು ಪ್ರಶ್ನಾವಳಿಯನ್ನು ರೂಪಿಸಿ ಅದರಿಂದ ಬಂದ ಮಾಹಿತಿಯ ಆಧಾರದ ಮೇಲೆ ಈ ನಿಘಂಟಿನ ಉಪಯುಕ್ತತೆಯನ್ನು ಕಂಡುಕೊಳ್ಳಲಾಗಿದೆ. ಕನ್ನಡ ನಿಘಂಟು ಕಾಲಕಾಲಕ್ಕೆ ಅಗತ್ಯವಾಗಿ ಪರಿಷ್ಕರಣೆಯಾಗಬೇಕಾದ ಅವಶ್ಯಕತೆಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಆರನೆಯ ಅಧ್ಯಾಯವು ಈ ಸಂಶೋಧನಾ ಪ್ರಬಂಧದ ಕೊನೆಯ ಅಧ್ಯಾಯವಾಗಿದ್ದು, ಈ ಅಧ್ಯಾಯದಲ್ಲಿ ಸಂಶೋಧನಾ ಅಧ್ಯಯನದ ವೈಶಿಷ್ಟ್ಯಗಳನ್ನು ಹಾಗೂ ಫಲಿತಗಳನ್ನು ವಿವರಿಸಲಾಗಿದೆ. ಅಧ್ಯಯನದ ಸಾಧ್ಯತೆಗಳನ್ನು ತಿಳಿಸಲಾಗಿದೆ. ಆನಂತರದಲ್ಲಿ ಈ ಸಂಶೋಧನೆಗೆ ಬಳಸಿಕೊಳ್ಳಲಾದ ಪರಾಮರ್ಶನ ಗ್ರಂಥಗಳ ವಿವರಣೆಗಳನ್ನು, ಮಾದರಿ ಪ್ರಶ್ನಾವಳಿ ಹಾಗೂ ವಕ್ತೃಗಳ ಮಾಹಿತಿಯನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ಇಪ್ಪತ್ತನೇ ಶತಮಾನದ ಕನ್ನಡ ಭಾಷಾಧ್ಯಯನದ ಪ್ರಮುಖ ಯೋಜನೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ರಚನೆಯ ಬಳಕೆಯ ಸಾಧ್ಯತೆಗಳನ್ನು ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಭಾಷೆಯ ತಿಳಿವಳಿಕೆಗೆ ಪ್ರತಿಯೊಬ್ಬರಿಗೂ ನಿಘಂಟು ಅವಶ್ಯಕ. ಕನ್ನಡ ಭಾಷೆಯ ಸಮರ್ಥ ಪ್ರತಿನಿಧಿಯಂತಿರುವ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಪ್ರಸ್ತುತ ಬದಲಾಗುತ್ತಿರುವ ಸನ್ನಿವೇಶಗಳಲ್ಲಿ ಯಾವ ರೀತಿ ಬಳಕೆಯಾಗುತ್ತಿದೆ ಮತ್ತು ಮುಂದಿನ ದಿನಗಳಲ್ಲಿ ಇದರ ಬಳಕೆಯ ನೆಲೆಗಳನ್ನು ವಿಸ್ತರಿಸುವ ಸಾಧ್ಯತೆಗಳನ್ನು ಈ ಅಧ್ಯಯನವು ಕಂಡುಕೊಂಡಿದೆ.

ಈ ಹಿನ್ನೆಲೆಯಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಕನ್ನಡ ಭಾಷೆಯ ವಿಕಾಸಕ್ಕಾಗಿ ಬಳಕೆಯಾದಾಗ ಈ ನಿಘಂಟು ರಚನಾಕಾರರ ಶ್ರಮ ಸಾರ್ಥಕವಾಗುತ್ತದೆ ಎಂಬುದು ಈ ಅಧ್ಯಯನದ ಆಶಯವಾಗಿದೆ.

'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಅತ್ಯಗತ್ಯವಾಗಿ ಪರಿಷ್ಕರಣೆಯಾಗಬೇಕು ಎನ್ನುವ ಅಂಶವನ್ನು ಈ ಅಧ್ಯಯನವು ಕಂಡುಕೊಂಡಿದೆ. ಈ ನಿಘಂಟಿನ ಬಳಕೆಯ ಹಲವಾರು ಸಾಧ್ಯತೆಗಳನ್ನು ಪ್ರಸ್ತುತ ಅಧ್ಯಯನವು ತೋರಿಸಿದೆ.

ಕನ್ನಡ ನಿಘಂಟು ಏಕಭಾಷಿಕ ನಿಘಂಟಾಗಿದ್ದು, ಕನ್ನಡೇತರರೂ ಬಳಸಲು ದ್ವಿಭಾಷಿಕ ನಿಘಂಟಾಗಬೇಕಾದ ಅಗತ್ಯವಿದೆ. ಇದು ಸಾಧ್ಯವಾಗದಿದ್ದರೂ, ಪದಗಳ ಲಿಪ್ಯಂತರವಾದರೂ ಅತ್ಯಗತ್ಯವಾಗಿ ಆಗಬೇಕು. ಆಗ ಇದರ ಬಳಕೆಯ ಪ್ರಮಾಣ ಅಧಿಕವಾಗುತ್ತದೆ.

ಮುದ್ರಣ ರೂಪದಲ್ಲಿರುವ ನಿಘಂಟು ಅಡಕ ಮುದ್ರಿಕೆಯ ರೂಪದಲ್ಲಿ ಬರಬೇಕಾಗಿರುವುದು ಅಗತ್ಯವಾಗಿದೆ ಎನ್ನುವುದನ್ನು ಪ್ರಸ್ತುತ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಈ ನಿಘಂಟು ಆನ್‌ಲೈನ್ ನಿಘಂಟಾಗಬೇಕು ಹಾಗೂ ಮುಕ್ತವಾಗಿ ಹೊಸ ಪದಗಳನ್ನು ಸೇರಿಸುವ, ಈಗಾಗಲೇ ದಾಖಲಾದ ಪದಗಳಿಗೆ ಪ್ರಯೋಗಗಳನ್ನು ಸೇರಿಸುವ, ಅರ್ಥ ಸಾಧ್ಯತೆಗಳನ್ನು ವಿವರಿಸುವ, ಅರ್ಥಛಾಯೆಗಳನ್ನು ದಾಖಲಿಸುವ ಹಾಗೆ ರೂಪಿಸಬೇಕಾಗಿದೆ.

ಪ್ರಸ್ತುತ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಆಡುನುಡಿಯ ಪದಗಳಿಗೆ ಹೆಚ್ಚಿನ ಅವಕಾಶ ಕೊಟ್ಟು ಕಣ್ಮರೆಯಾಗುವ ಅಪರೂಪದ ಕನ್ನಡ ಪದಗಳ ದಾಖಲೀಕರಣ ಆಗಬೇಕಾಗಿದೆ.

ಶತಮಾನಕ್ಕೊಮ್ಮೆ ನಡೆಯಬಹುದಾದ ಕನ್ನಡ ಭಾಷಾ ಕ್ಷೇತ್ರದ ಅಪೂರ್ವ ಸಾಧನೆಯೆನಿಸಿದ ಕನ್ನಡ ನಿಘಂಟು ಕೆಲಸ ನಿರಂತರವಾಗಿರಲು ಕನ್ನಡ ನಿಘಂಟು ಕಚೇರಿಯನ್ನು ಪುನಃ ಪ್ರಾರಂಭಿಸಬೇಕಾಗಿದೆ. ಅಲ್ಲದೇ ನಿಘಂಟು ಕ್ಷೇತ್ರದ ವಿದ್ವಾಂಸರನ್ನೊಳಗೊಂಡ, ಬೇರೆ ಬೇರೆ ಕ್ಷೇತ್ರದ ತಜ್ಞರ ನಿಘಂಟು ರಚನಾ ಸಮಿತಿ ಮತ್ತು ಪರಿಶೀಲಕ ಸಮಿತಿಗಳ ರಚನೆಯನ್ನು ಅತ್ಯಗತ್ಯವಾಗಿ ಮಾಡಬೇಕಾಗಿದೆ ಎನ್ನುವುದನ್ನು ಪ್ರಸ್ತುತ ಅಧ್ಯಯನ ಕಂಡುಕೊಂಡಿದೆ.

ನಿಘಂಟು ಕೆಲಸ ನಿರಂತರವಾಗಿರಲು, ಹೊಸ ಪದಗಳ ದಾಖಲೀಕರಣಕ್ಕಾಗಿ ಕರ್ನಾಟಕ ಸರ್ಕಾರ ಹಲವು ನೀತಿ–ನಿಯಮಗಳನ್ನೊಳಗೊಂಡ 'ಕನ್ನಡ ನಿಘಂಟು ಅಕಾಡೆಮಿ'ಯನ್ನು ಸ್ಥಾಪಿಸಿ, ಆಸಕ್ತ ಯುವ ವಿದ್ವಾಂಸರಿಗೆ ನಿರಂತರವಾಗಿ ನಿಘಂಟು ಕ್ಷೇತ್ರದ ಬಗ್ಗೆ ತರಬೇತಿಗಳನ್ನು ಹಮ್ಮಿಕೊಳ್ಳುವ ಕಾರ್ಯವನ್ನು ಮಾಡಬೇಕಾಗಿದೆ.

ಪರಿಷ್ಕರಣವು ಕನ್ನಡ ನಿಘಂಟಿನ ಮೌಲ್ಯ, ಉಪಯುಕ್ತತೆ, ನಿಘಂಟನ್ನು ಬಳಸುವ ಪ್ರಮಾಣವನ್ನು ಹೆಚ್ಚಿಸುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ನಿಘಂಟು ರಚನಾ ಕಾರ್ಯವನ್ನು ವಿಸ್ತರಿಸುವ ಹಾಗೂ ಹೊಸ ಅಗತ್ಯತೆಗಳಿಗೆ ಅನುಗುಣವಾಗಿ ಈ ಯೋಜನೆಯನ್ನು ಮರುರೂಪಿಸುವ ಕಾರ್ಯವಾಗಬೇಕಿದೆ.

* * * *

# ಪರಾಮರ್ಶನ ಗ್ರಂಥಗಳು

**ಕನ್ನಡ ಗ್ರಂಥಗಳು:- (ಸಾಹಿತ್ಯ, ಭಾಷೆ, ಸಂಶೋಧನೆ)**


೧. ಅಂಗಡಿ ಎಸ್.ಎಸ್., ೨೦೦೦, ಕನ್ನಡ ಕ್ರಿಯಾರೂಪಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ——, ೨೦೦೨, ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಅನಂತರಾಮು, ಕೆ., ೨೦೧೨, ಕನ್ನಡದಲ್ಲಿ ಸಂಸ್ಕೃತ ಶಬ್ದಗಳು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು.

೪. ಅಮರೇಶ ನುಗಡೋಣಿ. ೨೦೧೧, ಕನ್ನಡ ಸಂಶೋಧನೆಯ ವೈಧಾನಿಕತೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಅಶೋಕ ಕುಮಾರ ರಂಜೇರೆ, ೨೦೧೦, ಪದವಿನ್ಯಾಸ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಅಶ್ವತ್ಥನಾರಾಯಣ.ಜಿ. ೨೦೧೫, ಕನ್ನಡ ಸಾಹಿತ್ಯ ಪರಿಷತ್ತು -೧೦೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. ಈಶ್ವರಪ್ಪ.ಎಂ. ೨೦೦೮, 'ಕನ್ನಡ ವ್ಯಾಕರಣ ಕೈಪಿಡಿ', ಕಾವ್ಯಾಮೃತ ಪ್ರಕಾಶನ, ತುಮಕೂರು.

೮. ಎಚ್ಚೆಸ್ಕೆ, ೨೦೦೪, ಬಳಕೆಯ ಭಾಷೆ, ಚೇತನ ಬುಕ್ ಹೌಸ್, ಮೈಸೂರು.

೯. ಕೆಂಪೇಗೌಡ.ಕೆ., ೨೦೧೦, 'ದ್ರಾವಿಡ ಭಾಷೆಗಳು', ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು.

೧೦. ಕೆಂಪೇಗೌಡ.ಕೆ., ೧೯೯೬, ಸಾಮಾನ್ಯ ಭಾಷಾ ವಿಜ್ಞಾನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧. ಕಲಬುರ್ಗಿ ಎಂ.ಎಂ., ೨೦೧೪, ಕನ್ನಡ ಸಂಶೋಧನಶಾಸ್ತ್ರ, ಸಪ್ನ ಬುಕ್ ಹೌಸ್, ಬೆಂಗಳೂರು.

೧೨. ಕಾವ್ಯಪ್ರೇಮಿ (ಸಂ.) ೨೦೦೫, ಜನಪ್ರಿಯ ಗಾದೆಗಳ ನಿಘಂಟು, ಸಮಾಜ ಪುಸ್ತಕಾಲಯ, ಧಾರವಾಡ.

೧೩. ಕಾಳೇಗೌಡ ನಾಗವಾರ., ೧೯೭೭, ಬೀದಿ ಮಕ್ಕಳು ಬೆಳೆದೊ, ಗಾದೆಗಳ ಸಂಕಲನ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೪. ಕುಶಾಲಪ್ಪ ಗೌಡ.ಕೆ., ೨೦೦೮, ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಸಮೀಕ್ಷೆ, ಕಾರ್ತಿಕ್ ಎಂಟರ್‌ಪ್ರೈಸಸ್, ಬೆಂಗಳೂರು.

೧೫. ಕೃಷ್ಣ ಪರಮೇಶ್ವರಭಟ್ಟ, ೨೦೧೦, ಭಾಷೆ ಮತ್ತು ಸಾಮಾಜಿಕ ಸಂದರ್ಭ, ಅಭಿನವ ಪ್ರಕಾಶನ, ಬೆಂಗಳೂರು.

೧೬. ಕೃಷ್ಣಮೂರ್ತಿ ಹನೂರು, ೨೦೧೦, 'ಕನ್ನಡದಲ್ಲಿ ಅನ್ಯದೇಶ್ಯ ಪದಗಳು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು.

೧೭. ಕೃಷ್ಣಯ್ಯ ಎಂ.ಎಚ್., ೨೦೦೮, 'ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ', ಅಂಕಿತ ಪುಸ್ತಕ, ಬೆಂಗಳೂರು.

೧೮. ಕೆರಿಮನಿ ಸಿ.ವಿ., ೨೦೧೨, ಚೆಲುವ ಕನ್ನಡ, ಸಪ್ನ ಬುಕ್ ಹೌಸ್, ಬೆಂಗಳೂರು.

೧೯. ಗಂಗಾನಾಯಕ್. ಕೆ.ಎನ್., ೨೦೧೧, ಭಾಷಾವಿಜ್ಞಾನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.,

೨೦. ಗೋಪಾಲಕೃಷ್ಣಯ್ಯ ಕೆ.ಎಲ್., ೨೦೦೬, ಭಾಷೆಯ ಬೆಳಕು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೧. ಗೊರವರ ಬ.ಸೋ., ೨೦೦೮, ಕನ್ನಡ ರಚನಾತ್ಮಕ ಮತ್ತು ಸಮಾಜೋಭಾಷಿಕ ಅಧ್ಯಯನ, ಲಡಾಯಿ ಪ್ರಕಾಶನ, ಗದಗ.

೨೨. ಗೋಪಾಲ್ ಟಿ.ಎಸ್., ೨೦೧೩, ಕನ್ನಡ ನುಡಿಗಟ್ಟುಗಳು, ನವ ಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೨೩. ——, ೨೦೧೫, ಲೇಖನ ಚಿಹ್ನೆಗಳು, ನವ ಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೨೪. ——, ೨೦೧೭, ಕನ್ನಡಕ್ಕೊಂದು ಕೈಪಿಡಿ, ನವ ಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೨೫. ಚಂದ್ರ ಪೂಜಾರಿ.ಎಂ., ೨೦೦೯, ಸಂಶೋಧನೆ ಏನು? ಏಕೆ? ಹೇಗೆ? ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಚಿದಾನಂದಮೂರ್ತಿ. ಎಂ, ೨೦೦೭, ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ. ಮೂರ್ತಿ, ಮೈಸೂರು.

೨೮. ——, ವಾಗಾರ್ಥ, ಬಾಪ್ಕೋ ಪ್ರಕಾಶನ, ಬೆಂಗಳೂರು. ೧೯೮೧.

೨೯. ಜಗನ್ನಾಥ ಹೇಮಾದ್ರಿ , ೨೦೦೬, ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೦. ತಲ್ವಾಡಿ ಬಿ.ಎಸ್., ೨೦೧೦, 'ಕನ್ನಡ ಭಾಷೆಗೆ ವಿದೇಶಿ ವಿದ್ವಾಂಸರ ಕೊಡುಗೆ', ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೩೧. ತಿರುಮಲೇಶ್ ಕೆ.ವಿ., ೨೦೧೧, ಇನ್ನಷ್ಟು ಕನ್ನಡ, ಅಭಿನವ, ಬೆಂಗಳೂರು.

೩೨. ಧಾರವಾಡಕರ .ರಾ.ಯ., ೧೯೯೮, ಕನ್ನಡ ಭಾಷಾ ಶಾಸ್ತ್ರ, ಗೀತಾ ಬುಕ್ ಹೌಸ್, ಮೈಸೂರು.

೩೩. ನಂಜಯ್ಯ ಹೊಂಗನೂರು ಎಂ., ೨೦೦೯, ಸ್ಥಳನಾಮಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೪. ನರಸಿಂಹಮೂರ್ತಿ.ಎ.ವಿ., ೨೦೦೬, 'ಕನ್ನಡ ಲಿಪಿಯ ಉಗಮ ಮತ್ತು ವಿಕಾಸ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೫. ನಾಗರಾಜಯ್ಯ ಹಂಪ., (ಸಂ), ೨೦೧೧, ಪುನರಾವಲೋಕನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೬. ನಾಗಭೂಷಣಸ್ವಾಮಿ ಓ.ಎಲ್., ೨೦೧೩, ನುಡಿಯೊಳಗಾಗಿ, ಅಭಿನವ ಪ್ರಕಾಶನ, ವಿಜಯನಗರ, ಬೆಂಗಳೂರು.

೩೭. ನಾಗಭೂಷಣ .ಸಿ., ೨೦೦೬, ಕನ್ನಡ ಸಂಶೋಧನೆ ಸಮೀಕ್ಷೆ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೩೮. ನಾರಾಯಣ ಕೆ.ವಿ. ಮತ್ತು ಇತರರು, ೨೦೧೬, ಕನ್ನಡ ನುಡಿಯ ಆಕರ ಕೋಶ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೩೯. ನಾರಾಯಣ ಕೆ.ವಿ., ೧೯೯೫, ಕನ್ನಡ ಶೈಲಿ ಕೈಪಿಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೦. ——, ೨೦೦೦, ಭಾಷೆ ವಿಶ್ವಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ——, ೨೦೦೫, ನಮ್ಮೊಡನೆ ನಮ್ಮ ನುಡಿ, ಲೋಹಿಯಾ ಪ್ರಕಾಶನ, ಬಳ್ಳಾರಿ.

೪೨. ——, ೨೦೦೯, ಕನ್ನಡ ಜಗತ್ತು ಅರ್ಧಶತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ——, ೨೦೧೦, ತೊಂಡುಮೇವು ಸಂ.೫, ಕೆ.ಬಿ. ಪ್ರಗತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು.

೪೪. ——, ೨೦೧೦, ತೊಂಡುಮೇವು, ಸಂ.೬, ಕೆ.ಬಿ. ಪ್ರಗತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು.

೪೫. ——, ೨೦೧೦, ತೊಂಡುಮೇವು, ಸಂ.೭, ಕೆ.ಬಿ. ಪ್ರಗತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು.

೪೬. ——, ೨೦೧೦, ತೊಂಡುಮೇವು, ಸಂ.೮, ಕೆ.ಬಿ. ಪ್ರಗತಿ, ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರು.

೪೭. ಪಾಂಡುರಂಗಬಾಬು. ಡಿ., ೨೦೦೫, ನುಡಿನೋಟ, ಆಕಾಶ್ ಪ್ರಕಾಶನ, ಹೊಸಪೇಟೆ.

೪೮. ——, ೨೦೧೦, ನಮ್ಮ ಆಟಗಳು ನುಡಿಗಟ್ಟು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಪಾಟೀಲ ಆರ್.ವಿ., ೨೦೧೪, ವಿಜಯಪುರ ಜಿಲ್ಲೆಯ ಕನ್ನಡ ಗ್ರಾಮ್ಯಪದಗಳ ಅಧ್ಯಯನ, ಎಸ್.ಎಲ್.ಎನ್.ಪಬ್ಲಿಕೇಷನ್ಸ್, ಬೆಂಗಳೂರು–೨೮.

೫೦. ಪುಟ್ಟಯ್ಯ ಬಿ.ಎಂ., ೨೦೧೦, ಸಂಶೋಧನೆ ತಾತ್ವಿಕ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೧. ಪೂಜಾರ ವ್ಹಿ.ಜಿ., ೨೦೧೨, ಕನ್ನಡ ಭಾಷಾ ವಿವೇಚನೆ, ಚೇತನ ಪ್ರಕಾಶನ, ಗುಲಬರ್ಗಾ.

೫೨. ಪ್ರಸಾದಸ್ವಾಮಿ.ಎಸ್., ೨೦೧೧, ಭಾಷೆ–ಉಪಭಾಷೆ, ಕಣ್ವ ಪ್ರಕಾಶನ, ಬೆಂಗಳೂರು.

೫೩. ಬಸವರಾಜ ಪೋಲೀಸ ಪಾಟೀಲ, (ಸಂ.) ೨೦೦೩, ಭಾಷಾ ಸಂಗಮ, ಡಾ.ಸಂಗಮೇಶ ಸವದತ್ತಿಮಠ ಅವರ ಷಷ್ಟ್ಯಬ್ದಿ ಅಭಿನಂದನ ಸಂಪುಟ, ಡಾ.ಸಂಗಮೇಶ ಸವದತ್ತಿಮಠ ಅಭಿನಂದನ ಸಮಿತಿ, ಗುಲಬರ್ಗಾ.

೫೪. ಬಸವಾರಾಧ್ಯ.ಎನ್., ೨೦೦೪, 'ಸಾಹಿತ್ಯೋಪಾಸಕರು, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೫೫. ಭಗವತಿ ಎಸ್.ಎಸ್. ಮತ್ತು ಮೇಲಿನಮನಿ ಎಚ್.ಎಸ್, ೨೦೦೯, 'ಹೊಸಗನ್ನಡ ಸಾಹಿತ್ಯಾವಲೋಕನ, ವಿದ್ಯಾನಿಧಿ ಪ್ರಕಾಶನ, ಗದಗ.

೫೬. ಮಹಾದೇವಯ್ಯ ಪಿ., ೨೦೦೦, ಸಾಮಾಜಿಕ ಉಪಭಾಷೆ (ಮಂಟಪಮಾಲೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ಮುಖ್ಯಮಂತ್ರಿ ಚಂದ್ರು ಮತ್ತು ಇತರರು, ೨೦೧೦, ಆಡಳಿತ ಕನ್ನಡ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

೫೮. ಮೀನಾ ಪಿ.ಟಿ., ೨೦೦೬, ಕನ್ನಡ ಸಂಪದೀಕರಣ, ರೂಪ ಪ್ರಕಾಶನ, ಕುವೆಂಪು ನಗರ, ಮೈಸೂರು.

೫೯. ರಂಗನಾಥ ಕಂಟನಕುಂಟೆ, ೨೦೦೯, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ಮುದ್ದಶ್ರೀ ಗ್ರಂಥಮಾಲೆ, ಬೆಂಗಳೂರು.

೬೦. ರಂಗಸ್ವಾಮಿ.ಎ., (ಸಂ), ೨೦೧೦, ಕನ್ನಡದಲ್ಲಿ ಅನ್ಯದೇಶ್ಯ ಪದಗಳು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

೬೧. ರವೀಂದ್ರನಾಥ ಕೆ. ೨೦೧೧, ಅಧ್ಯಯನದ ವಿಧಿವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೨. ರಾಜಪುರೋಹಿತ ಬಿ.ಬಿ., ೨೦೦೫, ಭಾಷೆ ಮತ್ತು ಅರ್ಥಗಳ ಗುಟ್ಟು, ಸರಸ್ವತೀಪುರಂ, ಮೈಸೂರು.

೬೩. ——, ೨೦೦೯, 'ವ್ಯಾ-ಸಾ-ನು-ಭಾ-ವ', ಬಂಡಾರ ಪ್ರಕಾಶನ, ಮಸ್ಕಿ.

೬೪. ——, ೨೦೦೯, ಧ್ವನಿಯ ಶ್ರಾವಣ ಮತ್ತು ಚಾಕ್ಷುಷ ರೂಪ, ಬಂಡಾರ ಪ್ರಕಾಶನ, ಮಸ್ಕಿ.

೬೫. ——, ೨೦೦೯, ಧ್ವನಿವಿಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ——, ೨೦೧೨, ಭಾಷಾವಿಜ್ಞಾನ ತತ್ವ ಇತಿಹಾಸ ಮತ್ತು ಅನುಷ್ಠಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೭. ರಾಮಾನುಜನ್ ಎ.ಕೆ. ೧೯೭೩, ಗಾದೆಗಳು, ಉಪನ್ಯಾಸ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೮. ರಾಮೇಗೌಡ, ೧೯೬೩, ಕಿಟ್ಟೆಲ್ ಕೋಶದ ಗಾದೆಗಳು, ಡಿ.ವಿ.ಕೆ. ಮೂರ್ತಿ, ಪ್ರಕಾಶಕರು ಮೈಸೂರು.

೬೯. ——, ೧೯೭೦, ನಮ್ಮ ಒಗಟುಗಳು, ಡಿ.ವಿ.ಕೆ. ಮೂರ್ತಿ, ಪ್ರಕಾಶಕರು ಮೈಸೂರು-೪.

೭೦. ——, ೨೦೦೯, ನಮ್ಮ ಗಾದೆಗಳು, ಡಿ.ವಿ.ಕೆ. ಮೂರ್ತಿ, ಪ್ರಕಾಶಕರು ಮೈಸೂರು.

೭೧. ರೇಣುಕಾ ಕೋಡಗುಂಟಿ, (ಸಂ.) ೨೦೧೧, ಕನ್ನಡ ಭಾಷಾವಿಜ್ಞಾನ ಸಂಶೋಧನೆ : ಇಂದು, ಬಂಡಾರ ಪ್ರಕಾಶನ, ಮಸ್ಕಿ, ರಾಯಚೂರು ಜಿಲ್ಲೆ.

೭೨. ವೆಂಕಟಾಚಲಶಾಸ್ತ್ರಿ ಟಿ.ವಿ. ಮತ್ತು ಲಕ್ಷ್ಮಣರಾವ್ ಜೆ.ಆರ್., ೨೦೧೦, ಕನ್ನಡ ಬರವಣಿಗೆ: ದೋಷಗಳು, ದೌರ್ಬಲ್ಯಗಳು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು-೨.

೭೩. ವಸಂತಕುಮಾರ್. ೨೦೦೭, ಕ್ರಿಯಾತ್ಮಕ ಕನ್ನಡ, ತೆಂಡುಲ್ಕರ್ ಪ್ರಕಾಶನ, ಪರ್ಕಳ, ಉಡುಪಿ ಜಿಲ್ಲೆ.

೭೪. ಶಂಕರ್ ಬಟ್ ಡಿ.ಎನ್., ೨೦೦೩, ಕನ್ನಡದ ಸರ್ವನಾಮಗಳು, ಭಾಷಾ ಪ್ರಕಾಶನ, ಮೈಸೂರು.

೭೫. ——, ೨೦೦೫, ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂಥಹದು?, ಭಾಷಾ ಪ್ರಕಾಶನ, ಮೈಸೂರು.

೭೬. ——, ೨೦೦೬, ಕನ್ನಡ ವಾಕ್ಯಗಳ ಒಳರಚನೆ, ಭಾಷಾ ಪ್ರಕಾಶನ, ಮೈಸೂರು.

೭೭. ——, ೨೦೦೬, ಕನ್ನಡ ನುಡಿಯ ಬಗ್ಗೆ ಚಿಂತನೆ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೭೮. ——, ೨೦೦೮, ಇಂಗ್ಲಿಶ್ ಪದಗಳಿಗೆ ಕನ್ನಡದ್ದೇ ಪದಗಳು, ಭಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

೭೯. ——, ೨೦೦೮, ಮಾತಿನ ಒಳಗುಟ್ಟು, ಭಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

೮೦. ——, ೨೦೦೮, ಕನ್ನಡದ ಬರಹದ ಸೊಲ್ಲರಿಮೆ – ೧, ಭಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

೮೧. ——, ೨೦೦೯, ಕನ್ನಡ ವ್ಯಾಕರಣ ಯಾಕೆ ಬೇಕು?, ಭಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

೮೨. ——, ೨೦೦೯, ಕನ್ನಡ ಬರಹವನ್ನು ಸರಿಪಡಿಸೋಣ, ಭಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

೮೩. ——, ೨೦೧೦, ಭಾಷೆಯ ಬಗೆಗೆ ನೀವೇನು ಬಲ್ಲಿರಿ?, ಭಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

೮೪. ——, ೨೦೧೦, ಕನ್ನಡ ಪದಗಳ ಒಳರಚನೆ, ಭಾಷಾ ಪ್ರಕಾಶನ, ಗಡಿಕಲ್ಲು, ಕೊಪ್ಪ.

೮೫. ಶಂಕರಲಿಂಗಪ್ಪ ಎಂ.ಎಲ್.(ಸಂ) ೨೦೦೩, ಕ.ಸಾ.ಪ. ಸಾಹಿತ್ಯ ಸಮ್ಮೇಳನಗಳ ನಿರ್ಣಯಗಳು, ಸುಮುಖ ಪ್ರಕಾಶನ, ಕಾಮಾಕ್ಷಿಪಾಳ್ಯ, ಬೆಂಗಳೂರು.

೮೬. ಶಿರೂರ ಬಿ.ವ್ಹಿ., ೨೦೧೪, ಸಂಶೋಧನ ಸ್ವರೂಪ, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ.

೮೭. ಶೇಷಗಿರಿರಾವ್ ಎಲ್.ಎಸ್., ೧೯೮೫, ಕನ್ನಡದ ಅಳಿವು ಉಳಿವು, ಕನ್ನಡ ಭಾಷಾ ಅಭಿವೃದ್ಧಿಯ ಸಮೀಕ್ಷಾ ಪ್ರಕಾಶನ, ಬೆಂಗಳೂರು.

೮೮. ಶ್ರೀಕೃಷ್ಣಭಟ್ ಅರ್ತಿಕಜೆ, ೧೯೯೫, ಸಾರ್ಥಕ, ಪ್ರೊ॥ ಎಂ.ಮರಿಯಪ್ಪ ಭಟ್ ಸಂಸ್ಮರಣ ಗ್ರಂಥ, ಮದರಾಸು.

೮೯. ——, ೨೦೧೧, ನಿಘಂಟುತಜ್ಞ, ಪ್ರೊ॥ ಮುಂಗ್ಲಿಮನೆ ಮರಿಯಪ್ಪ ಭಟ್ಟ, ಕಾಂತಾವರ ಕನ್ನಡ ಸಂಘ, ಕಾಂತಾವರ, ಕಾರ್ಕಳ.

೯೦. ಶ್ರೀಧರ್ ಎಸ್.ಎನ್., ೨೦೧೧, ಇಂದಿನ ಕನ್ನಡ : ರಚನೆ ಮತ್ತು ಬಳಕೆ, ಅಭಿನವ, ಬೆಂಗಳೂರು.

೯೧. ಸಂಗಮೇಶ ಸವದತ್ತಿಮಠ, ೧೯೯೯, ಭಾಷಾಲೇಖ, ರೂಪರಶ್ಮಿ ಪ್ರಕಾಶನ, ಧಾರವಾಡ
೯೨. ಶ್ರೀನಿವಾಸರಾವ್ .ಎಸ್.ವಿ, ೨೦೧೦, ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೯೩. ಶ್ರೀನಿವಾಸರಾವ್,ಎಸ್.ವಿ.,೨೦೧೧, ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೯೪. ಸಂಗಮೇಶ ಸವದತ್ತಿಮಠ, ೧೯೯೭, ದ್ರಾವಿಡ ಭಾಷಾ ವಿಜ್ಞಾನ ಪರಿಚಯ, ಚೇತನಾ ಬುಕ್, ಮೈಸೂರು.
೯೫. ——, ೨೦೦೬, ಕನ್ನಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶನ, ಧಾರವಾಡ.
೯೬. ——, ೨೦೦೮, 'ತೌಲನಿಕ ದ್ರಾವಿಡ ಭಾಷಾ ವಿಜ್ಞಾನ', ರೂಪರಶ್ಮಿ ಪ್ರಕಾಶನ, ಧಾರವಾಡ.
೯೭. ——, ೨೦೧೦, ಕನ್ನಡ ಸಾಹಿತ್ಯ ಸಂಶೋಧನೆ : ಮಾರ್ಗ ಮತ್ತು ಇತಿಹಾಸ, ರೂಪರಶ್ಮಿ ಪ್ರಕಾಶನ, ಧಾರವಾಡ.
೯೮. ——, ೨೦೧೨, ಕನ್ನಡ ಭಾಷಾವಿಜ್ಞಾನ ನಡೆದುಬಂದ ದಾರಿ, ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ ಹಾರಕೂಡ.
೯೯. ಸಾಂಬಮೂರ್ತಿ, ೨೦೦೪, ಭಾಷೆ ಮತ್ತು ಅಶಾಬ್ದಿಕ ಸಂವಹನ, ಸಿ.ವಿ.ಜಿ. ಪಬ್ಲಿಕೇಶನ್, ಬೆಂಗಳೂರು.
೧೦೦. ——, ೨೦೦೬, ಕನ್ನಡದಲ್ಲಿ ಪ್ರತ್ಯಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೦೧. ——, ೨೦೧೦, ಕನ್ನಡ ಕ್ರಿಯಾರಚನೆ – ಬಗೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೦೨. ——, ೨೦೧೨, ನುಡಿ ನಡೆ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ಸಿರುಗುಪ್ಪ.
೧೦೩. ಸಣ್ಣಯ್ಯ ಬಿ.ಎಸ್., ೨೦೦೨, ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
೧೦೪. ಸೀತಾರಾಮಯ್ಯ ಎಂ.ವಿ., ೨೦೧೦, ಶಾಸ್ತ್ರ ಸಾಹಿತ್ಯ, ಸಪ್ನ ಬುಕ್ ಹೌಸ್, ಬೆಂಗಳೂರು.
೧೦೫. ಸುಚೇತಾ ನವರತ್ನ, ೨೦೧೦, ದ್ರಾವಿಡ ಅಧ್ಯಯನಕಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೧೦೬. ಸುಧಾಕರ, ೧೯೭೩, ನಮ್ಮ ಸುತ್ತಿನ ಗಾದೆಗಳು, ಕಾವ್ಯಶ್ರೀ ಪ್ರಕಾಶನ, ಮೈಸೂರು.
೧೦೭. ಸುರೇಂದ್ರಸ್ವಾಮಿ (ಸಂ), ೨೦೧೬, ಕನ್ನಡ ಅಂದು ಇಂದು, ಎಂ.ಜಿ.ಎಂಟರ್‌ಪ್ರೈಸಸ್ ಮತ್ತು ಪ್ರಿಂಟರ್ಸ್, ತುಮಕೂರು.

೧೦೮. ಸೋಮಶೇಖರಗೌಡ, ೨೦೧೦, ಭಾಷೆ ರಚನೆ ಬಳಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦೯. ಹೆಗಡೆ ಎಂ.ಎ., ೨೦೧೨, ಭಾರತೀಯ ದರ್ಶನಗಳು ಮತ್ತು ಭಾಷೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೧೧೦. ಹೊನ್ನಾಕಟ್ಟೆ ಎನ್.ಪಿ., ೨೦೧೦, 'ಕನ್ನಡ ಧ್ವನಿ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

## ನಿಘಂಟುಶಾಸ್ತ್ರ ಗ್ರಂಥಗಳು

೧. ಅಂಗಡಿ ಎಸ್.ಎಸ್., ೨೦೦೩, ಕನ್ನಡ ನಿಘಂಟು ರಚನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅನಂತರಂಗಾಚಾರ್ ಎನ್.ಎಸ್. ೨೦೦೬, ನಿರುಕ್ತ ಶಬ್ದಾರ್ಥ ನಿರ್ವಚನ ಶಾಸ್ತ್ರ, ಡಿ.ವಿ.ಕೆ.ಮೂರ್ತಿ, ಮೈಸೂರು.

೩. ಕಾರ್ತಿಕ್. ಎಸ್., ೨೦೧೧, ಪದಾರ್ಥ ಸಂಪದ, ತುಮಕೂರು ವಿಶ್ವವಿದ್ಯಾಲಯ, ತುಮಕೂರು.

೪. ——, ೨೦೧೪, ಕೆಲವು ಕನ್ನಡ ನಿಘಂಟುಗಳು : ಸಮಸ್ಯೆಗಳು, ಪರಿಹಾರಗಳು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೫. ಗೌರಿಸುಂದರ್(ಸಂ.) ೨೦೧೧, ನಿಘಂಟು ಬ್ರಹ್ಮ ಜಿ.ವಿ., ಸುಂದರ ಪ್ರಕಾಶನ, ಹನುಮಂತನಗರ, ಬೆಂಗಳೂರು.

೬. ಜಿ.ವಿ.ವಿಚಾರ ವಿಹಾರ, ೨೦೧೧, ಭಾರತೀಯ ವಿದ್ಯಾಭವನ, ಬೆಂಗಳೂರು.

೭. ದೇವರಕೊಂಡಾರೆಡ್ಡಿ. ೨೦೧೫, ಶಾಸ್ತ್ರಸಾಹಿತ್ಯ (ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧೨), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮. ನರಸಿಂಹಾಚಾರ್ ಡಿ.ಎಲ್., ೧೯೭೧. ಪೀಠಿಕೆಗಳು, ಲೇಖನಗಳು, ಡಿ.ವಿ.ಕೆ.ಮೂರ್ತಿ, ಮೈಸೂರು.

೯. ನಾವಡ ಎ.ವಿ., ೨೦೧೫, ಮುಂಬೆಳಗು (ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦. ಪಾದೇಕಲ್ಲು ವಿಷ್ಣುಭಟ್ಟ, (ಸಂ) ೨೦೧೧, ವಿದ್ವಜ್ಜೀವಿತ, ಪ್ರೊ॥ ಜಿ.ವೆಂಕಟಸುಬ್ಬಯ್ಯನವರ ಗೌರವ ಗ್ರಂಥ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ.

೧೧. ಬಸವಾರಾಧ್ಯ ಎನ್., ೧೯೯೪. ಹಳಗನ್ನಡ ನಿಘಂಟು, ಡಿ.ವಿ.ಕೆ.ಮೂರ್ತಿ, ಮೈಸೂರು.

೧೨. ಮಾಡ್ತ ವಿಲ್ಯಂ, ಕುಲಕರ್ಣಿ ಆರ್.ವೈ. ೧೯೯೪- ನಿಘಂಟು ರಚನಾ ವಿಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ವೆಂಕಟಸುಬ್ಬಯ್ಯ .ಜಿ., ೧೯೯೩, ಕನ್ನಡ ನಿಘಂಟು ಶಾಸ್ತ್ರ ಪರಿಚಯ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೧೪. ——, ೨೦೦೨, ಕನ್ನಡ ನಿಘಂಟು ಪರಿವಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೫. ——, ೨೦೧೦, ಶಬ್ದ ಮತ್ತು ಅರ್ಥ, ಅಭಿವ್ಯಕ್ತಿ – ಒಂದು ಸಾಂಸ್ಕೃತಿಕ ವೇದಿಕೆ, ಬೆಂಗಳೂರು.

೧೬. ಹೊನ್ನು ಸಿದ್ಧಾರ್ಥ ಸಿ.ಬಿ.. ೨೦೧೩, ಸಾಹಿತ್ಯ ಅಧ್ಯಯನ-೬, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು – ೫೬೦೦೦೫೬

## ENGLISH REFERENCE BOOKS

1. David F. Coward & Charles E.Grimes, 2000, Makiing Dictionaries, A guide to lexicography and the Multi-Dictionary Formatter, SIL International, Waxhaw, North Carolina.
2. Doroszewski Witold, 1973, Elements of Lexicology and Semiotics, The Haauge.
3. Katre S.M., 1969, Lexicography, Annamalai University, Annamalai Nagar,
4. Kulkarni R.Y., 1998, Theory and Method in Kittle's Dictionary, A Historical perspective, Mangalore.
5. Mishra B.G , 1980, Lexicography in India, CIIL, Mysore, Zgusta Ladislav, Manual of Lexicography, 1971, The Hague
6. Singh R.P., 1991, 'The Manual of Lexicography, CIIL, MYSORE.
7. Venkatasubbaiah. G, 2012, Kannada Lexicography and Other Articles, Prism Books Pvt. Ltd, Bengaluru.

## Articles

Henning Bergenholtz & Rufus H. Gouws, 2012, What is Lexicography.

## Internet Data

The Oxford English Dictionary and Its Historical Principles

The Oxford English Dictionary

What is Lexicography?

The Art of Lexicography

www.oed.com

**ಸಂಶೋಧನಾ ಪ್ರಬಂಧಗಳು**

೧. ಅಂಗಡಿ ಎಸ್.ಎಸ್., ೧೯೯೮, ಮಿಷನರಿಗಳ ದ್ವಿಭಾಷಿಕ ನಿಘಂಟುಗಳು – ತೌಲನಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, (ಅಪ್ರಕಟಿತ)

೨. ದೇಶಪಾಂಡೆ ಎಸ್.ಎಲ್., ೨೦೦೮, 'ಕರ್ನಾಟಕದ ಸ್ಥಳನಾಮಗಳು – ಒಂದು ಅಧ್ಯಯನ', ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

೩. ರಮೇಶ್ ಚಂದ್ರದತ್, ೧೯೯೭, ಕನ್ನಡದಲ್ಲಿ ನಿಘಂಟು ರಚನಾ ಕಲೆ, ಮದ್ರಾಸ್ ವಿಶ್ವವಿದ್ಯಾಲಯ, ಚೆನ್ನೈ (ಅಪ್ರಕಟಿತ)

೪. ರೆ. ಎಫ್. ಕಿಟೆಲ್, ೧೮೯೪, ಕನ್ನಡ – ಇಂಗ್ಲಿಶ್ ನಿಘಂಟು, ಬಾಸೆಲ್ ಮಿಷನ್, ಮಂಗಳೂರು.

೫. ಶಂಕರಲಿಂಗಪ್ಪ ಎಂ. ಎಲ್. ೨೦೦೮, ಕನ್ನಡ ಸಾಹಿತ್ಯ ಪರಿಷತ್ತು – ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಸುಧಾ ಎಸ್. ಕೌಜಗೇರಿ , ೨೦೦೮, ಕಿಟೆಲ್ ಕೋಶ – ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

**ನಿಘಂಟುಗಳು**

೧. ಅಂಗಡಿ ಎಸ್.ಎಸ್., ೧೯೯೬, ಕನ್ನಡ ವ್ಯಾಕರಣ ಪರಿಭಾಷೆ, ಸಮಾಜ ಪುಸ್ತಕಾಲಯ, ಧಾರವಾಡ.

೨. ಆಚಾರ್ಯ ಕೆ.ಪಿ., ೨೦೦೩, 'ಇಂಗ್ಲಿಶ್–ಕನ್ನಡ ಭಾಷಾವಿಜ್ಞಾನ ಕೋಶ', ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಅ.ರಾ.ಸೇ., ೨೦೦೦, ಪರಮಾರ್ಥ ಪದಕೋಶ, ಕಾಮಧೇನು ಪ್ರಕಾಶನ, ಬೆಂಗಳೂರು

೪. ಉಪಾಧ್ಯಾಯ ಯು.ಪಿ., ಮೇ–೧೯೮೮, 'ತುಳು ನಿಘಂಟು, ಸಂಪುಟ ಒಂದು', ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೫. ಉಪಾಧ್ಯಾಯ ಯು.ಪಿ., ಅಕ್ಟೋಬರ್ – ೧೯೯೨, 'ತುಳು ನಿಘಂಟು, ಸಂಪುಟ ಎರಡು', ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೬. ಉಪಾಧ್ಯಾಯ ಯು.ಪಿ., ಮಾರ್ಚ್– ೧೯೯೫, 'ತುಳು ನಿಘಂಟು, ಸಂಪುಟ ಮೂರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೭. ಉಪಾಧ್ಯಾಯ ಯು.ಪಿ., ಮಾರ್ಚ್–೧೯೯೭, 'ತುಳು ನಿಘಂಟು, ಸಂಪುಟ ನಾಲ್ಕು'. ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೮. ಉಪಾಧ್ಯಾಯ ಯು.ಪಿ., ಮೇ-೧೯೯೭, 'ತುಳು ನಿಘಂಟು, ಸಂಪುಟ ಐದು', ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೯. ಉಪಾಧ್ಯಾಯ ಯು.ಪಿ., ಸೆಪ್ಟೆಂಬರ್- ೧೯೯೭, 'ತುಳು ನಿಘಂಟು, ಸಂಪುಟ ಆರು', ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೧೦. ಕನ್ನಡ ಸಾಹಿತ್ಯ ಪರಿಷತ್ತು, ೧೯೭೫, ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧. ಕನ್ನಡ ನಿಘಂಟು (ಎಂಟು ಸಂಪುಟಗಳು), ೨೦೧೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨. ಕಿಟೆಲ್ ಎಫ್. ರೆವರೆಂಡ್, ೨೦೦೭, 'A Kannada – English Dictionary', ಏಷಿಯಾನ್ ಎಜುಕೇಶನ್ ಸರ್ವಿಸಸ್, ನವದೆಹಲಿ – ಚೆನ್ನೈ

೧೩. ಗಂಗಾನಾಯಕ್ ಕೆ.ಎನ್., ೨೦೧೧, ಕನ್ನಡದಲ್ಲಿ ಅನ್ಯಭಾಷಾ ಪದ ನಿಷ್ಪತ್ತಿ ಕೋಶ, ಸಂಪುಟ – ೧ (ಅ – ನಾ) ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೪. ಗಂಗಾನಾಯಕ್ ಕೆ.ಎನ್., ೨೦೧೧, ಕನ್ನಡದಲ್ಲಿ ಅನ್ಯಭಾಷಾ ಪದ ನಿಷ್ಪತ್ತಿ ಕೋಶ, ಸಂಪುಟ – ೨ (ನಾ – ಜ್ಞ) ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೫. ಗಂಗಾನಾಯಕ್ ಕೆ.ಎನ್. (ಸಂ.), ೨೦೧೧, ಅಕಾರಾದಿ ನಿಘಂಟು ಮತ್ತು ವೈದ್ಯ ನಿಘಂಟು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೬. ಗೋಪಾಲ್ ಟಿ.ಎಸ್., ೨೦೧೩, ಕನ್ನಡ ನುಡಿಗಟ್ಟುಗಳು, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೧೭. ——, ೨೦೧೪, ನಾನಾರ್ಥ ಪದಕೋಶ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್,

ಬೆಂಗಳೂರು.

೧೮. ——, ೨೦೧೪, ಕ್ರಿಯಾಪದ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೧೯. ——, ೨೦೧೫, ವಿರುದ್ಧಾರ್ಥ ಪದಕೋಶ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೨೦. ——, ೨೦೧೫, ತತ್ಸಮ-ತದ್ಭವ ಪದಕೋಶ, ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೨೧. ಚನ್ನಬಸಪ್ಪ ಗೊ.ರು (ಪ್ರಸಂ.), ೨೦೧೨, ಕನ್ನಡ ಜಾನಪದ ನಿಘಂಟು (ಸಂಪುಟ-೧), ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು.

೨೨. ದಕ್ಷಿಣಾಮೂರ್ತಿ ಟಿ.ಎಸ್., ೨೦೧೧, ಅಕಾರಾದಿ ನಿಘಂಟು ಮತ್ತು ವೈದ್ಯ ನಿಘಂಟು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

೨೩. ನಂಜುಂಡಸ್ವಾಮಿ ಎಚ್.ಕೆ., ೨೦೧೦, ಕನ್ನಡ-ಗಿನ್ನಡ, ಸಾಹಿತ್ಯ ಭಂಡಾರ, ಬೆಂಗಳೂರು.

೨೪. ನಾಗರಾಜ ಹೊಸೂರಕರ, ೨೦೧೧, ತತ್ಸಮ ತದ್ಭವ ಮತ್ತು ವಿರುದ್ಧ ಪದಕೋಶ, ಜನಪದ ಪ್ರಕಾಶನ, ಬೆಂಗಳೂರು.

೨೫. ನಾಗೇಗೌಡ ಎಚ್.ಎಲ್., ೧೯೯೮, 'ಕನ್ನಡ ಜಾನಪದ ಕೋಶ', ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೨೬. ನಾಗಭೂಷಣ ಸ್ವಾಮಿ ಓ.ಎಲ್., ೨೦೧೨, 'ವಿಮರ್ಶೆಯ ಪರಿಭಾಷೆ', ಅಭಿನವ, ಬೆಂಗಳೂರು.

೨೭. ನಾರಾಯಣ ಕೆ.ವಿ. ಮತ್ತು ಇತರರು, ೨೦೦೧, ದಿನ ದಿನ, ಭಾಷಾಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ನಾರಾಯಣ ಕೆ.ವಿ., ೨೦೦೯, ಭಾಷೆ - ವಿಶ್ವಕೋಶ - ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ——, (ಸಂ.), ೧೯೯೯, ಕೃಷಿ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೦. ನಾರಾಯಣ ಪಿ.ವಿ., ೨೦೧೧, 'ಚಂಪೂ ನುಡಿಗನ್ನಡಿ', ಸಪ್ನ ಬುಕ್ ಹೌಸ್, ಬೆಂಗಳೂರು.

೩೧. ——, ೨೦೧೩, 'ಪಂಪನ ನುಡಿಗಣಿ', ಕಾಮಧೇನು ಪುಸ್ತಕ ಭವನ, ಬೆಂಗಳೂರು.

೩೨. ಪ್ರಕಾಶ್ ಚಾಲುಕ್ಯ, ೨೦೧೨, 'ಪರ್ಯಾಯ ಪದ ಸಂಪದ', ಸಪ್ನ ಬುಕ್ ಹೌಸ್, ಬೆಂಗಳೂರು.

೩೩. ಪ್ರಕಾಶ್ ಬಿ.ಆರ್ ಮತ್ತು ಮಧುಸೂದನ್.ಎನ್., ೨೦೦೦, 'ಪದಸಂಚಯ', ಅಂಕಿತ ಪುಸ್ತಕ, ಬೆಂಗಳೂರು.

೩೪. ಪ್ರಶಾಂತ್ ಮಾಡ್ತ, ೨೦೦೭, ಕನ್ನಡ ಪದನಿಧಿ, ಕನ್ನಡ ಸಂಘ, ಸಂತ ಜೋಸೆಫ್ ಸಂಜೆ ಕಾಲೇಜು, ಬೆಂಗಳೂರು.

೩೫. ಬಸವಾರಾಧ್ಯ.ಎನ್., ೨೦೦೯, 'ಹಳಗನ್ನಡ ನಿಘಂಟು', ಡಿ.ವಿ.ಕೆ.ಮೂರ್ತಿ, ಮೈಸೂರು.

೩೬. ಬಿದರಹಳ್ಳಿ ನರಸಿಂಹಮೂರ್ತಿ(ಸಂ.), ೨೦೧೪, ನ್ಯಾಮತಿ ಪಂಡಿತ ಪ್ರಭಣ್ಣನವರ ಕನ್ನಡ-ಕನ್ನಡ ನಿಘಂಟು, ಶ್ರೀ ಚನ್ನಪ್ಪಸ್ವಾಮಿ ಹಿರೇಕಲ್ಮಠ, ಹೊನ್ನಾಳಿ.

೩೭. ಮಲ್ಲೇಪುರಂ ಜಿ. ವೆಂಕಟೇಶ, ೨೦೦೦, ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಮಹಾದೇವಯ್ಯ.ಪಿ., ೨೦೦೧, ದಿನ ದಿನ – ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ರಾಜಪುರೋಹಿತ ಬಿ.ಬಿ., ೨೦೧೧, ದ.ರಾ.ಬೇಂದ್ರೆ ಕಾವ್ಯದ ನುಡಿಗಟ್ಟು ಕೋಶ, ಬೇಂದ್ರೆ ಸಂಶೋಧನ ಸಂಸ್ಥೆ, ಹುಬ್ಬಳ್ಳಿ.

೪೦. ರಾಜಶೇಖರ ಪಿ.ಕೆ., ಕಿತ್ತೂರು ಡಿ.ಸುರೇಶ್ ಮತ್ತು ಮೈಸೂರು ಉಮೇಶ್, ೨೦೦೫, 'ಪದಸಂಪದ', ಅಮೋಘ ಪ್ರಕಾಶನ, ಮೈಸೂರು.

೪೧. ವೆಂಕಟಸುಬ್ಬಯ್ಯ.ಜಿ., ೨೦೦೬, ಪ್ರಿಸಮ್ ಕನ್ನಡ ಕ್ಲಿಷ್ಟ ಪದಕೋಶ (ಶಬ್ದದ ವ್ಯುತ್ಪತ್ತಿ ಸಹಿತ), ಪ್ರಿಸಮ್ ಬುಕ್ಸ್ ಪ್ರೈ.ಲಿ., ಬೆಂಗಳೂರು.

೪೨. ವೆಂಕಟಸುಬ್ಬಯ್ಯ.ಜಿ., ೨೦೧೭, ಐ.ಟಿ ಶಬ್ದಕೋಶ, ಸಪ್ನ ಬುಕ್ ಹೌಸ್, ಬೆಂಗಳೂರು.

೪೩. ವೆಂಕಟಾಚಲಶಾಸ್ತ್ರಿ, ೨೦೧೧, ಗಜಶಾಸ್ತ್ರ ಶಬ್ದಕೋಶ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೪೪. ವಿದ್ಯಾಶಂಕರ.ಎಸ್., ೧೯೯೩, ವಚನ ಪರಿಭಾಷಾ ಕೋಶ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೫. ಶಿವರಾಮ ಕಾರಂತ, ೨೦೦೯, ಸಿರಿಗನ್ನಡ ಅರ್ಥಕೋಶ, ಎಸ್.ಬಿ.ಎಸ್. ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೪೬. ಶ್ರೀಕೃಷ್ಣಭಟ್ ಅರ್ತಿಕಜೆ ಮತ್ತು ಹರಿಕೃಷ್ಣ ಭರಣ್ಯ, ೨೦೦೫, 'ನುಡಿಸಂಸ್ಕೃತಿ' (ಹವ್ಯಕ ಪಡೆನುಡಿ ಕೋಶ), ಹವ್ಯಕ ಅಧ್ಯಯನ ಕೇಂದ್ರ, ಶ್ರೀ ಅಖಿಲ ಹವ್ಯಕ ಮಹಾಸಭಾ (ರಿ), ಬೆಂಗಳೂರು.

೪೭. ಶ್ರೀಧರ್ ಎಂ.ಕೆ., ೨೦೧೧, ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ – ಇಂಗ್ಲಿಶ್ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೮. ಶ್ರೀನಿವಾಸ ಹಾವನೂರ, ೧೯೯೯, 'ಗಂಗಾಧರ ಮಡಿವಾಳೇಶ್ವರ ತುರಮುರಿ ಅವರ ಸಟೀಕಿನ ಶಬ್ದಮಂಜರಿ ಕೋಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೯. ಸಾಂಬಮೂರ್ತಿ, ೧೯೯೯, ನಿಷೇಧಾರ್ಥ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೦. ——, ೨೦೦೦, ನೇಕಾರ ವೃತ್ತಿ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೧. ——, ೨೦೦೧, ದಿನದಿನ ೨, ಭಾಷಾಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫೨. ಹಂಪನಾ, ೨೦೧೪, ದ್ರಾವಿಡಭಾಷಾ ಜ್ಞಾತಿಪದ ಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

**ನಿಘಂಟುಶಾಸ್ತ್ರ ಲೇಖನಗಳು**

೧. ಕನ್ನಡ ನುಡಿ, ಸಂಪುಟ ೭೬, ಸಂಚಿಕೆ-೦೧, ಜನವರಿ ೨೦೧೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೨. ಕನ್ನಡ ನುಡಿ, ಸಂಪುಟ ೭೬, ಸಂಚಿಕೆ-೦೨, ಫೆಬ್ರುವರಿ, ೨೦೧೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೩. ಗುಂಡ್ಮಿ ಚಂದ್ರಶೇಖರ ಐತಾಳ, ೧೯೯೮, ಕ.ಸಾ.ಪ.ದ ಕನ್ನಡ ನಿಘಂಟು – ಅನರ್ಥಗಳ ಗಂಟು (ಸಂಶೋಧನ ವಿಹಾರ), ಆನಂದ ಪ್ರಕಾಶನ, ದಕ್ಷಿಣ ಕನ್ನಡ.
೪. ನರಸಿಂಹಾಚಾರ್ ಡಿ.ಎಲ್., ೧೯೭೧, ಕನ್ನಡಕ್ಕೆ ಹೊಸ ನಿಘಂಟು (ಶತಮಾನದ ಸಂಶೋಧನೆ), ಪೀಠಿಕೆಗಳು – ಲೇಖನಗಳು, ಡಿ.ವಿ.ಕೆ. ಮೂರ್ತಿ, ಮೈಸೂರು.
೫. ನಾರಾಯಣ ಕೆ.ವಿ. ಮತ್ತು ಸುಜ್ಞಾನಮೂರ್ತಿ, ೧೯೯೯, ನಮ್ಮ ಕನ್ನಡ – ೯, ಕನ್ನಡ ಭಾಷಾಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೬. ನಾರಾಯಣ ಕೆ.ವಿ., ೨೦೦೧, ನಮ್ಮ ಕನ್ನಡ-೫೦, ಹೊನ್ನಸಂಚಿಕೆ, ಕನ್ನಡ ಭಾಷಾಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೭. ನಾರಾಯಣ ಕೆ.ವಿ., ಮಾರ್ಚ್ ೨೦೧೧, ನುಡಿನಾಡಿ-೩, ನಮ್ಮ ಕನ್ನಡ, ಕನ್ನಡ ಭಾಷಾಧ್ಯಯನ ವೇದಿಕೆ, ಬೆಂಗಳೂರು.
೮. ಉಮೇಶ್.ಎಚ್.ಎಸ್., (ಸಂ), ನಿಘಂಟು ನಿರಂತರ, ನಿಲುಗಡೆ ಇಲ್ಲ, ಅರುಹು-ಕುರುಹು, ಅಕ್ಟೋಬರ್ – ಡಿಸೆಂಬರ್, ಸಂಪುಟ ೮, ಸಂಚಿಕೆ ೧೫, ಕುವೆಂಪು ನಗರ, ಮೈಸೂರು.
೯. ನಾಗರಾಜ ಬಡದಾಳ್, ೧೯-೧೧-೨೦೦೮, ನಿಘಂಟು ತರಲು ಕಿಟೆಲ್‌ರಷ್ಟೇ ಶ್ರಮಿಸಿದ್ದ ಪ್ರಭಣ್ಣ, ಕನ್ನಡ ಪ್ರಭ ದಿನಪತ್ರಿಕೆ.
೧೦. ಪಾದೇಕಲ್ಲು ವಿಷ್ಣುಭಟ್ಟ, ೨೦೦೮, 'ಶಬ್ದಾರ್ಥ ಶೋಧ', ಸೇಡಿಯಾಪು ಶಬ್ದಾರ್ಥ ಸಂಶೋಧನ ಸಂಪುಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಎಂ.ಜಿ.ಎಂ. ಕಾಲೇಜು, ಉಡುಪಿ.
೧೧. ಮಿತ್ರ ಅ.ರಾ., ೨೦೦೯, ಭಾಷೆಯ ಬೆಳವಣಿಗೆಯಲ್ಲಿ ನಿಘಂಟುಗಳ ಪಾತ್ರ, ಮಿತ್ರಾವಲೋಕನ, ಸಂಕೀರ್ಣ ಬರಹಗಳು, ವಸಂತ ಪ್ರಕಾಶನ, ಬೆಂಗಳೂರು.
೧೨. ರವೀಂದ್ರನಾಥ್.ಬಿ.ಆರ್., (ಲೇ), ೨೦೧೬, "ನಿಘಂಟುಗಳ ಇತಿಹಾಸ', ಕನ್ನಡ ಸಾಹಿತ್ಯ ಪರಿಷ್ಪತ್ರಿಕೆ, ಸಂಚಿಕೆ-೧, ಸಂಪುಟ-೯೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ರಾಜ್ಯಶ್ರೀ ಸತೀಶ್, ೧ ನವೆಂಬರ್ ೨೦೧೨, ಹೀಗೆ ಬೆಳೆದು ಬಂತು ಕನ್ನಡ ನಿಘಂಟು, ತರಂಗ ವಾರಪತ್ರಿಕೆ.

೧೪. ವಸಂತಕುಮಾರ್ ತಾಳ್ತಜೆ, ೨೦೦೧, ನಾನಾರ್ಥ ಪದಕೋಶ, ಮುತ್ತಿನ ಸತ್ತಿಗೆ, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ.

೧೫. ——, ೨೦೦೧, ಕನ್ನಡ ನಿಘಂಟು ಮತ್ತು ಕಿಟೆಲ್ ಮಾದರಿ, ಮುತ್ತಿನ ಸತ್ತಿಗೆ, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ.

೧೬. ವೀರಣ್ಣ ರಾಜೂರ, ಜನವರಿ-ಜೂನ್, ೨೦೧೪, ಕನ್ನಡ ಸಾಹಿತ್ಯ ಪರಿಷ್ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೭. ಸಂಗಮೇಶ ಸವದತ್ತಿ ಮಠ, ಜನವರಿ-೧೯೯೯, 'ಭಾಷಾವಿಜ್ಞಾನ ಮತ್ತು ನಿಘಂಟು ರಚನೆ' (ಭಾಷಾಲೇಖ), ರೂಪರಶ್ಮಿ ಪ್ರಕಾಶನ, ಗುಲಬರ್ಗಾ.

೧೮. ಸಂಗನಾಳ ಮಠ ಯು.ಎನ್., ನವೆಂಬರ್ ೧೦ ೨೦೧೩, 'ಕನ್ನಡದಲ್ಲಿ ನಿಘಂಟುಗಳ ಪರಂಪರೆ' ಕರ್ಮವೀರ ವಾರಪತ್ರಿಕೆ, ಬೆಂಗಳೂರು

**ಪತ್ರಿಕೆಗಳು**

೧. ಅಭಿಜಾತ ಕನ್ನಡ, ಬೆಳಗಾವಿ

೨. ಅರುಹು-ಕುರುಹು, ಮೈಸೂರು

೩. ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ, ಬೆಂಗಳೂರು

೪. ಕನ್ನಡ ನುಡಿ, ಬೆಂಗಳೂರು.

೫. ಕನ್ನಡಪ್ರಭ, ಬೆಂಗಳೂರು.

೬. ಕರ್ಮವೀರ, ಹುಬ್ಬಳ್ಳಿ

೭. ತರಂಗ, ಬೆಂಗಳೂರು.

೮. ಪ್ರಜಾವಾಣಿ, ಬೆಂಗಳೂರು.

೯. ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ.

**ಪ್ರಕಟಿತ ಲೇಖನಗಳು**

೧. ತಿಪ್ಪೇರುದ್ರ ಪ್ರಭಣ್ಣ, ೨೦೧೫, ಕನಕದಾಸರ ಕೀರ್ತನೆಗಳ ಪದಪ್ರಯೋಗ ಕೋಶ, ಅಭಿಜಾತ ಕನ್ನಡ, ಪ್ರತಿಭಾನ(ಸಾಂಸ್ಕೃತಿಕ ಹಾಗೂ ಬೌದ್ಧಿಕ ಸಂಸ್ಥೆ), ಶಿವಬಸವನಗರ, ಬೆಳಗಾವಿ, ಸಂಚಿಕೆ-೧, ಸಂ-೧

೨. ತಿಪ್ಪೇರುದ್ರ ಪ್ರಭಣ್ಣ, ೨೦೧೫, ಕನ್ನಡ ಪದಗಳ ಗಂಟು - ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ - ಕನ್ನಡ ನಿಘಂಟು, ಅಭಿಜಾತ ಕನ್ನಡ, ಪ್ರತಿಭಾನ(ಸಾಂಸ್ಕೃತಿಕ ಹಾಗೂ ಬೌದ್ಧಿಕ ಸಂಸ್ಥೆ), ಶಿವಬಸವನಗರ, ಬೆಳಗಾವಿ, ಸಂಚಿಕೆ-೨, ಸಂಪುಟ-೧

೩. ತಿಪ್ಪೇರುದ್ರ ಪ್ರಭಣ್ಣ, (ಲೇ), ೨೦೧೬, ಕನ್ನಡ ನಿಘಂಟುಗಳು : ಅಂದು, ಸುರೇಂದ್ರ ಸ್ವಾಮಿ (ಸಂ), ಕನ್ನಡ ಅಂದು ಇಂದು, ಎಂ.ಜಿ.ಎಂಟರ್‌ಪ್ರೈಸಸ್ & ಪ್ರಿಂಟರ್ಸ್, ಎಸ್.ಎಸ್.ಪುರಂ, ತುಮಕೂರು.

೪. ತಿಪ್ಪೇರುದ್ರ ಪ್ರಭಣ್ಣ, (ಲೇ), ೨೦೧೬, ಕನ್ನಡ ನಿಘಂಟುಗಳು : ಇಂದು, ಸುರೇಂದ್ರ ಸ್ವಾಮಿ (ಸಂ), ಕನ್ನಡ ಅಂದು ಇಂದು, ಎಂ.ಜಿ.ಎಂಟರ್‌ಪ್ರೈಸಸ್ & ಪ್ರಿಂಟರ್ಸ್, ಎಸ್.ಎಸ್.ಪುರಂ, ತುಮಕೂರು.

* * * *

## ಪ್ರಶ್ನಾವಳಿ ಪಟ್ಟಿ

ಮಾಹಿತಿದಾರರ ಹೆಸರು :

ವಿದ್ಯಾಭ್ಯಾಸ :

ವೃತ್ತಿ :

ಸ್ಥಳ :

೧. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟನ್ನು ನೋಡಿದ್ದೀರಾ?

೨. ಕನ್ನಡ ನಿಘಂಟಿನ ಸಂಪುಟಗಳು ನಿಮ್ಮಲ್ಲಿ ಇವೆಯೇ?

೩. ಕನ್ನಡ ನಿಘಂಟನ್ನು ಬಳಸಿದ್ದೀರಾ?

೪. ನಿಘಂಟಿನ ಬಳಕೆಯ ಉದ್ದೇಶ:

೪.೧. ಕಾಗುಣಿತ ಅಕ್ಷರಕ್ಕೆ –

೪.೨. ಪದಗಳ ಅರ್ಥ ಹುಡುಕಲು –

೪.೩. ಹೊಸಪದದ ರಚನೆಗೆ –

೪.೪. ಪದದ ಪ್ರಾಚೀನತೆ/ಇತಿಹಾಸವನ್ನು ತಿಳಿದುಕೊಳ್ಳಲು –

೪.೫. ಪದಪ್ರಯೋಗ ತಿಳಿಯಲು –

೪.೬. ಇನ್ನಿತರ ಮಾಹಿತಿಗಾಗಿ –

೫. ಈ ನಿಘಂಟು ಬಳಸಲು ಅನುಕೂಲಕರವಾಗಿದೆಯೇ?

೬. ಈ ನಿಘಂಟನ್ನು ಉತ್ತಮಪಡಿಸಲು ನಿಮ್ಮ ಸಲಹೆಗಳು.

ಮಾಹಿತಿದಾರರ ಹೆಸರು

# ವಕ್ತೃ ವಿವರ

| ಕ್ರಸಂ. | ವಕ್ತೃಗಳ ಹೆಸರು | ವಯಸ್ಸು | ಜಾತಿ | ವೃತ್ತಿ | ಸ್ಥಳ |
|---|---|---|---|---|---|
| ೧ | ಬಿ.ಶಶಿಕುಮಾರ | ೨೧ | ನಾಯಕ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೨ | ಅಶೋಕ ಎಂ.ಎಸ್. | ೨೪ | ಆದಿಕರ್ನಾಟಕ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೩ | ಅಜರುದ್ದೀನ್.ಎ. | ೧೮ | ಮುಸ್ಲಿಂ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೪ | ಎಂ.ಭಾವನಾ | ೧೮ | ಗೊಲ್ಲ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೫ | ಗಂಗಾಭವಾನಿ | ೧೮ | ನಾಯಕ | ವಿದ್ಯಾರ್ಥಿ | ತಿಮ್ಮಲಾಪುರ |
| ೬ | ಕವಿತಾ.ಬಿ. | ೧೮ | ಶೆಟ್ಟಿ ಬಲಿಜ | ವಿದ್ಯಾರ್ಥಿ | ಡಣಾಪುರ |
| ೭ | ಬಸವರಾಜ.ಟಿ. | ೧೮ | ನಾಯಕ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೮ | ಮಂಜುನಾಥ ಕಟಗಿ | ೧೮ | ನಾಯಕ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೯ | ಜಿ. ಸಿತಾರ | ೧೮ | ನಾಯಕ | ವಿದ್ಯಾರ್ಥಿ | ವೆಂಕಟಾಪುರ |
| ೧೦ | ಎಂ.ಸೋಮಕ್ಕ | ೧೮ | ನಾಯಕ | ವಿದ್ಯಾರ್ಥಿ | ತಿಮ್ಮಲಾಪುರ |
| ೧೧ | ಎಚ್.ಯಲ್ಲಮ್ಮ | ೧೮ | ಆದಿಕರ್ನಾಟಕ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೧೨ | ಎಂ.ಮಾಬುಸಾಬ್ | ೧೯ | ಮುಸ್ಲಿಂ | ವಿದ್ಯಾರ್ಥಿ | ವೆಂಕಟಾಪುರ |
| ೧೩ | ಈರಮ್ಮ | ೨೧ | ಲಿಂಗಾಯತ | ವಿದ್ಯಾರ್ಥಿ | ಸಂಡೂರು |
| ೧೪ | ಅಲ್ಲಮ್ಮ.ಪಿ. | ೨೦ | ಪಿಂಜಾರ್ | ವಿದ್ಯಾರ್ಥಿ | ಸಂಡೂರು |
| ೧೫ | ಪವಿತ್ರ.ಎನ್. | ೧೯ | ನಾಯಕ | ವಿದ್ಯಾರ್ಥಿ | ಸಂಡೂರು |
| ೧೬ | ಸಲ್ಮಾ ಬಾನು | ೧೯ | ಮುಸ್ಲಿಂ | ವಿದ್ಯಾರ್ಥಿ | ಸಂಡೂರು |
| ೧೭ | ಎಂ.ಶಾಂತಕುಮಾರಿ | ೨೦ | ಲಿಂಗಾಯತ | ವಿದ್ಯಾರ್ಥಿ | ಸಂಡೂರು |
| ೧೮ | ಸುಷ್ಮ ಸಿ.ಕೆ. | ೧೯ | ಛಲವಾದಿ | ವಿದ್ಯಾರ್ಥಿ | ಸಂಡೂರು |

| | | | | | |
|---|---|---|---|---|---|
| ೧೯ | ಹೊನ್ನೂರಬಿ | ೧೯ | ಮುಸ್ಲಿಂ | ವಿದ್ಯಾರ್ಥಿ | ಸಂಡೂರು |
| ೨೦ | ಕಸ್ತೂರಿ ಕೆ.ಎಂ. | ೨೦ | ಜಂಗಮ | ವಿದ್ಯಾರ್ಥಿ | ಸಂಡೂರು |
| ೨೧ | ವೆಂಕಟೇಶ ನಾಯ್ಕ.ಬಿ. | ೨೧ | ಬಂಜಾರ | ವಿದ್ಯಾರ್ಥಿ | ಸಂಡೂರು |
| ೨೨ | ಕೆ.ರವಿಚಂದ್ರ | ೨೨ | ವಾಲ್ಮೀಕಿ | ವಿದ್ಯಾರ್ಥಿ | ಬೊಮ್ಮಘಟ್ಟ |
| ೨೩ | ಗಂಗಮ್ಮ.ವಿ. | ೨೦ | ಭೋವಿ | ವಿದ್ಯಾರ್ಥಿ | ಯರದಮ್ಮನಹಳ್ಳಿ |
| ೨೪ | ಗೌರಮ್ಮ.ವಿ. | ೨೦ | ಭೋವಿ | ವಿದ್ಯಾರ್ಥಿ | ಯರದಮ್ಮನಹಳ್ಳಿ |
| ೨೫ | ನೇತ್ರ.ಎಂ. | ೨೨ | ಮಡಿವಾಳರು | ವಿದ್ಯಾರ್ಥಿ | ಯಶವಂತನಗರ |
| ೨೬ | ಲಕ್ಷ್ಮಿ ಎಚ್. | ೨೨ | ಆದಿಕರ್ನಾಟಕ | ವಿದ್ಯಾರ್ಥಿ | ಸಂಡೂರು |
| ೨೭ | ಎಂ.ಸಂದೇಶ್ | ೧೮ | ಆರ್ಯವೈಶ್ಯ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೨೮ | ಪ್ರವೀಣಕುಮಾರ್.ಜೆ. | ೧೮ | ಆದಿದ್ರಾವಿಡ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೨೯ | ಎಚ್.ಮೌನೇಶ್ | ೧೮ | ಕುರುಬ | ವಿದ್ಯಾರ್ಥಿ | ವೆಂಕಟಾಪುರ |
| ೩೦ | ಶೆಕ್ಷಾವಲಿ.ಬಿ. | ೧೯ | ಮುಸ್ಲಿಂ | ವಿದ್ಯಾರ್ಥಿ | ಅಯ್ಯನಹಳ್ಳಿ |
| ೩೧ | ಎನ್.ಅನಿಲಕುಮಾರ್ | ೨೪ | ವಾಲ್ಮೀಕಿ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೩೨ | ಬಸಯ್ಯ ಹಿರೇಮಠ | ೨೦ | ಜಂಗಮ | ವಿದ್ಯಾರ್ಥಿ | ಮರಿಯಮ್ಮನಹಳ್ಳಿ |
| ೩೩ | ಜುಗುಲ ಶ್ರೀಧರ | ೨೨ | ನಾಯಕ | ವಿದ್ಯಾರ್ಥಿ | ನಂದಿಹಳ್ಳಿ |
| ೩೪ | ಷಹನಾಜ್ ಬಾನು | ೨೨ | ಮುಸ್ಲಿಂ | ವಿದ್ಯಾರ್ಥಿ | ನಂದಿಹಳ್ಳಿ |
| ೩೫ | ವೀಣಾ ಜಿ | ೨೨ | ಲಿಂಗಾಯತ | ವಿದ್ಯಾರ್ಥಿ | ನಂದಿಹಳ್ಳಿ |
| ೩೬ | ಸರಸ್ವತಿ ಡಿ | ೨೩ | ಆದಿಕರ್ನಾಟಕ | ವಿದ್ಯಾರ್ಥಿ | ನಂದಿಹಳ್ಳಿ |
| ೩೭ | ಬಸವರಾಜ ತಳವಾರ | ೨೩ | ನಾಯಕ | ವಿದ್ಯಾರ್ಥಿ | ನಂದಿಹಳ್ಳಿ |
| ೩೮ | ಮಂಜುನಾಥ ಬಿ | ೨೨ | ಆದಿಕರ್ನಾಟಕ | ವಿದ್ಯಾರ್ಥಿ | ನಂದಿಹಳ್ಳಿ |
| ೩೯ | ಶ್ರೀಧರ ಡಿ | ೨೩ | ನಾಯಕ | ವಿದ್ಯಾರ್ಥಿ | ನಂದಿಹಳ್ಳಿ |
| ೪೦ | ಕೋಮಲ ಬಿ | ೨೨ | ಆದಿಕರ್ನಾಟಕ | ವಿದ್ಯಾರ್ಥಿ | ನಂದಿಹಳ್ಳಿ |
| ೪೧ | ಬೇವಿನಹಳ್ಳಿ ನಾಗರಾಜ | ೨೩ | ಆದಿಕರ್ನಾಟಕ | ವಿದ್ಯಾರ್ಥಿ | ನಂದಿಹಳ್ಳಿ |
| ೪೨ | ಕೋಡಿಹಳ್ಳಿ ಬಸವರಾಜ | ೨೩ | ಲಿಂಗಾಯತ | ವಿದ್ಯಾರ್ಥಿ | ನಂದಿಹಳ್ಳಿ |

| | | | | | |
|---|---|---|---|---|---|
| ೪೩ | ನಾಗರಾಜ ಎ.ಪಿ. | ೨೨ | ನಾಯಕ | ವಿದ್ಯಾರ್ಥಿ | ನಂದಿಹಳ್ಳಿ |
| ೪೪ | ಯಮನೂರಪ್ಪ | ೨೩ | ನಾಯಕ | ವಿದ್ಯಾರ್ಥಿ | ನಂದಿಹಳ್ಳಿ |
| ೪೫ | ಗಿರಿಜಾ | ೩೯ | ಗೊಲ್ಲ | ಅಧ್ಯಾಪಕರು | ಹೊಸಪೇಟೆ |
| ೪೬ | ನಾಗಣ್ಣ ಕಿಲಾರಿ | ೩೫ | ಕುರುಬ | ಅಧ್ಯಾಪಕರು | ಹೊಸಪೇಟೆ |
| ೪೭ | ಗುರುರಾಜ ಜೆ.ಎನ್. | ೩೪ | ಒಕ್ಕಲಿಗ | ಪ್ರಾಧ್ಯಾಪಕರು | ಸಂಡೂರು |
| ೪೮ | ಸತ್ಯಮೂರ್ತಿ ಎಚ್. | ೩೮ | ಲಿಂಗಾಯತ | ಉಪನ್ಯಾಸಕರು | ಸಂಡೂರು |
| ೪೯ | ಬಿ.ಜಿ.ಕನಕೇಶಮೂರ್ತಿ | ೫೪ | ವಿಶ್ವಕರ್ಮ | ಪ್ರಾಂಶುಪಾಲರು | ಹೊಸಪೇಟೆ |
| ೫೦ | ಎಚ್.ಎನ್.ಭೋಸಲೆ | ೫೩ | ಮರಾಠಾ | ಶಿಕ್ಷಕರು | ಸಂಡೂರು |
| ೫೧ | ವೆಂಕಟೇಶ | ೪೦ | ನಾಯಕ | ಉಪನ್ಯಾಸಕರು | ಸಂಡೂರು |
| ೫೨ | ಜಯಶ್ರೀ | ೩೧ | ಲಿಂಗಾಯತ | ಶಿಕ್ಷಕರು | ಮೋಕ |
| ೫೩ | ಜಯಣ್ಣ ತಳವಾರ | ೩೬ | ವಾಲ್ಮೀಕಿ | ಶಿಕ್ಷಕರು | ತಾಳೂರು |
| ೫೪ | ಜಡಿಯಪ್ಪ | ೩೬ | ಆದಿಕರ್ನಾಟಕ | ಉಪನ್ಯಾಸಕರು | ತಾರಾನಗರ |
| ೫೫ | ಕುಮಾರಸ್ವಾಮಿ ಕೆ | ೪೬ | ವಿಶ್ವಕರ್ಮ | ಶಿಕ್ಷಕರು | ಸಂಡೂರು |
| ೫೬ | ಆರ್.ಮಹಾರುದ್ರಪ್ಪ | ೫೬ | ಲಿಂಗಾಯತ | ಶಿಕ್ಷಕರು | ಹೊಸದರೋಜಿ |
| ೫೭ | ಎನ್.ವೀರಣ್ಣ | ೫೮ | ಲಿಂಗಾಯತ | ಮುಖ್ಯಗುರುಗಳು | ವ್ಯಾಸಪುರಿ |
| ೫೮ | ಎ.ಎನ್.ಸಿದ್ದೇಶ್ವರಿ | ೪೮ | ಲಿಂಗಾಯತ | ಶಿಕ್ಷಕರು | ಬಳ್ಳಾರಿ |
| ೫೯ | ಎಚ್.ಪರಸಪ್ಪ | ೩೫ | ಆದಿಕರ್ನಾಟಕ | ಪ್ರಾಧ್ಯಾಪಕರು | ಬಳ್ಳಾರಿ |
| ೬೦ | ಸುಂಕಪ್ಪ.ಕೆ | ೪೮ | ಕುರುಬ | ಉಪನ್ಯಾಸಕರು | ಬಳ್ಳಾರಿ |
| ೬೧ | ವಿಜಯಶ್ರೀ | ೨೯ | ಲಿಂಗಾಯತ | ಅಧ್ಯಾಪಕರು | ಬಳ್ಳಾರಿ |
| ೬೨ | ಪಟ್ಟಣ ರಾಕೇಶ್ | ೩೪ | ಲಿಂಗಾಯತ | ಪ್ರಾಧ್ಯಾಪಕರು | ಬಳ್ಳಾರಿ |
| ೬೩ | ಹುಚ್ಚುಸಾಬ್ | ೪೬ | ಪಿಂಜಾರ | ಪ್ರಾಧ್ಯಾಪಕರು | ಸಂಡೂರು |
| ೬೪ | ಹುಲಿಕುಂಟೆಪ್ಪ.ಜಿ. | ೪೨ | ನಾಯಕ | ಉಪನ್ಯಾಸಕರು | ಬೊಮ್ಮಘಟ್ಟ |
| ೬೫ | ಕಲಕೇರಿ ವೀರಮ್ಮ | ೩೮ | ಲಿಂಗಾಯತ | ಉಪನ್ಯಾಸಕರು | ಸಂಡೂರು |
| ೬೬ | ಜಿ.ಬಿ.ಮಂಜುನಾಥ | ೩೪ | ಗೊಲ್ಲರು | ಉಪನ್ಯಾಸಕರು | ಸಂಡೂರು |

| | | | | | |
|---|---|---|---|---|---|
| ೬೭ | ಅಕ್ಕನಾಗಮ್ಮ ಟಿ.ಎಚ್.ಎಂ. | ೪೮ | ಜಂಗಮ | ಶಿಕ್ಷಕರು | ಸಂಡೂರು |
| ೬೮ | ಕೊಟ್ರೇಶಿ ಮೈದೂರು | ೩೪ | ಲಿಂಗಾಯತ | ಶಿಕ್ಷಕರು | ಸಂಡೂರು |
| ೬೯ | ರುದ್ರಯ್ಯಸ್ವಾಮಿ ಎಸ್.ಎಚ್.ಎಂ. | ೩೪ | ಜಂಗಮ | ಶಿಕ್ಷಕರು | ತೊಣಸಿಗೇರಿ |
| ೭೦ | ಜಿ. ಅಜ್ಜಯ್ಯ | ೩೫ | ಲಿಂಗಾಯತ | ಶಿಕ್ಷಕರು | ಸಣ್ಣಉಪ್ಪಾರಹಳ್ಳಿ |
| ೭೧ | ಪೃಥ್ವಿರಾಜ ಎಂ.ಎಸ್. | ೨೭ | ಆದಿಕರ್ನಾಟಕ | ಶಿಕ್ಷಕ | ಮರಿಯಮ್ಮನಹಳ್ಳಿ |
| ೭೨ | ಸುರೇಶ್ ಎಂ. | ೫೦ | ಆದಿಕರ್ನಾಟಕ | ಶಿಕ್ಷಕ | ಎಂ.ಎಂ.ಹಳ್ಳಿತಾಂಡಾ |
| ೭೩ | ಬಿ.ಅಲ್ಲಾಭಕ್ಷಿ | ೫೮ | ಮುಸ್ಲಿಂ | ಶಿಕ್ಷಕ | ಮರಿಯಮ್ಮನಹಳ್ಳಿ |
| ೭೪ | ಡಿ.ಟಿ.ಬಸಪ್ಪ | ೫೫ | ಲಿಂಗಾಯತ | ಮುಖ್ಯಗುರುಗಳು | ಗೊಲ್ಲರಹಳ್ಳಿ |
| ೭೫ | ಬಿ.ಮಂಜುನಾಥ | ೫೬ | ವಾಲ್ಮೀಕಿ | ಮುಖ್ಯಗುರುಗಳು | ಮರಿಯಮ್ಮನಹಳ್ಳಿ |
| ೭೬ | ಪರಶುರಾಮ ಬಿ. | ೨೯ | ವಾಲ್ಮೀಕಿ | ಶಿಕ್ಷಕ | ಪೋತಲಕಟ್ಟೆ |
| ೭೭ | ಮಮತ ಜಿ. ಕಲ್ಮನಿ | ೫೦ | ಮುಸ್ಲಿಂ | ಶಿಕ್ಷಕ | ಇಂದಿರಾನಗರ |
| ೭೮ | ಅನಿತಾ ಎಂ.ಎಸ್. | ೨೬ | ಆದಿಕರ್ನಾಟಕ | ಶಿಕ್ಷಕ | ಗುಂಡಾ |
| ೭೯ | ಮಲ್ಲಯ್ಯ ಸಂಡೂರು | ೩೨ | ಆದಿಕರ್ನಾಟಕ | ಉಪನ್ಯಾಸಕರು | ನಂದಿಹಳ್ಳಿ |
| ೮೦ | ಉಮಾ ಹೆಚ್.ಎಂ. | ೩೪ | ಜಂಗಮ | ಶಿಕ್ಷಕರು | ತೋರಣಗಲ್ಲು |
| ೮೧. | ಬಿ.ಬಾಬು | ೩೭ | ನಾಯಕ | ಉಪನ್ಯಾಸಕರು | ಟಿ.ಬಿ.ಡ್ಯಾಂ |
| ೮೨. | ಅಬ್ದುಲ್ ಸಮದ್ | ೫೧ | ಮುಸ್ಲಿಂ | ಉಪನ್ಯಾಸಕರು | ಟಿ.ಬಿ.ಡ್ಯಾಂ |
| ೮೩. | ಗಂಗಲಾಪುರದ ವೀರೇಶ್ | ೩೪ | ಲಿಂಗಾಯತ | ಉಪನ್ಯಾಸಕರು | ಸಂಡೂರು |
| ೮೪. | ಟಿ. ರಘುಪ್ರಸಾದ್ | ೩೬ | ವಾಲ್ಮೀಕಿ | ಪ್ರಾಧ್ಯಾಪಕರು | ಮರಿಯಮ್ಮನಹಳ್ಳಿ |
| ೮೫. | ಸಿ. ಪ್ರಕಾಶ್ | ೪೮ | ಲಿಂಗಾಯತ | ಪತ್ರಕರ್ತರು | ಮರಿಯಮ್ಮನಹಳ್ಳಿ |
| ೮೬. | ಅರಳಿ ಕುಮಾರಸ್ವಾಮಿ | ೬೩ | ಲಿಂಗಾಯತ | ಪತ್ರಕರ್ತರು | ಸಂಡೂರು |
| ೮೭. | ಬಸವರಾಜ.ಡಿ. | ೪೦ | ನಾಯಕ | ಪತ್ರಕರ್ತರು | ಸಂಡೂರು |
| ೮೮. | ಜಿ.ವಿ.ಸುಬ್ಬರಾವ್ | ೪೮ | ಆರ್ಯವೈಶ್ಯ | ಪತ್ರಕರ್ತರು | ಮರಿಯಮ್ಮನಹಳ್ಳಿ |
| ೮೯. | ಕಿಚಡಿ ಕೊಟ್ರೇಶ್ | ೨೮ | ಲಿಂಗಾಯತ | ಪತ್ರಕರ್ತರು | ಮರಿಯಮ್ಮನಹಳ್ಳಿ |
| ೯೦. | ಎಚ್.ಎಸ್.ಹರಪ್ರಸಾದ್ | ೪೦ | ಬ್ರಾಹ್ಮಣ | ಪತ್ರಕರ್ತರು | ಮರಿಯಮ್ಮನಹಳ್ಳಿ |

| | | | | | |
|---|---|---|---|---|---|
| ೯೧. | ವಿ.ಎಂ.ನಾಗಭೂಷಣ | ೪೬ | ಜಂಗಮ | ಪತ್ರಕರ್ತರು | ಸಂಡೂರು |
| ೯೨. | ಕೋಳೂರು ಪ್ರಹ್ಲಾದ | ೪೮ | ಆದಿಕರ್ನಾಟಕ | ಪತ್ರಕರ್ತರು | ಸಂಡೂರು |
| ೯೩. | ಆರ್.ಶಿವರಾಮ್ | ೪೪ | ವಾಲ್ಮೀಕಿ | ಪತ್ರಕರ್ತರು | ಸಂಡೂರು |
| ೯೪. | ಬಸವರಾಜ ಬಣಕಾರ | ೪೪ | ಲಿಂಗಾಯತ | ಪತ್ರಕರ್ತರು | ಸಂಡೂರು |
| ೯೫. | ವೀರೇಂದ್ರಗೌಡ | ೪೨ | ಲಿಂಗಾಯತ | ಪತ್ರಕರ್ತರು | ಸಂಡೂರು |
| ೯೬. | ಸಿ.ಕೆ.ನಾಗರಾಜ | ೪೦ | ನಾಯಿಂದ | ಪತ್ರಕರ್ತರು | ಹೊಸಪೇಟೆ |
| ೯೭. | ಗುಡೇಕೋಟೆ ನಾಗರಾಜ | ೫೦ | ಲಿಂಗಾಯತ | ವಕೀಲರು | ಸಂಡೂರು |
| ೯೮. | ಆರ್.ಸೋಮಶೇಖರಗೌಡ | ೫೬ | ಲಿಂಗಾಯತ | ವಕೀಲರು | ಬಳ್ಳಾರಿ |
| ೯೯. | ಕೆ.ಮಹಮ್ಮದ್ ಅಯೂಬ್ | ೪೮ | ಮುಸ್ಲಿಂ | ವಕೀಲರು | ಸಂಡೂರು |
| ೧೦೦. | ಟಿ.ಎಂ.ಶಿವಕುಮಾರ್ | ೫೪ | ಜಂಗಮ | ವಕೀಲರು | ಸಂಡೂರು |
| ೧೦೧. | ಎಂ.ಶಶಿಕಾಂತ | ೩೬ | ಮೇದಾರ | ವಕೀಲರು | ಸಂಡೂರು |
| ೧೦೨. | ನಾಗರಾಜ ಎನ್ | ೩೬ | ಲಿಂಗಾಯತ | ವಕೀಲರು | ಲಕ್ಷ್ಮೀಪುರ |
| ೧೦೩. | ಪರಶುರಾಮ ಎನ್. | ೨೭ | ನಾಯಕ | ವಕೀಲರು | ಯಶವಂತನಗರ |
| ೧೦೪. | ಎಸ್.ಎಂ.ಶಿವಪ್ರಕಾಶ್ | ೪೮ | ಜಂಗಮ | ವಕೀಲರು | ಹೊಸಪೇಟೆ |
| ೧೦೫. | ಕೆಂಚಪ್ಪ ಕರೂರು | ೪೬ | ಕುರುಬ | ವಕೀಲರು | ಬಳ್ಳಾರಿ |
| ೧೦೬. | ವಿಷ್ಣುಕುಮಾರ್.ಬಿ. | ೪೦ | ಆರ್ಯವೈಶ್ಯ | ವಕೀಲರು | ಸಂಡೂರು |
| ೧೦೭. | ಪಲ್ಲವ ವೆಂಕಟೇಶ್ | ೪೬ | ಕುರುಬ | ಪ್ರಕಾಶಕರು | ಹೊಸಪೇಟೆ |
| ೧೦೮. | ಸಿದ್ಧರಾಮ ಕಲ್ಮಠ | ೪೫ | ಜಂಗಮ | ಕವಿಗಳು ಕ.ಸಾ.ಪ.ಜಿಲ್ಲಾಧ್ಯಕ್ಷರು | ಬಳ್ಳಾರಿ |
| ೧೦೯. | ಎಚ್.ಸೌಭಾಗ್ಯಲಕ್ಷ್ಮಿ | ೬೩ | ಲಿಂಗಾಯತ | ಲೇಖಕರು | ಹೊಸಪೇಟೆ |
| ೧೧೦. | ನವೀನ್‌ಕುಮಾರ್ | ೨೫ | ಲಿಂಗಾಯತ | ಅಭಿಯಂತರರು | ಬಳ್ಳಾರಿ |
| ೧೧೧. | ವಿ.ಟಿ.ಕಾಳೆ | ೮೩ | ಮರಾಠಾ | ಲೇಖಕರು | ಸಂಡೂರು |
| ೧೧೨. | ಬಸವರಾಜ.ರಾ.ಮಸೂತಿ | ೭೧ | ಕುರುಬ | ಲೇಖಕರು | ಸಂಡೂರು |
| ೧೧೩. | ಸಂಗಪ್ಪ ದುಂ.ಸಂತಿ | ೫೬ | ಲಿಂಗಾಯತ | ದೈ.ಶಿಕ್ಷಣಾಧಿಕಾರಿ | ಸಂಡೂರು |
| ೧೧೪. | ಸುರೇಂದ್ರಸ್ವಾಮಿ | ೩೫ | ಜಂಗಮ | ಅಧೀಕ್ಷಕರು | ಬಳ್ಳಾರಿ |

| | | | | |
|---|---|---|---|---|
| ೧೧೫. ರಾಘವೇಂದ್ರ.ಎನ್. | ೩೭ | ಗೊಲ್ಲರು | ದ್ವಿದ.ಸಹಾಯಕ | ಸಂಡೂರು |
| ೧೦೮ ಬಿ.ನಾಗನಗೌಡ | ೫೨ | ಲಿಂಗಾಯತ | ಕ.ಸಾ.ಪ ತಾ.ಅಧ್ಯಕ್ಷರು | ಸಂಡೂರು |
| ೧೧೬. ಹುಲುಗಪ್ಪ ನಾಯಕರ | ೩೨ | ವಾಲ್ಮೀಕಿ | ಪ್ರದ.ಸಹಾಯಕರು | ಬಳ್ಳಾರಿ |
| ೧೧೭ ಸಿ.ಎಂ.ಸಿಗ್ಗಾವಿ | ೬೭ | ವಾಲ್ಮೀಕಿ | ಕ.ಸಾ.ಪ.ಮಾಜಿ ಅಧ್ಯಕ್ಷರು | ಸಂಡೂರು |
| ೧೧೮ ಮಂಜುನಾಥ ಕೆ.ಎಂ. | ೨೬ | ಜಂಗಮ | ಕವಿಗಳು | ತೋರಣಗಲ್ಲು |
| ೧೧೯ ಯು.ನೀಲಮ್ಮ | ೨೮ | ಉಪ್ಪಾರ | ಕವಿಗಳು | ತೋರಣಗಲ್ಲು |
| ೧೨೦. ಜಿ.ಮೇಘರಾಜ | ೩೦ | ಗೊಲ್ಲರು | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೧. ಮೂಲಿಮನಿ ಸುರೇಶ್ | ೩೦ | ಲಿಂಗಾಯತ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೨. ದೌಲಸಾಬ್ | ೩೦ | ಪಿಂಜಾರ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೩. ಬಸವರಾಜ ಭೀಮಪ್ಪ | ೩೦ | ಕುರುಬ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೪. ಕುಮಾರ್.ಜೆ. | ೩೭ | ಬಂಜಾರ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೧೮ ಸಿ.ಕುಮಾರ್ | ೩೪ | ಲಿಂಗಾಯತ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೬. ಮೋಹನ್. | ೩೮ | ಆದಿಕರ್ನಾಟಕ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೭. ಶಿವಣ್ಣ.ಟಿ. | ೩೪ | ಆದಿಕರ್ನಾಟಕ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೮. ಶಿವಪ್ಪ | ೩೦ | ಚಲವಾದಿ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೨೯. ಭೋಜ್ಯಾನಾಯ್ಕ | ೩೭ | ಲಂಬಾಣಿ | ಸಂಶೋಧಕರು | ಕ.ವಿ.ವಿ.,ಹಂಪಿ |
| ೧೩೦. ರವೀಂದ್ರ ಬೆಟಗೇರಿ | ೩೨ | ಲಿಂಗಾಯತ | ಸಂಶೋಧಕರು | ಕ.ವಿ.ವಿ.,ಹಂಪಿ |

* * * *

